# ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣದ ಒಂದು ಅಧ್ಯಯನ (1881–1956)

(ಇತಿಹಾಸ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್.ನಿಬಂಧ)

ಸಂಶೋಧಕರು

ಶ್ರೀಮತಿ.ಕೆ.ಎಸ್.ಸವಿತಾ

ನೋಂ.ಸಂ. KRSMH-00371



ಮಾರ್ಗದರ್ಶಕರು

ಶ್ರೀಮತಿ ಶೈಲಾನಾಗರಾಜ್

ಕರ್ನಾಟಕ ಸಂಘ (0). ಮಂಡ್ಯ

ಎಂ.ಎಸ್.ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ

2008–2009

# ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣದ ಒಂದು ಅಧ್ಯಯನ (1881–1956)

(ಇತಿಹಾಸ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್.ನಿಬಂಧ)



ಸಂಶೋಧಕರು

**ಶ್ರೀಮತಿ.ಕೆ.ಎಸ್.ಸವಿತಾ**

ನೊಂ.ಸಂ. KRSMH-00371



ಮಾರ್ಗದರ್ಶಕರು

**ಶ್ರೀಮತಿ ಶೈಲಾನಾಗರಾಜ್**

ಕರ್ನಾಟಕ ಸಂಘ (ರಿ), ಮಂಡ್ಯ

ಎಂ.ಎಸ್.ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ

2008–2009

## ಮಾರ್ಗದರ್ಶಕರ ಪ್ರಮಾಣಪತ್ರ

**"ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣದ ಒಂದು ಅಧ್ಯಯನ (1818–1956)"** ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಗಾಗಿ ಶ್ರೀಮತಿ ಕೆ.ಎಸ್.ಸವಿತಾರವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ಮೈಸೂರು.

ದಿನಾಂಕ: 17-09-09.

ಶೈಲಾನಾಗರಾಜ್

**ಶ್ರೀಮತಿ ಶೈಲಾನಾಗರಾಜ್**
ಇತಿಹಾಸ ವಿಭಾಗ,
ಮಲ್ಲಮ್ಮ ಮರಿಮಲ್ಲಪ್ಪ ಕಲಾ ಮತ್ತು
ವಾಣಿಜ್ಯ ಪ್ರಥಮ ದರ್ಜೆ ಕಾಲೇಜು
ಮೈಸೂರು.

**ಸಂಶೋಧಕನ ಪ್ರಮಾಣ ಪತ್ರ**

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2008–09 ನೇ ಸಾಲಿಗೆ ಇತಿಹಾಸ ಎಂ.ಫಿಲ್ ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣದ ಒಂದು ಅಧ್ಯಯನ"** (1881–1956) ವಿಷಯವನ್ನು ಆಯ್ಕೆ ಮಾಡಿಕೊಂಡು ಶ್ರೀಮತಿ ಶೈಲಾನಾಗರಾಜ್‌ರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತ ಕಾಲಿಕೆಗಳಲ್ಲಿ ಪ್ರಕಟಿಸಿರುವುದಿಲ್ಲ ಮತ್ತು ಕನ್ನಡ ವಿಶ್ವವಿದ್ಯಾಲಯವು ನೀಡುವ ಎಂ.ಫಿಲ್.ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸ್ಥಳ: ಮೈಸೂರು

ದಿನಾಂಕ: 19/9/09

K. S. Sitha

**ಶ್ರೀಮತಿ ಕೆ.ಎಸ್.ಸವಿತಾ**

ಸಂಶೋಧಕ, ಚರಿತ್ರೆ ವಿಭಾಗ

ಕರ್ನಾಟಕ ಸಂಘ (ರಿ) ಮಂಡ್ಯ

ಎಂ.ಎಲ್.ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ.ಹಂಪಿ – ಮಾನ್ಯತೆ ಪಡೆದಿದೆ).

# ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣ : ಒಂದು ಅಧ್ಯಯನ 1881 – 1956

## ಪರಿವಿಡಿ

### ಅಧ್ಯಾಯ–1
### ಅಧ್ಯಯನದ ಸ್ವರೂಪ, ವಿಭಾಗೀಕರಣ ಮತ್ತು ವಿಧಾನ, ಆಕರಗಳು, ಮಹತ್ವ ಮತ್ತು ವ್ಯಾಪ್ತಿ



### ಅಧ್ಯಾಯ–2
### ಮೈಸೂರು ರಾಜ್ಯದ ಸ್ತ್ರೀಯರ ಸ್ಥಾನಮಾನ – ಸಾಮಾಜಿಕ ಪಿಡುಗು



### ಅಧ್ಯಾಯ–3
### ಸ್ತ್ರೀಯರ ಶಿಕ್ಷಣಾಭಿವೃದ್ಧಿ: ಹಿಂದುಳಿದ ಹೆಣ್ಣುಮಕ್ಕಳ ಶಿಕ್ಷಣ ಹಾಗೂ ನಿಮ್ನ ವರ್ಗದ ಹೆಣ್ಣು ಮಕ್ಕಳ ಶಿಕ್ಷಣ

## ಅಧ್ಯಾಯ – 4
## ಮಹಿಳೆಯರ ಉನ್ನತಿಗಾಗಿ ನಡೆದ ಸಾಮಾಜಿಕ ಚಳುವಳಿಗಳು



## ಅಧ್ಯಾಯ–5
## ಸ್ತ್ರೀಯರ ಉನ್ನತಿಯ ಸಾಮಾಜಿಕ ಮಸೂದೆಗಳು



## ಅಧ್ಯಾಯ–6
## ಉಪಸಂಹಾರ
## ಗ್ರಂಥಸೂಚಿ

# ಅಧ್ಯಾಯ–1
# ಅಧ್ಯಯನದ ಸ್ವರೂಪ, ವಿಭಾಗೀಕರಣ ಮತ್ತು ವಿಧಾನ, ಆಕರಗಳು, ಮಹತ್ವ ಮತ್ತು ವ್ಯಾಪ್ತಿ

1.1 ಪ್ರಸ್ತಾವನೆ

1.2 ಅಧ್ಯಯನದ ಸ್ವರೂಪ

1.3 ಅಧ್ಯಯನದ ವಿಭಾಗೀಕರಣ ಮತ್ತು ವಿಧಾನ

1.4 ಅಧ್ಯಯನದ ಆಕರಗಳು

1.5 ಅಧ್ಯಯನಕ್ಕೆ ಪೂರಕವಾದ ಸಾಹಿತ್ಯ ಸಮೀಕ್ಷೆ

1.6 ಅಧ್ಯಯನದ ಮಹತ್ವ ಮತ್ತು ವ್ಯಾಪ್ತಿ

### 1.1 ಪ್ರಸ್ತಾವನೆ

"ಚರಿತ್ರೆ ಅಗೋಚರ ಬೊಂದುವೊಂದರಿಂದ ತನ್ನ ಪಯಣವನ್ನು ಆರಂಭಿಸಿ ಅದರ ಸುತ್ತ ನಿಧಾನಕ್ಕೆ ಚಲಿಸುತ್ತದೆ. ಆದರೆ ಅದರ ವೃತ್ತಗಳು ಹಿಗ್ಗುತ್ತಾ ಹೋಗುತ್ತವೆ. ಅದರ ಚಲನೆ ಬಿರುಸಾಗಿ ಚೇತೋಹಾರಿಯಾಗುತ್ತಲೇ ದೇದೀಪ್ಯವಾದ ಉಲ್ಕೆಯಂತೆ, ನಕ್ಷತ್ರದಿಂದ ನಕ್ಷತ್ರಕ್ಕೆ ಜಿಗಿಯುತ್ತದೆ. ಈ ಜಿಗಿತ ಆಗಾಗ ತಾನು ಈ ಹಿಂದೆ ಸುತ್ತಿದ ವರ್ತುಲಗಳನ್ನೂ ಸೀಳುತ್ತಾ ಬ್ರಹ್ಮಾಂಡವನ್ನು ಮುಟ್ಟೇಬಿಟ್ಟಿತೇನೋ ಅನ್ನುವ ಆಗಿರುತ್ತದೆ" ಎಂದವರು ಫ್ರೆಡರಿಕ್ ಎಂಗೆಲ್ಸ್. ಪ್ರಸ್ತುತ ಸಂಶೋಧನಾ ವಿಷಯ "ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣದ ಒಂದು ಅಧ್ಯಯನ (1881–1956)"ವೂ ಸಹ ಅಂಥದ್ದೇ ರೀತಿಯಲ್ಲಿ ಸಾಗುವಂಥದ್ದು.

ಈ ಮೇಲಿನ ಮಾತುಗಳ ಹಿನ್ನಲೆಯಲ್ಲಿ ಅವಲೋಕಿಸಿದಾಗ ಮೈಸೂರು ಸಂಸ್ಥಾನದ ಚರಿತ್ರೆಯ ಸಂಶೋಧನೆ ಇನ್ನೂ ಆರಂಭಿಕ ಹಂತದಲ್ಲೇ ಇದೆ ಅನ್ನಿಸುತ್ತದೆ. ಹಾಗೆಂದು ಚರಿತ್ರೆಗೆ ಮೈಸೂರಿನ ಕೊಡುಗೆ ಅಲ್ಪವೆಂದೇನೂ ಅಲ್ಲ. ಹಲವಾರು ಏಳುಬೀಳುಗಳ ನಡುವೆಯೂ, ಮೈಸೂರಿಗೆ ಸಂಕೀರ್ಣ ಹಾಗೂ ವೈಭವಯುತವಾದ ಹಿನ್ನಲೆಯಿದೆ. ಯಾವುದೇ ಕ್ಷೇತ್ರದಲ್ಲಿರಲಿ ತನ್ನ ಪರಂಪರೆಯ ಬಗ್ಗೆ ಕನ್ನಡಿಗ ಗರ್ವಪಟ್ಟುಕೊಳ್ಳಬಹುದಾಗಿದೆ. ಆದರೆ ಇತಿಹಾಸಕಾರರು ಅಪ್ರಸ್ತುತವಾದ ಸಂಶೋಧನಾ ಬರವಣಿಗೆಯ ಚೌಕಟ್ಟುಗಳಿಗೆ ಜೋತುಬಿದ್ದು ಅರ್ಥಪೂರ್ಣವಾದ ಮೈಸೂರಿನ ಚರಿತ್ರೆಯನ್ನು ಪುನಾರಚಿಸುವಲ್ಲಿ ವಿಫಲರಾಗಿದ್ದಾರೆ. ಈ ಲೋಪಕ್ಕೆ ಹಲವಾರು ಬಲವತ್ತರ ಕಾರಣಗಳಿವೆ. ಹಳೇ ಮೈಸೂರು ಚರಿತ್ರೆಯ ಎಲ್ಲೆ ಕಟ್ಟುಗಳನ್ನು ನಿಷ್ಕರ್ಷಿಸುವುದೇ ಬಹು ಪ್ರಯಾಸವಾಗಿದೆ. ಮೈಸೂರನ್ನು ಒಂದು ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಘಟಕವನ್ನಾಗಿ ನೋಡದೆ, ಅದನ್ನು ಕೇವಲ ಒಂದು ಭೌಗೋಳಿಕ ಪ್ರದೇಶವನ್ನಾಗಿ ಬಹುತೇಕ ಬರಹಗಾರರು ಪರಿಭಾವಿಸಿದಂತಿದೆ. ಈ ಪರಿಕಲ್ಪನೆ, ಕರ್ನಾಟಕದ ಕೆಲವು ಭಾಗಗಳನ್ನು ಆಳಿದ ಕೆಲವು ರಾಜಮನೆತನಗಳು, ಇಂದಿನ ಮೈಸೂರಿನ/ಕರ್ನಾಟಕದ ಎಲ್ಲೆಗಳನ್ನು ಮೀರಿ ತಮ್ಮ ರಾಜ್ಯ ಸಾಮ್ರಾಜ್ಯಗಳನ್ನು ವಿಸ್ತರಿಸಿದ್ದಾಗಿನ ಚರಿತ್ರೆಯ ಬರವಣಿಗೆಗೆ ತೊಡಗಿದಾಗ ಸಮಸ್ಯೆಗಳನ್ನು ಹುಟ್ಟುಹಾಕಿದೆ. ಮಧ್ಯಕಾಲೀನ ರಾಜವಂಶವಾದ ಚಾಳುಕ್ಯರು ಮತ್ತು ಅದರ ನಂತರದ ವಿಜಯನಗರದ ಅರಸರ ಚರಿತ್ರೆ ಇದಕ್ಕೆ ಒಳ್ಳೆಯ ಉದಾಹರಣೆ. ಈ ಅರಸರನ್ನು ತಮ್ಮವರೆಂದು (ಕರ್ನಾಟಕದವರು–ಕನ್ನಡಿಗರು) ಹೇಳಿಕೊಂಡು, ಸಾಬೀತುಪಡಿಸುವ ಭರದಲ್ಲಿ ಚರಿತ್ರಕಾರರು ವರ್ಣಿಸಲು ಅಸಾಧ್ಯವಾದ ಸಮಸ್ಯೆಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಕರ್ನಾಟಕ ಮೂಲದ ಎಲ್ಲ

ಚರಿತ್ರಕಾರರೂ ಈ ಎರಡು ರಾಜಮನೆತನಗಳನ್ನು ಕುರಿತು ಚರ್ಚಿಸುವಾಗ ಚರಿತ್ರಕಾರನಿಗಿರಬೇಕಾದ ಕನಿಷ್ಟ ವಸ್ತುನಿಷ್ಟೆಯನ್ನು ಗಾಳಿಗೆ ತೂರಿ, ಇವರು ಕನ್ನಡಿಗರೆಂದು ವೀರಾವೇಶದಿಂದ ಹೇಳಿಕೊಂಡಿದ್ದಾರೆ. ವಿಚಿತ್ರವೆಂದರೆ ಕೃಷ್ಣದೇವರಾಯನನ್ನು ಆಂಧ್ರರು 'ಆಂಧ್ರಭೋಜ'ನೆಂದು ಹಾಡಿ ಹೊಗಳಿ ಆತನೇ ತೆಲುಗಿನ ಬಗ್ಗೆ ಹೇಳಿರುವ 'ದೇಶಭಾಷಲಂದು ತೆಲುಗು ಲೆಸ್ಸ' (ದೇಶೀ ಭಾಷೆಗಳಲ್ಲಿ ತೆಲುಗು ಭಾಷೆಯೇ ಉತ್ತಮ) ಎನ್ನುವ ಮಾತನ್ನೂ ಉದ್ಧರಿಸುತ್ತಾರೆ. ಕನ್ನಡಿಗರು ಕೃಷ್ಣದೇವರಾಯನನ್ನು 'ಕರ್ನಾಟಕ ಕುಲತಿಲಕ' 'ಕರ್ನಾಟಕ ರತ್ನ ಸಿಂಹಾಸನಾಧೀಶ್ವರ'ನೆಂದು ಬಣ್ಣಿಸುತ್ತಾರೆ.

ಹಲವಾರು ಭಾಷೆಗಳನ್ನಾಡುವ ಪ್ರದೇಶಗಳ ಒಡೆಯರಾಗಿದ್ದ ರಾಜ ಮಹಾರಾಜರುಗಳು ವಿದ್ವಜ್ಜನರನ್ನೂ ಸಂಪ್ರೀತಗೊಳಿಸಿ, ಆಯಾ ಸಾಹಿತ್ಯ ಸಂಸ್ಕೃತಿಗಳಿಗೆ ಪ್ರೋತ್ಸಾಹ ಕೊಟ್ಟಿರುವುದು ಚಾರಿತ್ರಿಕ ಸತ್ಯ. ಅದು ರಾಜಕೀಯ ಜರೂರು ಜಾಣ್ಮೆ ಕೂಡ ಹೌದು. ಪರಿಸ್ಥಿತಿ ಹೀಗಿರುವಾಗ ಅಂಥ ಅರಸರನ್ನು ಯಾವುದೋ ಒಂದು ಭಾಷೆಗೆ ಸೀಮಿತಗೊಳಿಸುವುದು ಅವರಿಗೆ ಚರಿತ್ರೆಗೆ ಮತ್ತು ಅದನ್ನು ಓದುವವರಿಗೆ ಮಾಡುವ ಅನ್ಯಾಯ, ಮೋಸವಾಗುತ್ತದೆ. ಆದರೆ ನಮ್ಮ ಹಲವಾರು ಚರಿತ್ರಕಾರರು ಈ ಬಗ್ಗೆ ಯೋಚಿಸಿದಂತಿಲ್ಲ.

ಇನ್ನು ಸಾಮಾಜಿಕ-ಆರ್ಥಿಕ ಚರಿತ್ರೆಗೆ ಬಂದರೆ ಸಮಸ್ಯೆಗಳ ಮಹಾಪೂರವೇ ಅಲ್ಲಿದೆ. ಬಹುಶಃ ಎಂದೂ ವಾಸ್ತವವಾಗಿರದ ಚಾತುರ್ವರ್ಣ ಸಾಮಾಜಿಕ ವ್ಯವಸ್ಥೆಯೇ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ವಿಶ್ಲೇಷಣೆಗೆ ನೆಲೆಯಾಗಿದೆ. ಹದಿನಾರನೇ ಶತಮಾನದವರೆಗಿನ ಈ ಚರಿತ್ರೆಯ ರಚನೆಗೆ ಈ ಸಂಶೋಧನಾ ಚೌಕಟ್ಟನ್ನು ಅಳವಡಿಸಿಕೊಳ್ಳಲಾಗಿದೆ. ಆದರೆ ವಿಜಯನಗರೋತ್ತರ ಕಾಲಕ್ಕೆ ಚೌಕಟ್ಟೂ ಇಲ್ಲ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಚರಿತ್ರೆಯ ಬರವಣಿಗೆಯೂ ಇಲ್ಲ! ವರ್ಣವ್ಯವಸ್ಥೆಯ ಬಗೆಗಿನ ಚರಿತ್ರಕಾರನ ದೌರ್ಬಲ್ಯ ಹಾಗೂ ಉತ್ಪಾದನಾ ಪ್ರಕ್ರಿಯೆ ಮತ್ತು ಜಾತಿಗಳಿಗೆ ಇರುವ ಅಂತರ್ ಸಂಬಂಧಗಳು ಹಾಗೂ ಸಮಾಜ ಸಂಸ್ಕೃತಿಗಳ ವೈವಿಧ್ಯ ಬಹುಮುಖತೆಗಳ ಬಗೆಗಿನ ಅಜ್ಞಾನ, ನಮಗೆ ದೋಷಪೂರಿತ ಚರಿತ್ರೆಯನ್ನು ಮಾತ್ರ ಕೊಟ್ಟಿದೆ. ಈ ಸಾಮಾಜಿಕ ಸಾಂಸ್ಕೃತಿಕ ವೈವಿಧ್ಯತೆಯ ವಿಶ್ಲೇಷಣೆ ಬಹುಸಂಖ್ಯಾತ ಜನಾಂಗದ ಅದರಲ್ಲೂ ಮಹಿಳಾ ಸಮುದಾಯದ ಬಗ್ಗೆ ಅರ್ಥಪೂರ್ಣ ಚರಿತ್ರೆಯನ್ನು ಕೊಡಬಲ್ಲದು. ಆದರೆ ಅವನ ಗೈರು

ಹಾಜರಿಯಲ್ಲಿ ನಮಗೆ ದೊರೆಯುವುದು ರಾಜಮಹಾರಾಜರ, ಅವರ ಯುದ್ಧಗಳ, ಶೌರ್ಯ ಸಾಹಸಗಳ, ವಿಧ್ವಂಸಕ ಕೃತ್ಯಗಳ ಚರಿತ್ರೆ ಮಾತ್ರ.[1]

ಸಮಾಜದ ಬಹುಸಂಖ್ಯಾತರ ಚರಿತ್ರೆ ಬರೆದಿರುವ ಕ್ರಮವನ್ನು ನೋಡಿದಲ್ಲಿ ಅಲ್ಲಿ ಅರ್ಧಸತ್ಯಗಳೇ ತುಂಬಿವೆ. ನಮಗೆ ಮಹಿಳೆಯರ ಬಗ್ಗೆ ದೊರೆಯುವುದು ವಿಕೃತ ಚರಿತ್ರೆ. ಮೇಲ್ವರ್ಗದ ಮಹಿಳೆಯರ ಬಗ್ಗೆ ಮಾತ್ರ ಉಲ್ಲೇಖಗಳು ಸಿಗುತ್ತವೆ. ಈ ಬೆರಳೆಣಿಕೆಯಷ್ಟು ಮಹಿಳೆಯರೇ ಮಾದರಿಗಳೆಂಬಂತೆ ಚಿತ್ರಿಸಲಾಗಿದೆ. ಇಡೀ ರಾಜ್ಯಗಳ ಅರ್ಥವ್ಯವಸ್ಥೆಯ ಬೆನ್ನೆಲುಬಾಗಿದ್ದ ರೈತರ ಜೀವನ ಕ್ರಮದ ಬಗ್ಗೆಯಾಗಲಿ, ರಾಜ್ಯಗಳನ್ನು ಕಟ್ಟಲು, ವಿಸ್ತರಿಸಲು, ರಾಜರನ್ನು ರಕ್ಷಿಸಲು ಹೋರಾಡಿದ ಅಪಾರ ಸಂಖ್ಯೆಯ ಸೈನಿಕರ ಬಗ್ಗೆಯಾಗಲಿ ನಮಗೆ ದೊರೆಯುವ ವಿವರಗಳು ತೃಣ ಮಾತ್ರ. ಅವೇನಿದ್ದರೂ ಅಡಿಟಿಪ್ಪಣಿಗಳಲ್ಲಿ ಅಥವಾ ಇಲ್ಲವೇ ಇಲ್ಲ.

ಈ ಹಿನ್ನಲೆಯಲ್ಲಿ ನಾವು ಅಂತರಾಷ್ಟ್ರೀಯ ಮಹಿಳಾ ದಿನವನ್ನು ಆಚರಿಸುತ್ತಿರುವುದಕ್ಕೆ ಅರ್ಥವೇನಾದರೂ ದೊರೆಯಬೇಕಾದರೆ ಮಹಿಳಾ ಚರಿತ್ರೆಯ ಬರವಣಿಗೆಯನ್ನು ರೂಢಿಸಿಕೊಳ್ಳಬೇಕಿದೆ. ಕಾರಣ ವರ್ಷಕ್ಕೊಮ್ಮೆ ಮಹಿಳೆಯ ಬಗೆಗೆ ಒಂದಿಷ್ಟು ಭಾಷಣ ಮಾಡಿ ವರದಿಯನ್ನು ತಯಾರಿಸಿ ಕಳಿಸಿದರೆ ನಮ್ಮ ಕೆಲಸ ಮುಗಿಯಿತೆಂದು ನಿರಾಳವಾಗುವ ಸಂದರ್ಭ ಇದಲ್ಲ. 1907ರ ಮಾರ್ಚ್ 8 ರಂದು ನ್ಯೂಯಾರ್ಕಿನ ಸಿದ್ಧ ಉಡುಪುಗಳ ಕಾರ್ಖಾನೆಯ 600 ಮಹಿಳೆಯರು ಬೀದಿಗಿಳಿದು ತಮ್ಮ ಹಕ್ಕಿಗಾಗಿ ಹೋರಾಟ ನಡೆಸಿದರು. 1910ರಲ್ಲಿ ನಡೆದ ಅಂತರ್‌ರಾಷ್ಟ್ರೀಯ ಮಹಿಳಾ ಸಮಾವೇಶದಲ್ಲಿ ಕ್ಲಾರಾ ಜೆಟ್ಕಿನ್ ಆ ದಿನವನ್ನು ಅಂತರ್ ರಾಷ್ಟ್ರೀಯ ಮಹಿಳಾ ದಿನ ಎಂದು ಘೋಷಿಸುವಂತೆ ನಿರ್ಣಯ ಮಂಡಿಸಿದ್ದರೆ ಫಲವಾಗಿ ಇಂದು ನಾವು ಅಂತರಾಷ್ಟ್ರೀಯ ಮಹಿಳಾ ದಿನವನ್ನು ಆಚರಿಸುತ್ತಿದ್ದೇವೆ. ಇದಕ್ಕೆ ಮೊದಲು ಮತ್ತು ಆನಂತರದಲ್ಲಿ ಆಕೆ ಮಹಿಳೆಯರ ಪರವಾಗಿ ಬಂಡವಾಳಶಾಹಿ ವ್ಯವಸ್ಥೆಯ ವಿರುದ್ಧ ಸಂಘಟಿಸಿ ಹೋರಾಡಿದರು. ಆಕೆಯ ಚಳವಳಿ, ಹೋರಾಟಗಳು, ಕ್ರಿಯಾಶೀಲತೆ ನಮಗೆ ಆದರ್ಶವಾಗಬೇಕಿದೆ. ಆಗ ಮಾತ್ರ ಮಾರ್ಚ್ 8ನ್ನು ಅಂತರರಾಷ್ಟ್ರೀಯ ಮಹಿಳಾ ದಿನವನ್ನಾಗಿ ಆಚರಿಸಬೇಕೆಂದು ಕ್ಲಾರಾ ಜೆಟ್‌ಕಿನ್ ಮಂಡಿಸಿದ ನಿರ್ಣಯ ಸಾರ್ಥಕವಾಗುತ್ತದೆ. ಹಾಗಾದರೆ, ಈ ಮಹಿಳಾ ಹೋರಾಟ ಎನ್ನುವುದು ಮೈಸೂರು ಸಂಸ್ಥಾನದಲ್ಲಿ ಹೇಗಿತ್ತು? ಅಂಥ ಚಳುವಳಿಗೆ ಕಾರಣೀಭುತರಾದವರು ಇದ್ದಾರೆಯೇ? ಸಾರ್ವಜನಿಕ ಜನ ಕಲ್ಯಾಣವೇ ತಮ್ಮ ಗುರಿ ಎಂಬ ಧ್ಯೇಯವನ್ನು ಇಟ್ಟುಕೊಂಡಿದ್ದ ಮೈಸೂರು ಸಂಸ್ಥಾಪಕ ಅನೇಕ ಮೇಧಾವಿ, ದಕ್ಷ ರಾಜರುಗಳು ಆಳ್ವಿಕೆಯನ್ನು ನಡೆಸಿ ಮೈಸೂರನ್ನು ಒಂದು

ಮಾದರಿ ಸಂಸ್ಥಾನವನ್ನಾಗಿ ಮಾಡಿದ್ದಾದರೂ ಹೇಗೆ? ಪುರುಷಪ್ರಧಾನ ವ್ಯವಸ್ಥೆಯು ಮೈಸೂರು ಸಂಸ್ಥಾನದಲ್ಲಿ ಕ್ರೂರವಾಗಿತ್ತೆ? ಅದರ ವಿರುದ್ಧ ಹೋರಾಟ ನಡೆಸಿದ ಮಹಿಳೆಯರ ಸಾಧನೆಗಳೇನು? ಮುಂತಾದ ಪ್ರಶ್ನೆಗಳನ್ನು ಚರ್ಚಿಸಲು ಈ ಸಂಶೋಧನೆ ಪ್ರಯತ್ನಿಸುತ್ತದೆ.

## 1.2 ಅಧ್ಯಯನದ ಸ್ವರೂಪ

21ನೇ ಶತಮಾನದ ಸ್ತ್ರೀ ಸಮೂಹವು ಒಂದೆಡೆ ಎಲ್ಲಾ ರಂಗಗಳಲ್ಲಿಯೂ ಸಾಕಷ್ಟು ಸಾಧನೆಯನ್ನು ತೋರುತ್ತಿದ್ದಳಾದರೂ, ಮತ್ತೊಂದೆಡೆ ಸಾಮಾನ್ಯ ಸ್ತ್ರೀಯು ತನ್ನೆಲ್ಲಾ ಹಕ್ಕುಗಳಿಂದ ವಂಚಿಸಲ್ಪಟ್ಟು ಶೋಷಣೆಗಳ ಬಿಗಿಮುಷ್ಠಿಯಲ್ಲಿ ನಲುಗುತ್ತಿದ್ದಾಳೆ. ಸಾಮಾಜಿಕ, ಆರ್ಥಿಕ, ವೈವಾಹಿಕ–ಹೀಗೆ ಎಲ್ಲಾ ರಂಗಗಳಲ್ಲೂ ಮೂಲೆಗುಂಪಾಗಿ ಒಂದು ರೀತಿಯಲ್ಲಿ ಎರಡನೆಯ ದರ್ಜೆಯ ಜೀವನವನ್ನು ನಡೆಸುವಂಥ ಹೀನ ಪರಿಸ್ಥಿತಿಯು ನಿರ್ಮಾಣವಾಗಿದೆ.[2] ಅದರಲ್ಲೂ ಬಹಳವಾಗಿ ಮಹಿಳೆಯು ಅನ್ಯಾಯ, ಶೋಷಣೆಗಳನ್ನು ಅನುಭವಿಸುವುದು ತನ್ನ ಅಭಿವೃದ್ಧಿ[3]ಗೆಂದು ಸರ್ಕಾರ ಜಾರಿಗೊಳಿಸುತ್ತಿರುವ ಕಾರ್ಯಕ್ರಮಗಳಿಂದಲೇ ಎಂದರೆ ಅಚ್ಚರಿ ಪಡಬೇಕಿಲ್ಲ. ಈ ಹಿನ್ನಲೆಯಲ್ಲಿ **"ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣದ ಒಂದು ಅಧ್ಯಯನ (1881–1956)"** ಎಂಬುದು ರೂಪು ತಳೆದಿದೆ.

ಭಾರತೀಯ ಸಮಾಜ ಮೂಲಭೂತವಾಗಿ ತಾರತಮ್ಯಗಳ ಸಮಾಜ, ಮತ, ವರ್ಣಜಾತಿ[4], ಲಿಂಗಗಳ ಆಧಾರಿತವಾಗಿ ಅಸಮಾನತೆಗಳನ್ನು ಸೃಷ್ಟಿ ಮಾಡಿಕೊಂಡಿರುವ ಸಮಾಜವಿದು. ಈ ಅಸಮಾನತೆಯನ್ನು ಇಲ್ಲಿನ ಧಾರ್ಮಿಕ ಮೌಲ್ಯ ಮತ್ತು ಆಚರಣೆಗಳು ಸಹಜ ಮತ್ತು ನಿಜವೆಂಬಂತೆ ಹಿಂದಿನಿಂದಲೂ ನಂಬಿಸುತ್ತಾ, ಬಲಗೊಳಿಸುತ್ತಾ ಬಂದಿವೆ. ಆದ ಕಾರಣ ಅನ್ಯಾಯವೆಂಬುದು ಭಾರತೀಯ ಸಮಾಜ ಪರಿವರ್ತನೆಯ ಒಂದು ಮಾರ್ಗದರ್ಶಿ ಸೂತ್ರ ಎಂಬುದನ್ನು ಅರಿತು ಸಂವಿಧಾನಾತ್ಮಕವಾಗಿ ಅದನ್ನು ಪರಿಹರಿಸಿಕೊಳ್ಳುವ ಕ್ರಮವನ್ನು ಇಲ್ಲಿನ ಸಮಾಜ ಸಂಘಟನೆಗಳು ಚಾಚೂ ತಪ್ಪದೆ ಅನುಸರಿಸುತ್ತಾ ಬಂದಿವೆ.

ಕೃಷಿ ಎಲ್ಲರೂ ಬಲ್ಲಂತೆ ಮಹಿಳೆಯು ಆವಿಷ್ಕರಿಸಿದ ಜ್ಞಾನಶಾಖೆ, ಭೂಮಿ, ಪರಿಸರ, ಸಂಗೋಪನೆಯ ಸಂಗತಿಗಳು ಮೊತ್ತಮೊದಲಿಗೆ ದಕ್ಕಿದ್ದೇ ಹೆಣ್ಣಿನ ಜ್ಞಾನಕ್ಕೆ. ಇದೇ ಮಾನವ ನಾಗರಿಕತೆಗೆ ಅಡಿಪಾಯವೂ ಹೌದು. ಆದರೆ 'ಉತ್ಪಾದನೆ'ಯೇ ಸಮಾಜದ ಮುಖ್ಯ ಕೇಂದ್ರವಾಗುವ

ಕಾಲಕ್ಕೆ ಹೆಣ್ಣಿನ 'ಒಡೆತನ'ವನ್ನು ಗಂಡಸು ಬಲವಂತವಾಗಿಯೇ ಕಿತ್ತುಕೊಂಡಿರುವುದಕ್ಕೆ ಎಲ್ಲಾ ನಾಗರೀಕತೆಗಳಲ್ಲಿಯೂ ಪುರಾವೆಗಳು ದೊರೆಯುತ್ತವೆ. 'ಹೆಣ್ಣಿನ' ಒಡತನವನ್ನು 'ಗಂಡು' ಲಪಟಾಯಿಸುವ ಚಾರಿತ್ರಿಕ ಘಟನೆಯನ್ನು ಪುರಾಣವಾಗಿಸಿಕೊಂಡು ಪೋಷಿಸಿಕೊಂಡು ಬಂದಿರುವ ಭಾರತೀಯ ಜನಪದ ಪುರಾಣವೊಂದನ್ನು ವಿಶ್ಲೇಷಣೆಗೆ ಒಡ್ಡಬಹುದು. ಆದಿಯಲ್ಲಿ ಮಹಾಮಾತೃದೇವತೆಯಾದ 'ಶಾಕಾಂಭರಿ' ಎನ್ನುವ ಆದಿದೇವತೆ ಇದ್ದಳಂತೆ. ಆಗಿನ್ನು ಗಂಡಿನ ಹುಟ್ಟೇ ಭೂಮಿಯಲ್ಲಿ ಇಲ್ಲದ ಕಾಲವದು. ಈ ದೇವತೆಗೆ ಎಷ್ಟೋ ಯುಗಗಳಾದ ಮೇಲೆ ತಾನು ಒಂಟಿ ಅನ್ನಿಸುವ ಭಾವನೆ ಬಂದು ಜೊತೆಗಾರನೊಬ್ಬನನ್ನು ಸೃಷ್ಟಿಸಿಕೊಳ್ಳುವ ಆಲೋಚನೆ ಬಂತು. ನೈಸರ್ಗಿಕವಾಗಿರಬಹುದಾದ ಹೆಣ್ಣಿನ ಈ ಆಲೋಚನೆಯಿಂದ ಆದಿಯ ಮೊದಲ ಗಂಡು ಸೃಷ್ಟಿಯಾದ ಹುಟ್ಟಿದ ತಕ್ಷಣ ಆತ ಏನು ತಾಯೇ ಅಂದ, ಅವನ ಮಾತು ದೇವತೆಯನ್ನು ದಿಗ್ಭ್ರಮೆಗೊಳಿಸಿತು. ಆಕೆಗೆ ಜೊತೆಗಾರ-ಸಂಗಾತಿ ಬೇಕಾಗಿತ್ತು. ಆದರೆ ಈತ ತಾಯೆ ಅನ್ನುತ್ತಿದ್ದಾನೆ, ಈಕೆ ಕೋಪಗೊಂಡು ಅವನನ್ನು ತನ್ನ ಉರಿಗಣ್ಣಿನಿಂದ ಸುಟ್ಟು ಬುದಿ ಮಾಡಿದಳಂತೆ. ಕೆಲ ದಿನಕಳೆದು ಮತ್ತೊಬ್ಬನನ್ನು ಸೃಷ್ಟಿಮಾಡಿದಳು. ಆತ ಯಾರಕ್ಕ ನೀನು? ಅಂದ ಆ ಸಂಬಂಧವು ಇವಳಿಗೆ ಇಷ್ಟವಾಗದೆ ಅವನಿಗೂ ಮೊದಲಿನವನದೇ ಗತಿಯಾಯಿತು. ಕೆಲಕಾಲದ ನಂತರ ಮುರನೇ ವ್ಯಕ್ತಿಯನ್ನು ಸೃಷ್ಟಿ ಮಾಡಿದಳು. ಅಷ್ಟೊತ್ತಿಗೆ ಕಾಲಪ್ರವಾಹದಲ್ಲಿ ಸಾಕಷ್ಟು ಜ್ಞಾನ ವಿಕಾಸವಾಗಿದ್ದಿರಬೇಕು. ಮೊದಲಿನವರ ದುರಂತ ಹಾಗೂ ಸಾವು ಈ ಹೊಸ ಗಂಡಿಗೆ ನೆನಪಿನಲ್ಲಿ ಬಂದಿರಬೇಕು. ಆತ ಸೃಷ್ಟಿಯಾದ ತಕ್ಷಣ ಯಾರು ನೀನು? ಅಂದ. ಈ ಹೆಣ್ಣಿಗೆ ಖುಷಿಯಾಯಿತು. ನನಗೆ ಬೇಕಾದ ಜತೆಗಾರ ನೀನೆ! ನನ್ನ ಸಂಗಾತಿಯಾಗಿ ನನ್ನೊಂದಿಗಿರು ಎಂದು ಆತನನ್ನು ಈಕೆ ವಿನಂತಿಸಿಕೊಂಡಳು. ಆಗ 'ಗಂಡಸು' ಆಲೋಚಿಸಿ, "ನೋಡು ನೀನು ಸೃಷ್ಟಿಕರ್ತೆ. ನಿನ್ನ ಹತ್ತಿರ ಕೊಲ್ಲುವ ಶಕ್ತಿ-ಸೃಷ್ಟಿಸುವ ಶಕ್ತಿ, ಸಂಗೋಪನೆಯ ಶಕ್ತಿಗಳೆಲ್ಲಾ ಸಂಚಯವಾಗಿವೆ. ನಿನ್ನ ಜತೆಗಾರನಾಗಲು ನನಗೆ ಅರ್ಹತೆ ಇಲ್ಲ. ನನ್ನನ್ನು ಬಿಟ್ಟುಬಿಡು" ಎಂದನಂತೆ. ಅವನ ಮಾತು ಈಕೆಗೆ ಸರಿ ಅನ್ನಿಸಿ, ತನ್ನಲ್ಲಿದ್ದ ಶಕ್ತಿಗಳಲ್ಲಿ ಯಾವುದು ಬೇಕೋ ತಗೋ ಎಂದಳು ಪ್ರೇಮದಿಂದ. ಆದರೆ ಆತ ಆಕೆಯ ಉತ್ಪಾದಕ 'ಹೆರುವ' ಶಕ್ತಿಯನ್ನು ಹೊರತುಪಡಿಸಿ, ಎಲ್ಲವನ್ನು ಒಂದೊಂದಾಗಿ ಅವಳಿಂದ ಕಿತ್ತುಕೊಂಡು, ಆಕೆಯನ್ನು ಕೊಂದ. ಆಕೆಯಿಂದ ಪಡೆದಿದ್ದ, ಸೃಷ್ಟಿಸುವ ಶಕ್ತಿಯಿಂದಲೇ ಈ ಹಿಂದೆ ಸತ್ತಿದ್ದ ಗಂಡುಗಳನ್ನು ಸೃಷ್ಟಿಸಿದ ಹಾಗೂ ಹೆಣ್ಣಿನ ಬೂದಿಯನ್ನು ಮೂರು ಭಾಗವಾಗಿಸಿ, ಅವುಗಳಿಂದ ಮೂವರು ಹೆಣ್ಣುಗಳನ್ನು ಸೃಷ್ಟಿಸಿ, ಆ ಮೂವರು 'ಸ್ತ್ರೀ'ಯರನ್ನು ತಮ್ಮ ಹೆಂಡತಿಯರನ್ನಾಗಿಸಿಕೊಂಡಂತೆ ಪುರಾಣ ವಿವರಿಸುತ್ತದೆ. ಆ ಮೂವರೇ ಆದಿ ದಂಪತಿಗಳೆಂದು

ಕರೆಯಲ್ಪಡುತ್ತಿರುವ, ಪೂಜಿಸಲ್ಪಡುತ್ತಿರುವ ಬ್ರಹ್ಮ-ಸರಸ್ವತಿ, ವಿಷ್ಣು-ಲಕ್ಷ್ಮಿ ಹಾಗೂ ಶಿವ-ಪಾರ್ವತಿ, ಭಾರತೀಯ ಸಾಮಾಜಿಕ ವ್ಯವಸ್ಥೆ ಸೃಷ್ಟಿಸಿರುವ ಈ ಪುರಾಣವು ಕೇವಲ ಪುರಾಣವಾಗಿರದೆ ಅದು ಸಮಾಜದ ಪ್ರಜ್ಞಾಪಾತಳಿಯಾಗಿ, ಒಂದು ಸಾಮಾಜಿಕ ಸಂರಚನೆಯನ್ನು ಸಂಘಟಿಸಿ ಉಳಿಸಿಕೊಳ್ಳುತ್ತದೆ.

ಅಲ್ಲದೆ, ಆದಿಯ ಶಕ್ತಿಸ್ವರೂಪಿಣಿಯಾಗಿದ್ದ[5] ಹೆಣ್ಣು ತನ್ನ ಸಹಜ ಸಾಂಗತ್ಯದ ಅಪೇಕ್ಷೆಯಿಂದ ಗಂಡಿಗೆ ಅಧೀನಳಾಗುವ, ತನ್ನ ಶಕ್ತಿಗಳನ್ನು ಕಳೆದುಕೊಂಡು ಪರತಂತ್ರಳಾಗುವ, ಸ್ವಾತಂತ್ರ್ಯದಿಂದ ವಂಚಿತಳಾಗುವ ಈ ಘಟನೆ ಪುರಾಣ ಕಥನವಾಗಿರದೆ, ಈ ದೇಶದಲ್ಲಿ ನಿರಂತರವಾಗಿ ನಡೆದುಕೊಂಡು ಬಂದಿರುವ 'ಲಿಂಗ' ತಾರತಮ್ಯದ ದಬ್ಬಾಳಿಕೆ ಮತ್ತು ಕುತಂತ್ರದ ಮೊಟ್ಟಮೊದಲ ದಾಖಲೆಯಾಗಿದೆ. ಇದನ್ನು ಕೇವಲ ಕಟ್ಟುಕತೆ ಎಂದು ತಿರಸ್ಕರಿಸಲಿಕ್ಕೆ ಬರುವುದಿಲ್ಲ. ಇಂದಿಗೂ ಭಾರತೀಯ ಸಮಾಜದ ಆರ್ಥಿಕ ಸಂಬಂಧಗಳನ್ನು ಗಟ್ಟಿಯಾಗಿ ಪೋಷಿಸುತ್ತಿರುವ ಗುರುತ್ವ ಕೇಂದ್ರವೇ ಈ ಪುರಾಣದ ಆಶಯದಲ್ಲಿದೆ. ಹೆಣ್ಣನ್ನು ಅಧೀನಳಾಗಿಸಿಕೊಳ್ಳಲು, ಅನಂತರದಲ್ಲಿ ನಿರಂತರವಾಗಿ ಬಲಹೀನತೆ ಮತ್ತು ಹೆಣ್ಣಿನ ಹೆರುವ ನೈಸರ್ಗಿಕ ಶಕ್ತಿಯನ್ನೇ ದೌರ್ಬಲ್ಯವಾಗಿಸಿದ ವ್ಯವಸ್ಥೆಯನ್ನು ಅತ್ಯಂತ ಕಠೋರವಾಗಿ ಪೋಷಿಸಿಕೊಂಡು ಬರಲಾಗಿದೆ.

ಪುರುಷಕೇಂದ್ರಿತ ಚಿಂತನೆಗಳನ್ನು ಪೋಷಿಸುವ ಪಿತೃಪ್ರಧಾನ ಸಮಾಜದ ಸ್ವರೂಪಕ್ಕೆ ಭಾರತೀಯ ಸಮಾಜ ಪಲ್ಲಟಗೊಂಡಿದೆ. ಹೆಣ್ಣಿನ ಪರತಂತ್ರ ಮತ್ತು ಅಧೀನತೆಯನ್ನು ಸಂಪೂರ್ಣವಾಗಿ 'ಮೌಲ್ಯೀಕರಿಸಿದ' ಹೆಣ್ಣಿನ ವ್ಯಕ್ತಿತ್ವಕ್ಕೆ ಸ್ವಂತಿಕೆಯನ್ನೇ ಇಲ್ಲವಾಗಿಸುವಷ್ಟರ ಮಟ್ಟಕ್ಕೆ ಅದನ್ನು ಕನಿಷ್ಟಗೊಳಿಸಿದ್ದು ಕೂಡ, ಸಾಮಾಜಿಕ ಹುನ್ನಾರವೇ.[6] ಈ ದೇಶ ಪ್ರಾತಃ ಕಾಲದಲ್ಲಿ ನೆನೆಯುವ ಮಹಾಪುರುಷರಾದ ದೇವತೆಗಳು[7], ಅಂಗೀರಸ-ವಶಿಷ್ಟ-ಭೃಗು-ಜಮದಗ್ನಿ-ಮನು ಇತ್ಯಾದಿ ಪುರುಷ ಶಿರೋಮಣಿಗಳು ತಮ್ಮ ತಮ್ಮ ದರ್ಶನ ಜ್ಞಾನಗಳಲ್ಲಿ ಹೆಣ್ಣನ್ನು ಅಧೀನವಾಗಿಸಿಕೊಂಡು, ಗಂಡು ಸಾಧಿಸಬಹುದಾದ ಜೌನತ್ಯಗಳನ್ನೇ ಧರ್ಮಶಾಸ್ತ್ರಗಳಾಗಿ ನೀಡಿದ್ದಾರೆ ಮತ್ತು ಅಂದಿನ ಅಧಿಕಾರ ವ್ಯವಸ್ಥೆ ಅಂದರೆ ರಾಜ್ಯಶಾಹಿ ಕೂಡ ಈ ವ್ಯವಸ್ಥೆಯನ್ನೇ ಪೋಷಿಸಿಕೊಂಡು ಬಂದಿದೆ. ಹೀಗೆ ಮೇಲಿನ ಕತೆಗೆ ಅನೇಕ ವ್ಯಾಖ್ಯಾನಗಳು ಸಾಧ್ಯ. ಅವುಗಳಲ್ಲಿ ಮುಖ್ಯವಾದದ್ದು 'ಸ್ತ್ರೀ' ಸಹಜವಾಗಿ ಅತ್ಯಂತ ಸಮರ್ಥಳು, ಆಕೆಯನ್ನು ಉದ್ದೇಶಪೂರ್ವಕವಾಗಿ

ನಿರಾಶ್ರಿತಳಾಗಿಸಿದ್ದು ಹಾಗೂ ಆಕೆಯನ್ನು ಹೆಂಡತಿಯಾಗಿಸಿಕೊಳ್ಳುವ ಮೂಲಕ ಪುನರ್ವಸತಿ ಕಲ್ಪಿಸಿದ್ದು ಪುರುಷ ಚರಿತ್ರೆ ತಾನೆ?[8]

ಹಾಗಾದರೆ, ಮೈಸೂರು ಅರಸರ ಕಾಲದ ಚರಿತ್ರೆ ಯಾವ ಸ್ವರೂಪದಲ್ಲಿತ್ತು? ವಿಜಯನಗರದ ಅರವೀಡು ವಂಶದ ಆಳ್ವಿಕೆಯ ಕಾಲದಲ್ಲಿ (1571–1646) ಕರ್ನಾಟಕದ ರಾಜಕೀಯದಲ್ಲಿ ಪ್ರಮುಖ ಪಾತ್ರ ವಹಿಸಿದ್ದ ಎರಡು ರಾಜಮನೆತನಗಳೆಂದರೆ ಕೆಳದಿಯ ನಾಯಕರು ಮತ್ತು ಮೈಸೂರಿನ ಒಡೆಯರು. ಒಡೆಯರು ವಿಜಯನಗರೋತ್ತರ ಕಾಲದಲ್ಲಿ ವಿಜಯನಗರ ಚಕ್ರಾಧಿಪತ್ಯದ ಸಂಪ್ರದಾಯವನ್ನು ಮುಂದುವರೆಸಿದರು. 1399ರಿಂದಲೇ ತಮ್ಮ ಆಳ್ವಿಕೆ ಆರಂಭವಾಯಿತೆಂದು ಒಡೆಯರು ಹೇಳಿಕೊಂಡಿದ್ದರೂ ಅವರು ಸ್ವತಂತ್ರರಾದುದು 16ನೇ ಶತಮಾನದಲ್ಲಿ. ಒಡೆಯರು ಬ್ರಿಟಿಷರ ಚಕ್ರಾಧಿಪತ್ಯದ ಕಾಲದಲ್ಲಿ ದೊಡ್ಡ ಭೂಪ್ರದೇಶವನ್ನು ಆಳಿದರಲ್ಲದೆ, ಕರ್ನಾಟಕ ಸಂಸ್ಕೃತಿಗೆ ಅಪಾರ ಕೊಡುಗೆ ನೀಡಿದರು. ಈ ವಂಶದ ಕೊನೆಯ ಅರಸರಾದ ಜಯಚಾಮರಾಜ ಒಡೆಯರ್ ಅವರು 1956ರವರೆಗೆ ರಾಜ್ಯದ ರಾಜ ಪ್ರಮುಖರಾಗಿದ್ದರು.

ಯದುರಾಯನಿಂದ 1399ರಲ್ಲಿ ಆರಂಭವಾದ ಒಡೆಯರ ಆಳ್ವಿಕೆ 1761ರಲ್ಲಿ ತಾತ್ಕಾಲಿಕವಾಗಿ ಅಂತ್ಯಗೊಂಡು ಮೈಸೂರು ರಾಜ್ಯ ಹೈದರಾಲಿಯ ವಶವಾಯಿತು.

ಹೈದರ್ ಆಲಿಯ ಪೂರ್ವಜರು ಪಂಜಾಬರಿಂದ ಗುಲ್ಬರ್ಗಕ್ಕೆ ವಲಸೆ ಬಂದವರು. ಹೈದರನ ತಂದೆ ಫತೇ ಮಹಮದ್ ಸಿರಾದ ನವಾಬನ ಸೈನ್ಯದಲ್ಲಿ ಸೈನಿಕನಾಗಿದ್ದ. ಕೋಲಾರ ಜಿಲ್ಲೆಯ ಬೂದಿಕೋಟೆಯಲ್ಲಿ 1721ರಲ್ಲಿ ಹೈದರನ ಜನನವಾಯಿತು. ಆತನ ಬಾಲ್ಯದ ದಿನಗಳು ಬಹಳ ಕಷ್ಟದಿಂದ ಕೂಡಿದ್ದವು. ಕೇವಲ ಏಳನೇ ವಯಸ್ಸಿನಲ್ಲಿ ತಂದೆಯನ್ನು ಕಳೆದುಕೊಂಡ ಈತ ಬೆಂಗಳೂರಿಗೆ ಬಂದು ತನ್ನ ಸೋದರಮಾವ ಇಬ್ರಾಹಿಮನ ಆಶ್ರಯದಲ್ಲಿದ್ದ. ಪ್ರಾಪ್ತ ವಯಸ್ಕನಾದೊಡನೆ ಮೈಸೂರಿನ ಸೈನ್ಯವನ್ನು ಸೇರಿಕೊಂಡ.

1749ರಲ್ಲಿ ಮೈಸೂರಿನ ಸೈನ್ಯ ದೇವನಹಳ್ಳಿಯನ್ನು ಮುತ್ತಿದಾಗ ಹೈದರನು ತನ್ನ ಧೈರ್ಯ ಮತ್ತು ಯುದ್ಧ ಕುಶಲತೆಯನ್ನು ಪ್ರದರ್ಶಿಸಿದ. ಇದನ್ನು ಕಂಡು ಮೆಚ್ಚಿದ ದಳವಾಯಿ ನಂಜರಾಜ ಹೈದರನನ್ನು ಸೈನ್ಯದ ತುಕಡಿಯೊಂದಕ್ಕೆ ನಾಯಕನನ್ನಾಗಿ ನೇಮಿಸಿದ. 1751ರಲ್ಲಿ ಮೈಸೂರಿನ ಸೈನ್ಯ

ತಿರುಚಿನಾಪಳ್ಳಿಯ ಮೇಲೆ ದಾಳಿ ಮಾಡಿತು. ಈ ಯುದ್ಧದಲ್ಲಿ ನಂಜರಾಜ ಸೋತರೂ ಹೈದರಿನಿಗೆ ಆ ಯುದ್ಧದಲ್ಲಿ ಭಾಗವಹಿಸಿದ್ದ ಇಂಗ್ಲೀಷರ ಮತ್ತು ಫ್ರೆಂಚರ ಯುದ್ಧ ತಾಂತ್ರಿಕತೆಯನ್ನು ತಿಳಿದುಕೊಳ್ಳುವ ಅವಕಾಶ ಸಿಕ್ಕಿತು.

ಹೈದರನ ಸಾಮರ್ಥ್ಯಕ್ಕೆ ಮೆಚ್ಚಿದ ಚಿಕ್ಕಕೃಷ್ಣರಾಜ ಒಡೆಯ ಆತನನ್ನು ದಿಂಡಿಗಲ್ಲಿನ ಫೌಜುದಾರನನ್ನಾಗಿ ನೇಮಿಸಿದ (1775). ಯುದ್ಧಗಳಲ್ಲಿ ಪ್ರಾಪ್ತವಾದ ಹಣ ಹಾಗೂ ಬಂಗಾರಗಳಿಂದ ಹೈದರನು ಆರ್ಥಿಕವಾಗಿ ಪ್ರಬಲನಾದ. ತನ್ನದೇ 500 ಮಂದಿ ಸಿಪಾಯಿಗಳ ಒಂದು ಪಡೆಯನ್ನು ರಚಿಸಿಕೊಂಡ. ಮರಾಠರು ಮೈಸೂರನ್ನು ಮುತ್ತಿದಾಗ ಹೈದರನು ಅವರನ್ನು ಹಿಮ್ಮೆಟಿಸಿದ. ಒಡೆಯರು ಆತನಿಗೆ "ಫತೇ ಹೈದರ್" ಬಿರುದು ನೀಡಿ ಗೌರವಿಸಿದರು. ಈ ಮಧ್ಯೆ ಮೈಸೂರಿನ ಖಜಾನೆ ಖಾಲಿಯಾಗಿತ್ತು. ಸೈನಿಕರ ವೇತನ ಕೊಡುವುದಕ್ಕೂ ಹಣವಿರಲಿಲ್ಲ. ಸೈನಿಕರು ದಂಗೆಯೇಳುವ ಸನ್ನಾಹದಲ್ಲಿದ್ದರು. ಆಗ ಹೈದರನು ಮೈಸೂರಿಗೆ ಧಾವಿಸಿ ಸೈನಿಕರಿಗೆ ಸಂಬಳ ನೀಡಿ ಅವರ ಒಲವನ್ನು ಗಳಿಸಿದ. ಅಸಮರ್ಥನಾದ ನಂಜರಾಜನನ್ನು ನಿವೃತ್ತಿಗೊಳಿಸಿದ. ತನ್ನ ವಿರುದ್ಧ ಪಿತೂರಿ ನಡೆಸಿದ ದಿವಾನ ಖಂಡೇರಾಯನನ್ನು ಬಂಧಿಸಿದ. 1761 ರಿಂದ ಹೈದರನು ಮೈಸೂರನ್ನು ಸರ್ವಾಧಿಕಾರಿಯಂತೆ ಆಳಿದ. ಆದರೆ ಆತ ಸಿಂಹಾಸನವನ್ನೇರಲಿಲ್ಲ. ಒಡೆಯರನ್ನು ಪದಚ್ಯುತಿಗೊಳಿಸಲಿಲ್ಲ. ತನ್ನನ್ನು ರಾಜ್ಯದ "ಕಾರ್ಯಕರ್ತ ಅಥವಾ ರಾಜಪ್ರತಿನಿಧಿ"ಯೆಂದು ಕರೆದುಕೊಂಡು ಆಡಳಿತ ನಡೆಸಿದ.

1799ರಲ್ಲಿ ನಡೆದ 4ನೇ ಮೈಸೂರು ಮಹಾಯುದ್ಧದ ಪರಿಣಾಮವಾಗಿ ಟಿಪ್ಪುಸುಲ್ತಾನ್ ಹತನಾದ ಮೇಲೆ ಮೈಸೂರು ರಾಜ್ಯವು 1831ರವರೆಗೆ ಮುಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆಗೆ ಒಳಪಟ್ಟಿತ್ತು. ಮುಮ್ಮಡಿ ಕೃಷ್ಣರಾಜ ಒಡೆಯರ ಅಶಕ್ತ ಆಡಳಿತದ ಪರಿಣಾಮವಾಗಿ 1831 ರಿಂದ 1881 ರವರೆಗೆ ಮೈಸೂರು ರಾಜ್ಯವು ಕಮಿಷನರ್‌ಗಳ ಆಳ್ವಿಕೆಗೆ ಒಳಪಟ್ಟಿತು.

ಸರ್ ಮಾರ್ಕ್ ಕಬ್ಬನ್ ಮತ್ತು ಲ್ಯೂವಿಸ್ ಬೌರಿಂಗ್ ಎಂಬ ಇಬ್ಬರು ಕಮಿಷನರ್‌ಗಳು ತಮ್ಮ ಅಧಿಕಾರದ ಅವಧಿಯಲ್ಲಿ ಮೈಸೂರಿನ ಪ್ರಗತಿಗೆ ಅನೇಕ ಸುಧಾರಣೆಗಳನ್ನು ಜಾರಿಗೊಳಿಸಿದರು. ಸರ್ ಮಾರ್ಕ್ ಕಬ್ಬನ್‌ರ ದಿನಗಳಲ್ಲಿ ಸಂಸ್ಥಾನದ ಆಡಳಿತವು ಸುವ್ಯವಸ್ಥಿತವಾದ ರೀತಿಯಲ್ಲಿ ನಡೆದಿದ್ದರಿಂದ ವಿಶ್ವವ್ಯಾಪಿ ಪ್ರಶಂಸೆಯನ್ನು ಪಡೆದಿತುತ. ಕಮಿಷನರುಗಳು ತಂದ ಸುಧಾರಣೆಗಳಲ್ಲಿ ಅತಿ ಮುಖ್ಯವಾದುವು ಗಳೆಂದರೆ, ಸುವ್ಯವಸ್ಥಿತ ಆಡಳಿತ ವ್ಯವಸ್ಥೆ, ವಿದ್ಯಾಭ್ಯಾಸಕ್ಕೆ

ಬುನಾದಿ ವಿಶೇಷವಾಗಿ ಪಾಶ್ಚಿಮಾತ್ಯ ಶಿಕ್ಷಣ ವ್ಯವಸ್ಥೆ, ಕಾನೂನು ಮತ್ತು ಶಿಸ್ತುಪಾಲನೆ, ಸಮರ್ಪಕವಾದ ಸಾರಿಗೆ ವ್ಯವಸ್ಥೆ ಮುಂತಾದವುಗಳ ಬಗ್ಗೆ ಕ್ರಮ ಕೈಗೊಳ್ಳುವುದರ ಮೂಲಕ ರಾಜ್ಯವು ಪ್ರಗತಿಪರ ದಿಕ್ಕಿನಲ್ಲಿ ಹೋಗಲು ಬುನಾದಿ ಹಾಕಿದರು.

ಕಮಿಷನರುಗಳ ಆಳ್ವಿಕೆಯ ನಂತರ ಮೈಸೂರು ಸಂಸ್ಥಾನದ ಆಡಳಿತವನ್ನು ಮತ್ತೆ ಒಡೆಯರ ಆಳ್ವಿಕೆಗೆ ಹಸ್ತಾಂತರಗೊಳಿಸಿದ್ದು ಚಾರಿತ್ರಿಕ ಅಂಶವಾಗಿದೆ. 10ನೇ ಚಾಮರಾಜ ಒಡೆಯರು 1881-1894 ರವರೆಗೆ ಅಧಿಕಾರ ನಡೆಸಿದರು. ಇವರು ತಮ್ಮ ಆಡಳಿತದ ಅಲ್ಪಾವಧಿಯಲ್ಲಿ, ರಂಗಚಾರ್ಲು, ಶೇಷಾದ್ರಿ ಅಯ್ಯರ್‌ರವರಂಥ ದಿವಾನರುಗಳ ಸಹಕಾರದಿಂದ ಆಡಳಿತದಲ್ಲಿ ಅನೇಕ ಕಾರ್ಯಗಳನ್ನು ಸಾಧಿಸಿದ್ದಾರೆ. ಪ್ರಮುಖವಾಗಿ ಪ್ರಜಾಪ್ರತಿನಿಧಿ ಸಭೆ, ವಿದ್ಯಾಭ್ಯಾಸಕ್ಕೆ ಬುನಾದಿ, ಹೆಣ್ಣು ಮಕ್ಕಳಿಗೆ ಹಾಗೂ ಹಿಂದುಳಿದ ವರ್ಗದವರಿಗೆ ಪ್ರತ್ಯೇಕ ಶಾಲೆಗಳನ್ನು ಸ್ಥಾಪಿಸಿದರು. ಸಾರ್ವತ್ರಿಕ ಶಾಲೆಗಳಿಗೆ ಬರಲು ದಲಿತರು ಹಿಂಜರಿದಿದ್ದರಿಂದ ಅವರಿಗೂ ಪ್ರತ್ಯೇಕವಾದ ಶಾಲೆಗಳನ್ನು ತೆರೆಯಲಾಯಿತು. ಹಳೆಯ ಅಂಚೆ ಪದ್ಧತಿಯನ್ನು ಬ್ರಿಟಿಷ್ ಅಂಚೆ ಪದ್ಧತಿಯ ಜೊತೆಗೆ 1889ರಲ್ಲಿ ಸಮನ್ವಯಗೊಳಿಸಿದರು. ಹಲವಾರು ಶಾಸನಗಳನ್ನು ಜಾರಿಗೆ ತಂದು ಸಮಾಜದ ಅನಿಷ್ಟ ಪದ್ಧತಿಗಳನ್ನು ತೊಡೆದುಹಾಕಲು ಶ್ರಮಪಟ್ಟ ಅಂಶವನ್ನು ಮೈಸೂರು ಚರಿತ್ರೆಯಲ್ಲಿ ಕಾಣಬಹುದಾಗಿದೆ.

10ನೇ ಚಾಮರಾಜ ಒಡೆಯರು 1894ರಲ್ಲಿ ಗತಿಸಿ ಹೋದ ಮೇಲೆ ವಾಣಿವಿಲಾಸ ಸನ್ನಿಧಾನರವರು ರೀಜೆಂಟ್ ಆಗಿ 1902 ವರೆಗೆ ರಾಜ್ಯಭಾರ ನಡೆಸಿದರು. ಅವರ ಕಾಲದಲ್ಲಿ ಅನೇಕ ಉಪಯುಕ್ತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಭೂಗರ್ಭಶಾಸ್ತ್ರ ಇಲಾಖೆಯನ್ನು ಸ್ಥಾಪಿಸುವುದರೊಂದಿಗೆ 1897-98ರಲ್ಲಿ ಗಣಿ ಕಾನೂನನ್ನು ಜಾರಿಗೆ ತಂದರು. ಕೋಲಾರದ ಚಿನ್ನದಗಣಿ ಕಾರ್ಯಾಭಿವೃದ್ಧಿ ಚಾಲನೆಗೊಂಡಿತು. ವ್ಯವಸಾಯ, ಅಬಕಾರಿ, ಶಿಕ್ಷಣ, ಕಾನೂನು, ಮಾರಿಕಣಿವೆ ಯೋಜನೆ ಮುಂತಾದ ಅನೇಕ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಪೂರೈಸಿದ್ದಾರೆ.

1902 ರಿಂದ 1940 ರವರೆಗೆ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಆಳ್ವಿಕೆಗೆ ಮೈಸೂರು ಒಳಪಟ್ಟಿತು. ಇವರ ಕಾಲದಲ್ಲಿ ಮೈಸೂರು ಸರ್ವತೋಮುಖವಾದ ಏಳಿಗೆ ಹೊಂದಿದುದು ಒಂದು ಸ್ಮರಣಾರ್ಥ ವಿಷಯವಾಗಿದೆ. ಇವರ ಆಳ್ವಿಕೆಯ ಕಾಲದಲ್ಲಿ ಅನೇಕ ಜನೋಪಾಕಾರ್ಯಗಳು

ಜರುಗಿದವು. ಅವುಗಳಲ್ಲಿ ಅತಿಮುಖ್ಯವಾದವುಗಳೆಂದರೆ ವಿದ್ಯಾಭ್ಯಾಸದ ಪ್ರಗತಿ. ವಿಶೇಷವಾಗಿ ಹೆಣ್ಣುಮಕ್ಕಳ ವಿದ್ಯಾಭ್ಯಾಸ. ಅಂದಿನ ಕಾಲದಲ್ಲಿ ರೂಢಿಯಲ್ಲಿದ್ದಂತಹ ಸತಿ ಸಹಗಮನ ಪದ್ಧತಿ, ದೇವದಾಸಿ, ವರದಕ್ಷಿಣೆ, ಜಾತಿ ನಿರ್ಮೂಲನೆ, ಹಿಂದುಳಿದವರ ಪುರೋಭಿವೃದ್ಧಿ ಮತ್ತು ಅವರ ವಿದ್ಯಾಭ್ಯಾಸದ ಪ್ರಗತಿ, ಪಂಚಮರ ವಿದ್ಯಾಭ್ಯಾಸ ಹಾಗೂ ಅವರ ಏಳ್ಗೆಗಾಗಿ ಹಾಕಿಕೊಂಡ ಅನೇಕ ಕಾರ್ಯಕ್ರಮಗಳು ಶ್ಲಾಘನೀಯವಾದವು. ಹಿಂದೂ ಕಾನೂನಿನ ತಿದ್ದುಪಡಿ, ಹೆಣ್ಣುಮಕ್ಕಳು ಚುನಾವಣೆಯಲ್ಲಿ ಸ್ಪರ್ಧಿಸಲು ಅವರ ಮೇಲಿದ್ದ ನಿರ್ಬಂಧವನ್ನು ತೊಡೆದುಹಾಕಿದರು. ಇದು ಇಂದಿಗೂ ಸ್ಮರಣೀಯವಾಗಿದೆ. ಆದ್ದರಿಂದಲೇ ಅವರ ಆಳ್ವಿಕೆಯನ್ನು ರಾಷ್ಟ್ರಪಿತ ಮಹಾತ್ಮಗಾಂಧಿಯವರು ಮೆಚ್ಚಿ ಅವರನ್ನು ರಾಜರ್ಷಿ ಎಂದು ಕರೆದದ್ದು ಚಾರಿತ್ರೆಯ ಪುಟದಲ್ಲಿ ಸೇರಿಕೊಂಡಿದೆ.

1940–1947 ರವರೆಗೆ ಸ್ವತಂತ್ರ ಪೂರ್ವದ ಆಡಳಿತವು ಯದುವಂಶದ ಕೊನೆಯ ಅರಸರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರ ಆಳ್ವಿಕೆಗೆ ಒಳಪಟ್ಟಿತು. ಇವರ ಕಾಲದಲ್ಲಿಯೂ ಸಹ ಹಿಂದಿನ ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಅನೇಕ ಸುಧಾರಣೆಗಳನ್ನು ಮುಂದುವರೆಸಲಾಯಿತು. ಇವರು ಕೂಡ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಮಹತ್ವ ನೀಡಿದ್ದರು. ವಿಶೇಷವಾಗಿ ಸ್ತ್ರೀಯರ ಕಲ್ಯಾಣಕ್ಕಾಗಿ ಅನೇಕ ಕಾರ್ಯಕ್ರಮಗಳನ್ನು, ಯೋಜನೆಗಳನ್ನು ಹಾಕಿಕೊಂಡದ್ದು ಕಂಡುಬರುತ್ತದೆ.

1947 ಆಗಸ್ಟ್ 15 ರಂದು ದೇಶವು ಸ್ವತಂತ್ರವಾದಾಗ ಮೈಸೂರು ಸಂಸ್ಥಾನವು ಮಹಾರಾಜರ ಆಳ್ವಿಕೆಯಿಂದ ವಿಮುಕ್ತವಾಗಿ ಸ್ವತಂತ್ರ ಭಾರತದ ರಾಜ್ಯವಾಗಿ ಉದಯಿಸಿತು. ಈ ಕಾಲದಲ್ಲಿಯೂ ಮಹಿಳಾ ಕಲ್ಯಾಣಕ್ಕೆ ಅದರಲ್ಲಿಯೂ ಸ್ತ್ರೀ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡುವುದರೊಂದಿಗೆ ಕಡ್ಡಾಯ ಶಿಕ್ಷಣವನ್ನು ಜಾರಿಗೊಳಿಸಲಾಯಿತು. ಸಮಾಜದ ಅನಿಷ್ಟ ಪದ್ಧತಿಗಳ ವಿರುದ್ಧ ಅನೇಕ ಕಾನೂನುಗಳನ್ನು ಜಾರಿಗೊಳಿಸಲಾಯಿತು. ಮಹಿಳೆಯೂ ರಾಜ್ಯಾಂಗ, ಕಾರ್ಯಾಂಗ ಮತ್ತು ಶಾಸಕಾಂಗಗಳಲ್ಲಿಯೂ ಅವಳಿಗೆ ದೊರಕಬೇಕಾದ ಸರಿಸಮಾನವಾದ ಸ್ಥಾನ ಹಾಗೂ ಅವಳು ಸ್ವಾವಲಂಬನೆ ಹೊಂದಲು ಬೇಕಾದ ಉದ್ಯೋಗಾವಕಾಶಗಳು, ವಿಶೇಷವಾಗಿ ಗೃಹ ಕೈಗಾರಿಕೆಗೆ ಉತ್ತೇಜನ ನೀಡಲಾಯಿತು. ಮಹಿಳಾ ಸಂಘಗಳ ಸ್ಥಾಪನೆ, ಮಹಿಳಾ ಸಹಕಾರ ಸಂಘಗಳು, ಮಹಿಳೆ ಮತ್ತು ಮಕ್ಕಳ ಕಲ್ಯಾಣಕ್ಕೋಸ್ಕರ ಪ್ರತ್ಯೇಕ ನಿರ್ದೇಶನಾಲಯದ ಸ್ಥಾಪನೆ ಇತ್ಯಾದಿಗಳನ್ನು ಆರಂಭಿಸಿ

ಮಹಿಳೆಯರು ತಲಾತಲಾಂತರದಿಂದ ಅನುಭವಿಸಿಕೊಂಡು ಬಂದಿದ್ದ ನೋವು, ಯಾತನೆ, ಸಂಕಟಗಳು, ಕಿರುಕುಳ, ಅನಿಷ್ಟ ಪದ್ಧತಿಗಳಿಂದ ವಿಮುಕ್ತಿ ಪಡೆಯುವುದರೊಂದಿಗೆ ಸ್ವತಂತ್ರ ಜೀವನ ನಡೆಸತೊಡಗಿದರು. ಸಮಾನ ಹಕ್ಕು ಬಾಧ್ಯತೆಗಳನ್ನು ಹೊಂದುವುದರಿಂದ ಶೋಷಣೆ ಹಾಗೂ ತುಳಿತದಿಂದ ಪಾರಾಗುವಂತಾಯಿತು.

ಈ ಎಲ್ಲಾ ಅಂಶಗಳನ್ನು ಅವಲೋಕಿಸಲು ಮೈಸೂರು ಸಂಸ್ಥಾನದಲ್ಲಿ ಸ್ತ್ರೀಯರ ವಿಮೋಚನೆ ಮತ್ತು ಸ್ತ್ರೀಯರನರ್ನು ಪ್ರಗತಿಪಥದಲ್ಲಿ ಒಯ್ಯಲು ಮೈಸೂರು ಮಹಾರಾಜರು ಹಾಗೂ ದಿವಾನರು ಕಾಲಕಾಲಕ್ಕೆ ಕೈಗೊಂಡ ಅನೇಕ ಗಣನೀಯ ಕಾರ್ಯಕ್ರಮಗಳು, ಯೋಜನೆಗಳು ಸುಧಾರಣೆಗಳು, ಹಾಗೂ ಅವರು ಜಾರಿಗೆ ತಂದ ಕಾನೂನು ಮತ್ತು ಶಾಸನಗಳು ಅತ್ಯಂತ ಶ್ಲಾಘನೀಯವಾಗಿವೆ. ತತ್ಸಬಂಧ ಪಡೆದ ಫಲಿತಾಂಶ, ಅದರಂತೆ ಅಂದಿನ ಮೈಸೂರಿನ ಪ್ರಜೆಗಳ ಪ್ರತಿಕ್ರಿಯೆ ಪರ ಹಾಗೂ ವಿರೋಧ, ವಿಶೇಷವಾಗಿ ಸನಾತನ ಧರ್ಮಗಳಿಂದ ಹಾಗೂ ಜಾತೀಯತೆಯ ಮತ್ತು ಮತ ಸಂಬಂಧ ಕಟ್ಟುಪಾಡುಗಳು, ಅಂದಿನ ಸಾಮಾಜಿಕ ವ್ಯವಸ್ಥೆ, ಸ್ತ್ರೀಯರ ಸ್ಥಾನಮಾನ, ಪಾಶ್ಚಿಮಾತ್ಯರ ಸಂಸ್ಕೃತಿ ಮತ್ತು ಶಿಕ್ಷಣದ ಪ್ರಭಾವ ಹಾಗೂ ಅಂದಿನ ಸಮಾಜ ಸುಧಾರಕರು ಸ್ತ್ರೀಯರ ಪುರೋಭಿವೃದ್ಧಿಗಾಗಿ ವಹಿಸಿದಂಥ ಪಾತ್ರ ಹಾಗೂ ಅವರು ಕೈಗೊಂಡ ಕ್ರಮಗಳು ಮತ್ತೊಮ್ಮೆ ಮೌಲ್ಯಮಾಪನಕ್ಕೊಳಪಡಿಸುವ ಜರೂರು ಎದುರಿಗಿದೆ. ಹಿಂದೂ ಸಮಾಜದ ಅನೇಕ ನ್ಯೂನತೆಗಳನ್ನು ಹೋಗಲಾಡಿಸಲು ಹಿಂದೂ ಮತದ ಸುಧಾರಣೆಗೋಸ್ಕರ ಹುಟ್ಟಿಲ್ಪಟ್ಟ ಸಂಘಸಂಸ್ಥೆಗಳಾದ ಬ್ರಹ್ಮಸಮಾಜ, ಆರ್ಯಸಮಾಜ, ಥಿಯೋಸಾಫಿಕಲ್ ಸೊಸೈಟಿ ಮತ್ತು ಅನೇಕ ಮಹಿಳಾ ಸಮಾಜಗಳು ಸ್ತ್ರೀಯರ ವಿಮೋಚನೆ ಹಾಗೂ ಅವರ ಉದ್ಧಾಋಕ್ಕೆ ಕೈಗೊಂಡ ಹೋರಾಟಗಳು, ಕಾರ್ಯಕ್ರಮಗಳು ಅನೇಕ. ಅದರಂತೆಯೇ ರಾಜ್ಯದ ಅನೇಕ ಮಹಾನ್ ವ್ಯಕ್ತಿಗಳು ಸ್ತ್ರೀಯರ ಕಲ್ಯಾಣಕ್ಕೋಸ್ಕರ ಹೋರಾಡಿದ ರೀತಿ, ಗಳಿಸಿದ ಸಾಧನೆಗಳನ್ನು ಅವಲೋಕನ ಮಾಡಬಹುದು. ಅನೇಕ ಮಹಿಳೆಯರು ಗಣನೀಯವಾಗಿ ಮತ್ತು ಸಕ್ರಿಯವಾಗಿ ಮೈಸೂರಿನ ಮಹಿಳಾ ಕಲ್ಯಾಣಕ್ಕೋಸ್ಕರ ದುಡಿದು ಗಳಿಸಿದಂಥ ಸಾಧನೆಗಳನ್ನು ಅವಲೋಕಿಸ ಬೇಕಾಗಿದೆ.

ಅಂದಿನ ಮೈಸೂರು ಸಂಸ್ಥಾನ ಮತ್ತು ಮೈಸೂರು ರಾಜ್ಯದ 1881 ರಿಂದ 1956 ರವರೆಗಿನ ಮಹಾರಾಜರ ಆಳ್ವಿಕೆಯಲ್ಲಿ ಮತ್ತು ಸ್ವಾತಂತ್ರ್ಯದಿಂದ ಈಚೆಗೆ ಪ್ರಜಾ ಸರ್ಕಾರವು ಕೈಗೊಂಡ ಅನೇಕ ಮಹಿಳಾ ಕಲ್ಯಾಣ ಕಾರ್ಯಕ್ರಮಗಳನ್ನು ತಿಳಿದು, ಅವಲೋಕಿಸಿ, ಪರಾಂಭರಿಸಿ, ವಿಮರ್ಶಿಸಿ,

ತುಲನಾತ್ಮಕವಾಗಿ ಪರಿಶೀಲಿಸಿ, ಎಷ್ಟರಮಟ್ಟಿಗೆ ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣ ಕಾರ್ಯಕ್ರಮಗಳು ಯಶಸ್ವಿಯಾದವು ಎಂಬುದನ್ನು ಮೌಲ್ಯೀಕರಣಕ್ಕೆ ಒಳಪಡಿಸಲಾಗುವುದು.

ವಿವಿಧ ವಿಶ್ವವಿದ್ಯಾನಿಲಯಗಳಲ್ಲಿ ಅನೇಕ ಸಂಶೋಧನೆಗಳು ಮೈಸೂರು ಸಂಸ್ಥಾನವನ್ನು ಅದರ ಬಹುರೂಪಿ ಆಯಾಮಗಳಾದ ರಾಜಕೀಯ, ಚಾರಿತ್ರಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ಕಲೆ ಮತ್ತು ವಾಸ್ತುಶಿಲ್ಪಗಳ ಕುರಿತಂತೆ ಸಂಶೋಧನೆ ನಡೆಸಿ ಮಹಾಪ್ರಬಂಧಗಳೋನ್ನು ಮಂಡಿಸಲಾಗಿದೆ. ಆದರೂ ಸಹ "ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣದ ಅಧ್ಯಯನ (1881–1956)"ಕ್ಕೆ ಸಂಬಂಧಿಸದಿಂತೆ ಇದುವರೆಗೂ ಸಂಶೋಧನೆ ನಡೆದಿಲ್ಲ. ಇದು ಮಹಿಳೆಯರಿಗೆ ಆಗಿರುವ ಅನ್ಯಾಯವೆಂದೇ ತಿಳಿಯಬೇಕಾಗಿದೆ. ಆದ್ದರಿಂದ ಅಲ್ಲಿ ಕಾಣುವ ಕೊರತೆಯನ್ನು ನೀಗಲು ಮತ್ತು ಮೈಸೂರು ಸಂಸ್ಥಾನವು ಒಂದು ಮಾದರಿ ರಾಜ್ಯವನ್ನಾಗಿ ಮಾಡಿದ್ದಿರಲ್ಲಿ ಮಹಿಳೆಯರ ಪಾಲು ಎಷ್ಟಿದೆ ಎಂಬುದನ್ನು ಪರಿಶೀಲಿಸಬೇಕಾಗಿದೆ. ಆದುದರಿಂದ ಈ ಎಲ್ಲಾ ಅಂಶಗಳನ್ನು ಅವಲೋಕಿಸಿ ಇಂದಿನ ಪರಿಸ್ಥಿತಿಗೆ ಅತ್ಯವಶ್ಯವಾಗಿ ಮಹಿಳಾ ವಿಮೋಚನೆಗೆ ಪೂರಕವಾಗಿ ಸಂಶೋಧನೆಯನ್ನು ಕೈಗೊಳ್ಳಲಾಗುತ್ತದೆ. "ಹೆಣ್ಣೊಬ್ಬಳಿಗೆ ಶಿಕ್ಷಣ ನೀಡುವುದೆಂದರೆ ಇಡೀ ಕುಟುಂಬಕ್ಕೆ ಶಿಕ್ಷಣ ನೀಡಿದಂತೆ" ಎನ್ನುವ ನಾಣ್ಣುಡಿಯಂತೆ ಮೈಸೂರು ಸಂಸ್ಥಾನದಲ್ಲಿ ಮಹಿಳಾ ಶಿಕ್ಷಣಕ್ಕೆ ದೊರೆತಿರುವ ಪ್ರಾಶಸ್ತ್ಯವನ್ನು ಅರಿಯಲು ಸಾಧ್ಯವಾಗುವಂತೆ ಸಂಶೋಧನಾ ವಿಧಾನವನ್ನು ಹಾಕಿಕೊಳ್ಳಲಾಗಿದೆ.

## 1.3 ಅಧ್ಯಯನದ ವಿಭಾಗೀಕರಣ ಮತ್ತು ವಿಧಾನ

ನಮ್ಮ ಇತಿಹಾಸದ ತುಂಬ ರಾಜರ ಕತೆಗಳೇ ತುಂಬಿಹೋಗಿವೆ. ಅರಮನೆಯನ್ನು ಕಟ್ಟಿದ ಕೂಲಿಗಳು, ರಾಣಿಯರ ದಾಸಿಯರು ಹಾಗೂ ಅವರ ಕುದುರೆ, ಆನೆಗಳಿಗೂ ಸೇವೆ ಮಾಡಿದ ಸೇವಕರ ಕತೆಗಳು ಎಲ್ಲೂ ಚರಿತ್ರೆಯಾಗೀ ಕಾಣುವುದಿಲ್ಲ. ಸತ್ಯವೆಂದರೆ, ಅವರೆಲ್ಲಾ ಇತಿಹಾಸ ಎಂದು ಕರೆಯಲಾಗುವ ದಾಖಲೆಯ ಪುಟಗಳಲ್ಲಿ ಇಲ್ಲವೇ ಇಲ್ಲ. ಮಹಿಳಾ ಇತಿಹಾಸದಲ್ಲಿ ಆಸಕ್ತಿ ಇರುವವರಿಗೆ ಈ ದೃಷ್ಟಿಯಿಂದಲೇ ಇತಿಹಾಸವನ್ನು ನೋಡಬೇಕಾಗಿದೆ. ಇತಿಹಾಸದ ಭಾಗವಾಗಿದ್ದ ಮಹಿಳೆಯರ ಪರಿಚಯವಾಗುವುದು ನಮ್ಮ ಶಾಲೆಯ ಪಠ್ಯಪುಸ್ತಕದಲ್ಲಿ. ಒನಕೆ ಓಬವ್ವ, ಝಾನ್ಸಿರಾಣಿ ಲಕ್ಷ್ಮೀಬಾಯಿ ಇವರೆಲ್ಲ "ವೀರ ಮಹಿಳೆಯರು ಗಂಡಸಂತೆ ದಿಟ್ಟತನ ತೋರಿದ ಧೈರ್ಯಸ್ಥೆಯರು" ಇತ್ಯಾದಿಯಾಗಿ! ಹೀಗಾಗಿ ಇತಿಹಾಸದಲ್ಲಿ ಸ್ತ್ರೀಯರು ಎಲ್ಲೋ ಕೆಲವು ವಿಶೇಷ ಉದಾಹರಣೆಗಳಾಗಿ, ಇವರೂ ಇದ್ದರು ಎಂದು ತೋರಿಸಲೆಂದಷ್ಟೇ ಕಣ್ಣಿಗೆ ಕಾಣಿಸುತ್ತದೆ. ಬೇರೆ

ಮಹಿಳೆಯರೂ ಆ ಕಾಲದಲ್ಲಿದ್ದರೂ, ಆ ಕಾಲದ ಇತಿಹಾಸವನ್ನು ಕಟ್ಟಲು ಅವರು ಶ್ರಮಿಸುತ್ತಿದ್ದರೂ, ಸುತ್ತಮುತ್ತಲ ಬದುಕಿಗೆ ರೂಪುಗೊಳ್ಳುತ್ತಾ, ರೂಢಿಸುತ್ತಾ, ಸ್ಪಂದಿಸುತ್ತಾ ಅವರೂ ಬದುಕಿದ್ದರೆಂಬ ಸತ್ಯವನ್ನೇ ಮರೆಸಿಬಿಡಲಾಗುತ್ತಿದೆ. ಉಪೇಕ್ಷೆಗೆ ಒಳಗಾಗಿರುವವರು ಹೆಂಗಸರು ಮಾತ್ರವಲ್ಲ, ಮುಖ್ಯವಾಹಿನಿ ಇತಿಹಾಸದಲ್ಲಿ ಕೆಳಸ್ತರಗಳ ಸಮುದಾಯಗಳನ್ನೂ ಸಹ ಅಂಚಿಗೆ ಸರಿಸಲಾಗುತ್ತದೆ. ಆಕಸ್ಮಾತ್ ಇದ್ದರೂ ಸಹ ಉಳ್ಳವರ ಬೇಳೆ ಬೇಯಲು ಬೇಕಾದ ಪದಾರ್ಥಗಳಾಗಿಯಷ್ಟೇ ಉಳಿದುಬಿಡುತ್ತಾರೆ.

ಹಾಗಾದರೆ, ಮಹಿಳಾ ಚರಿತ್ರೆಯನ್ನು ಅದರ ಎಲ್ಲಾ ಸಾಧಕ-ಬಾಧಕಗಳ ನಡುವೆ ಪುನರ್ರಚಿಸಲು ಸಾಧ್ಯವೇ? ಅಂಥ ಅಧ್ಯಯನಕ್ಕೆ ಅಗತ್ಯವಾದ ವಿಧಾನ ಯಾವುದು?

ಚರಿತ್ರೆಯ ಪುನಾರಚನೆಗೆ ಬಳಕೆಯಾಗುವ ಆಕರ ಸಾಮಗ್ರಿಯ ಬಗ್ಗೆಯೂ, ಜವಾಬ್ದಾರಿಯುತ ಚರಿತ್ರಕಾರನೊಬ್ಬ ತೀವ್ರ ಎಚ್ಚರವಹಿಸಬೇಕಾಗಿದೆ. ಆಕರಗಳು ವಿವಿಧ ಬಗೆಯಾಗಿವೆ. ಶಾಸನಗಳು, ಸಾಹಿತ್ಯ ಕೃತಿಗಳು, ಜನಪದ ಸಾಹಿತ್ಯ, ಐತಿಹ್ಯಗಳು ಹೀಗೆ ಈ ಸಾಮಗ್ರಿ ವಿವಿಧ ಭಾಷೆಗಳಲ್ಲಿದೆ. ಇದರಲ್ಲಿ ಒಂದಷ್ಟು ಚಾರಿತ್ರಿಕ ಬರವಣಿಗೆಯಲ್ಲಿ ಬಳಕೆಯಾಗಿದ್ದರೆ, ಹೇರಳವಾದ ಸಾಮಗ್ರಿ ಬಳಕೆಯಾಗದೆ ಉಳಿದಿದೆ. ಇತಿಹಾಸ ಕಾಲದ ವಿಂಗಡನೆ ಮಾಡುವುದೇ ತಲೆನೋವಾಗಿ ಪರಿಣಮಿಸಿದೆ. ಹದಿಮೂರನೇ ಶತಮಾನದವರೆಗಿನ ಕಾಲವನ್ನು ಸಾಮಾನ್ಯವಾಗಿ ಪ್ರಾಚೀನ ಯುಗವೆಂದು ಕರೆಯಲಾಗಿದೆ. ಈ ಶತಮಾನದ ಅಂತ್ಯಕ್ಕೂ, ಇಂದಿನ ಕರ್ನಾಟಕದ ಕೆಲವು ಭೂಭಾಗಗಳ ಮೇಲೆ ಮಲ್ಲಿಕಾಫರನ ದಂಡಯಾತ್ರೆ ನಡೆದುದರಕ್ಕೂ ತಾಳೆಯಾಗುತ್ತದೆ. ಮಧ್ಯಯುಗೀನ ಚರಿತ್ರೆಯನ್ನು ಹದಿನೇಳತೆ ಶತಮಾನದ ಕೊನೆಯವರೆಗೆ ಎಂದು ಭಾವಿಸಲಾಗಿದೆ. ಪ್ರಾಚೀನ ಕಾಲದ ಚರಿತ್ರೆಯ ಬರವಣಿಗೆಗೆ ಹೆಚ್ಚಾಗಿ ಶಾಸನ ಸಾಮಗ್ರಿ ಮತ್ತು ಸ್ವಲ್ಪ ಸಾಹಿತ್ಯಿಕ ಆಕರಗಳನ್ನೂ ಅವಲಂಬಿಸುವುದು ಸಾಮಾನ್ಯವಾಗಿದೆ. ಮಧ್ಯಯುಗೀನ ಚರಿತ್ರೆಗೆ ಹೆಚ್ಚಾಗಿ ಸಾಹಿತ್ಯ, ನಾಣ್ಯ ಮತ್ತು ಶಾಸನ ಇತ್ಯಾದಿ ಆಕರಗಳನ್ನೂ ಅವಲಂಬಿಸಲಾಗುತ್ತಿದೆ. ಆದರೆ ಇಲ್ಲಿ ಗಂಭೀರವಾಗಿ ಪರಿಗಣನೆಗೆ ತೆಗೆದುಕೊಳ್ಳದಿರುವುದೆಂದರೆ ಈ ಆಕರ ಸಾಮಗ್ರಿಯ ಸ್ವರೂಪ. ಈ ಆಕೆಗಳ ಸೃಷ್ಟಿಕರ್ತರು, ಜನಸಂಖ್ಯೆಯಲ್ಲಿ ಅಲ್ಪಪ್ರಮಾಣವಿದ್ದ ಮೇಲ್ಜಾತಿಯವರು ಮತ್ತು ಸಹಜವಾಗಿ ಈ ಆಕರಗಳು ಈ ವರ್ಗಗಳ ಸಂಸ್ಕೃತಿಯನ್ನೇ ಹೆಚ್ಚಾಗಿ ಪ್ರತಿಬಿಂಬಿಸುವುದು ಸಹಜ. ಆದರೆ ಈ ಅಲ್ಪಸಂಖ್ಯಾತರ ಸಂಸ್ಕೃತಿಯನ್ನೇ ಕರ್ನಾಟಕದ ಭಾರತದ ಸಮಗ್ರ ಜನತೆಯ ಸಂಸ್ಕೃತಿಯೆಂಬಂತೆ

ಚಿತ್ರಿಸಲಾಗಿದೆ. ಬಹುಸಂಖ್ಯಾತರ ಚರಿತ್ರೆಯನ್ನು ಒಳಗೊಂಡಿರುವ ಜಾನಪದ ಸಾಮಗ್ರಿ, ಸ್ಥಳಪುರಾಣಗಳು, ಐತಿಹ್ಯಗಳು ಮುಂತಾದ ಆಕರಗಳ ಕಡೆ ಈ ಚರಿತ್ರಕಾರರು ತಿರುಗಿಯೂ ನೋಡಿಲ್ಲ. ಇಲ್ಲಿಯವರೆಗೆ ಬರೆಯಲಾಗಿರುವ ಮೈಸೂರಿನ ಚರಿತ್ರೆಗಳಲ್ಲಿ ಕನ್ನಡ ಚರಿತ್ರೆಯ ಮೂಲ ನೆಲೆಯಾಗಿರುವ ಸಂಸ್ಕೃತಿಯ ವೈವಿಧ್ಯ, ಬಹುಮುಖತೆಗಳು ಪರಿಗಣನೆಗೇ ಬಂದಿಲ್ಲ. ಮಹಿಳೆಯರ, ಸೈನಿಕರ, ರೈತರ, ಶೂದ್ರಾತಿಶೂದ್ರರ ಆದಿವಾಸಿ-ಗುಡ್ಡಗಾಡಿನವರ ಚರಿತ್ರೆ ಇನ್ನೂ ಬರಬೇಕಾಗಿದೆ. ಇನ್ನು ಈ ದೇಶವನ್ನು ಆಳಿದ ಮುಸ್ಲಿಂ ರಾಜಮನೆತನಗಳ ಬಗ್ಗೆ ರಚಿತವಾಗಿರುವುದನ್ನೂ ನೋಡೋಣ. ಕರ್ನಾಟಕ ಸರ್ಕಾರವೇ ಬರೆಯಿಸಿ, ಪ್ರಕಟ ಮಾಡಿದ 'ಕರ್ನಾಟಕ ತ್ರೂ ದಿ ಏಜಸ್' ಬೃಹತ್ ಸಂಪುಟದಲ್ಲಿ ಎಲ್ಲ ಮುಸ್ಲಿಂ ಅರಸರ ಆಳ್ವಿಕೆಯ ಕಾಲವನ್ನೂ 23 ಪುಟಗಳಲ್ಲಿ ಮುಗಿಸಿದರೆ, ವಿಜಯನಗರ ಚರಿತ್ರೆಯೊಂದಕ್ಕೆ 131 ಪುಟಗಳನ್ನು ಮೀಸಲಿರಿಸಲಾಗಿದೆ. ಇತ್ತೀಚೆಗೆ ಕನ್ನಡ ವಿಶ್ವವಿದ್ಯಾಲಯದ ವತಿಯಿಂದ ಏಳು ಸಂಪುಟಗಳಲ್ಲಿ ಪ್ರಕಟವಾದ 'ಸಮಗ್ರ ಕರ್ನಾಟಕ ಚರಿತ್ರೆ'ಯಲ್ಲಿ ಎರಡು ಸಂಪುಟಗಳು ಪೂರ್ಣವಾಗಿ ಮುಸ್ಲಿಮ್ ಅರಸರ ಕಾಲಕ್ಕೆ ಮೀಸಲಾಗಿವೆ. 37 ವರ್ಷ ರಾಜ್ಯಭಾರ ಮಾಡಿದ ಹೈದರ್ ಆಲಿ, ಟಿಪ್ಪುಸುಲ್ತಾನ್ ಇಬ್ಬರ ಕಾಲಕ್ಕೆ 604 ಪುಟಗಳು ಮೀಸಲಾಗಿವೆ.

ಸುಮಾರು ಬರಹಗಳಲ್ಲಿ ಹಲವಾರು ಭಾಷೆ. ಸಂಸ್ಕೃತಿಗಳ ಸಾಮಾನ್ಯ ಜನ ಒಟ್ಟಾಗಿ ಸಾಮರಸ್ಯದಿಂದ ಬಾಳಿದ ಚರಿತ್ರೆಯನ್ನೇ ತಿರುಚಿರುವ ಪರಿಣಾಮವಾಗಿ ಆಧುನಿಕ ಕಾಲದಲ್ಲಿ ಈ ಸಾಮರಸ್ಯ. ಸೌಹಾರ್ದತೆಗಳಿಗೆ ಧಕ್ಕೆಯಾಗಿದೆ. ಚರಿತ್ರೆಯಲ್ಲಿ ಸಂಘರ್ಷಗಳು, ಯುದ್ಧ, ಹಿಂಸೆಗಳಿದ್ದವು, ನಿಜ. ಆದರೆ ಅವೆಲ್ಲಾ ಕೇವಲ ಕೋಮು ಮತ್ತು ಧರ್ಮಾಧಾರಿತ ಸಂಘರ್ಷಗಳಾಗಿರಲಿಲ್ಲ ಮತ್ತು ರಾಜಕೀಯ ಅಧಿಕಾರಕ್ಕಾಗಿ ನಡೆದವೂ ಅಲ್ಲ. ಹಾಗೆ ನೋಡಿದರೆ ರಾಜಕೀಯ ಅಧಿಕಾರಕ್ಕಾಗಿ ಕೋಮು ಮತ್ತು ಧರ್ಮಗಳನ್ನು ಬಳಸಿಕೊಳ್ಳಬೇಕಾದ ಅಗತ್ಯವೂ ಆಗ ಇರಲಿಲ್ಲ. ಆದರೆ ನಮ್ಮ ದುರ್ದೈವ. ವಿಜಯನಗರವನ್ನು 'ಹಿಂದೂ ಸಾಮ್ರಾಜ್ಯ' ಸಂಸ್ಕೃತಿಗಳ ಪುನರುತ್ಥಾನಕ್ಕಾಗಿಯೇ ಸ್ಥಾಪಿಸಲಾಯಿತೆಂದು ಹಲವಾರು ಚರಿತ್ರಕಾರರು ಬಣ್ಣಿಸಿದ್ದಾರೆ. ಹಾಗೆಯೇ ಶಾಹಿ ವಂಶಸ್ಥರಮತ್ತು ಹೈದರ್ ಟಿಪ್ಪುಗಳ ಆಳ್ವಿಕೆಯನ್ನು ಮುಸ್ಲಿಂ ಕೋಮುವಾದಿ, ಬರ್ಬರ ಆಳ್ವಿಕೆಯ ಕಾಲವೆಂದು ಚಿತ್ರಿಸಿ ಚರಿತ್ರೆಗೆ, ಜನರಿಗೆ ಅಪಚಾರವೆಸಗಲಾಗಿದೆ. ಇಲ್ಲದ ಅಥವಾ ಇದ್ದರೂ ಅಲ್ಪಸ್ವಲ್ಪ ಇದ್ದಿರಬಹುದಾದ ವೈದಿಕ-ಮುಸ್ಲಿಂ ಜಗಳವನ್ನೂ ವಿಪರೀತವಾಗಿ ಹಿಗ್ಗಿಸಿ ಕೋಮು ಬಣ್ಣ ಬಳಿಯಲಾಗಿದೆ. ವಿಧ್ವಂಸಕ ಕೃತ್ಯಗಳಿಗೆ ಹೋಲಿಸಿದರೆ, ಚರಿತ್ರೆಯಲ್ಲಿ

ಆಗಿಹೋಗಿರುವ ಕೃತ್ಯಗಳು ಏನೇನೂ ಅಲ್ಲ. ಮುಖ್ಯವಾಗಿ ಇಂದು ನಡೆಯುತ್ತಿರುವ ಈ ವಿಧ್ವಂಸಕ ಕೃತ್ಯಗಳ ಹಿಂದಿರುವ ದುರುದ್ದೇಶಗಳು ಆಗಿನವರಿಗೆ ಇದ್ದಿರಲು ಸಾಧ್ಯವೇ ಇರಲಿಲ್ಲ. ಏಕೆಂದರೆ ಅಂದಿನ ಪರಿಸ್ಥಿತಿಯೇ ತೀರಾ ಭಿನ್ನವಾಗಿತ್ತು. ಈ ಕಿಡಿಗೇಡಿ ಕೃತ್ಯಗಳು ಮಧ್ಯಕಾಲೀನ ಕರ್ನಾಟಕ ಭಾರತಗಳಲ್ಲಿ ನಡೆದಂತೆ ಬರೆಯಲಾಗಿದೆ. ಆದರೆ ಅದು ಅದರಿಂದ ಹಿಂದೆ ಮತ್ತು ಈಚೆಗೂ ಇತ್ತು ಹಾಗೂ ಇದೆ. ಮುಸ್ಲಿಮರು ಪ್ರಸಿದ್ಧ, ಪ್ರಾಚೀನ ಪೂಜಾಸ್ಥಾನಗಳನ್ನು, ಧಾರ್ಮಿಕ ಕೇಂದ್ರಗಳ ವಿನಾಶವನ್ನೇ ತಮ್ಮ ಗುರಿಯಾಗಿಟ್ಟುಕೊಂಡಿದ್ದರೆ, ಅವರ ಆಡಳಿತದಲ್ಲೇ ನೂರಾರು ವರ್ಷಗಳಿದ್ದ ಐಹೊಳೆ, ಬಾದಾಮಿ, ಪಟ್ಟದಕಲ್ಲು, ಸೋಮನಾಥಪುರ, ಶ್ರೀರಂಗಪಟ್ಟಣ, ಬೇಲೂರು, ಹಳೇಬೀಡು, ಶ್ರವಣಬೆಳಗೊಳ ಮತ್ತಿತರ ಜಾಗಗಳಲ್ಲಿರುವ ಗುಡಿಗೋಪುರಗಳು ಉಳಿಯಲು ಸಾಧ್ಯವಿತ್ತೇ?

ಹಾಗೆ ನೋಡಿದರೆ, ಈ ರೀತಿಯ ವಿಧ್ವಂಸಕ ಕೃತ್ಯಗಳು ಯಾವುದೇ ಒಂದು ಕೋಮಿಗೆ, ರಾಜಮನೆತನಕ್ಕೆ ಸೀಮಿತವಾಗಿರಲಿಲ್ಲ. ದೇವಸ್ಥಾನ, ಮತ್ತಿತರ ಧಾರ್ಮಿಕ ಕೇಂದ್ರಗಳು ಐಶ್ವರ್ಯಗಳ ತಾಣಗಳೂ ಆಗಿದ್ದವೆನ್ನುವುದನ್ನು ಮರೆಯಲಾಗದು. ಶತ್ರುಗಳ ದಾಳಿಗಳು ಅಲ್ಲಿದ್ದ ಸಂಪತ್ತಿಗಾಗಿ ನಡೆದವಾಗಿದವು. ಅದಕ್ಕೆ ಚರಿತ್ರೆಯಲ್ಲಿ ಹೇರಳ ಪುರಾವೆಗಳೂ ಇವೆ. ಕರ್ನಾಟಕದಲ್ಲೇ 18ನೇ ಶತಮಾನದಷ್ಟು ಈಚೆಗೆ ಶೃಂಗೇರಿ ಮಠವನ್ನೇ ದೋಚಿ, ಶಾರದಾಮಾತೆಯ ವಿಗ್ರಹವನ್ನು ತುಂಗೆಗೆ ಎಸೆದ ಉದಾಹರಣೆ ಇದೆ. ಅದೂ ಈ ದುಷ್ಕೃತ್ಯ ನಡೆದದ್ದು ಯಾರಿಂದ? ಆ ಪ್ರದೇಶವನ್ನು ಆಗ ಆಳುತ್ತಿದ್ದ ಮತ್ತು ನಂಜಮ್ಮ ಕೋಮುವಾದಿ ಚರಿತ್ರಕಾರರು 'ಮತಾಂಧ–ಕ್ರೂರಿ' ಎಂದೆಲ್ಲಾ ಬಣ್ಣಿಸಿರುವ ಟಿಪ್ಪುಸುಲ್ತಾನನಿಂದಲ್ಲ. ಬದಲಾಗಿ 'ಹಿಂದೂ ಸಾಮ್ರಾಜ್ಯ ರಕ್ಷಕ'ರೆಂದು ಇದೇ ಚರಿತ್ರಕಾರರು ಹಾಡಿ ಹೊಗಳುವ ಮರಾಠರ ಸೈನ್ಯದಿಂದ. ಶೃಂಗೇರಿ ಜಗದ್ಗುರುಗಳೇ ಈ ಬಗ್ಗೆ ಟಿಪ್ಪುವಿಗೆ ಬರೆದ ಹತ್ತಾರು ಪತ್ರಗಳು ಇವೆ, ಅಚ್ಚಾಗಿವೆ. 'ಮತಾಂಧ' ಟಿಪ್ಪೂ, ಸ್ವಾಮೀಜಿಗೆ ಸಾಂತ್ವನ ಹೇಳಿ ಆದ ನಷ್ಟವನ್ನು ತುಂಬಿಕೊಡುವ ಆಶ್ವಾಸನೆ ನೀಡಿ, ಹಾಗೆ ಆಜ್ಞೆ ಮಾಡಿದ್ದೂ ಇದೆ. ಹಾಗೆಯೇ ಸ್ವಾಮೀಜಿ, 'ಹಿಂದೂ ಧರ್ಮದ ಉದ್ಧಾರಕ'ರಾದ ಪೇಷ್ವೆಯ ವಿರುದ್ಧದ ಪ್ರತಿಭಟಿಸಿದ್ದಕ್ಕೂ ಪುರಾವೆ ಇದೆ. ವಸ್ತುಸ್ಥಿತಿ ಹೀಗಿರುವಾಗ, ಚರಿತ್ರೆಯನ್ನು ತಿರುಚಿ, ಸಿದ್ಧಾಂತ, ಸ್ವಾರ್ಥಗಳನ್ನೂ ಕಾಯ್ದುಕೊಂಡು ಜನರಿಗೆ ವಂಚನೆ ಮಾಡುವ ಹುನ್ನಾರ ಈ ಚರಿತ್ರೆಕಾರರಿಂದ ನಡೆದಿದೆ.

ಆಧುನಿಕ ಚರಿತ್ರೆಗೆ ಬಂದರೆ ಈ ಗೊಂದಲ ಮತ್ತಷ್ಟು ತೀವ್ರಗೊಳ್ಳುತ್ತದೆ. ಈ ಕಾಲಕ್ಕೆ ಸಂಬಂಧಿಸಿದ ಹಲವಾರು ಬಗೆಯ ಭಾಷೆಗಳ ಆಕರಗಳಿವೆ. ಮಿಗಿಲಾಗಿ ಈ ಕಾಲದ ಚರಿತ್ರೆಯ ಸಂಶೋಧನೆಯಲ್ಲಿ ತೊಡಗಿರುವ ಅನೇಕರು 'ಅನಧಿಕೃತ' ಎನ್ನಲಾಗುವ ಆಕರಗಳನ್ನು, ವಿವಿಧ ಬಗೆಯ ಸಾಹಿತ್ಯಿಕ ಆಕರಗಳನ್ನು ಆಕರಗಳೆಂದೇ ಪರಿಗಣಿಸುತ್ತಿಲ್ಲ. ಸ್ವಾತಂತ್ರ್ಯ ಚಳುವಳಿಯಲ್ಲಿ ಸಾಮಾನ್ಯ ಜನಕೋಟಿ ವಹಿಸಿದ ಪಾತ್ರದ ಬಗ್ಗೆ ಈಗ ಬಂದಿರುವ ಬಹುತೇಕ ಬರಹಗಳಲ್ಲಿ ಪ್ರಸ್ತಾಪವೇ ಇಲ್ಲ. ಅದೇ ರೀತಿ ಏಕೀಕೃತ ಕರ್ನಾಟಕದ ರಚನೆಗಾಗಿ ನಡೆದ ಚಳುವಳಿಯಲ್ಲಿ ಕೇವಲ ಕೆಲವೇ ರಾಜಕಾರಣಿಗಳು, ಸಾಹಿತಿಗಳು ಪಾಲ್ಗೊಂಡರೆಂಬಂತೆ ಬರೆಯಲಾಗಿದೆ. ಸಾಮಾನ್ಯ ಜನತೆಯ ಭಾಗವಹಿಸುವಿಕೆಯಿಲ್ಲದೆ ಈ ಬೃಹತ್ ಕಾರ್ಯ ಕೈಗೂಡಲು ಸಾಧ್ಯವಿರಲಿಲ್ಲ. ಆದರೆ ಈ ಬಗ್ಗೆ ಪ್ರಸ್ತಾಪವಿರುವುದೇ ಅಪರೂಪ.

ಆಧುನಿಕ ಕರ್ನಾಟಕ ಕಂಡ ಸಾಮಾಜಿಕ–ರಾಜಕೀಯ ಸಂಘರ್ಷಗಳನ್ನು ಇತ್ತೀಚೆಗೆ ಒಬ್ಬಿಬ್ಬರನ್ನು ಬಿಟ್ಟರೆ ಬಹುತೇಕ ಜನ ಪ್ರಸ್ತಾಪಿಸುವುದೇ ಇಲ್ಲ. ಸಾಮಾಜಿಕ ಸಮಾನತೆಗಾಗಿ ನಡೆದ ಹೋರಾಟ, ಚಳುವಳಿಗಳು ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಕ್ರೂರ ದಬ್ಬಾಳಿಕೆಯನ್ನು ಪ್ರತಿಭಟಿಸಿ ಸುಧಾರಣೆಗಾಗಿ ಸಂಘಟಿಸಲಾದ ಹೋರಾಟಗಳು, ಸ್ತ್ರೀ ವಿಮೋಚನಾ ಚಳುವಳಿಗಳು, ಪರಿಸರ ಚಳುವಳಿಗಳು, ಹಿಂದುಳಿದವರ, ದಲಿತರ ಹೋರಾಟಗಳು ಇತ್ತೀಚೆಗೆ ಮಾತ್ರ ಕೆಲವರ ಗಮನ ಸೆಳೆದಿದೆ. ಆದರೆ ಇವು ಚರಿತ್ರಾಕಾರರಿಂದ ಅಸಡ್ಡೆಗೆ ಒಳಗಾಗಿವೆ ಎನ್ನುವುದರಲ್ಲಿ ಸತ್ಯಾಂಶವಿದೆ. ಆದರೆ ಇವು ಪ್ರಸ್ತುತವಷ್ಟೇ ಅಲ್ಲ, ಅಗತ್ಯವಾಗಿ, ತುರ್ತಾಗಿ ಆದ್ಯತೆಯ ಮೇಲೆ ಚರಿತ್ರಕಾರರು ಗಮನ ಹರಿಸಬೇಕಾದ ಸಂಶೋಧನಾ ಕ್ಷೇತ್ರಗಳಾಗಿವೆ.

ಮೇಲಿನ ನ್ಯೂನತೆಗಳನ್ನು ಹೋಗಲಾಡಿಸಿಕೊಳ್ಳುವ ಮೂಲಕ ಮಾತ್ರ ಕರ್ನಾಟಕದ ಚರಿತ್ರೆಯನ್ನು ಅರ್ಥಪೂರ್ಣವಾಗಿ ರಚಿಸುವುದು ಸಾಧ್ಯ.

ಇತಿಹಾಸದಲ್ಲಿ ಕಾಣುವ ಸ್ತ್ರೀಯರನ್ನು ಚಿತ್ರಿಸಿರುವ ರೀತಿ ತೀರಾ ಕುತೂಹಲಕಾರಿಯಾದದ್ದು. ವಿಮೆನ್ ರೈಟಿಂಗ್ ಇನ್ ಇಂಡಿಯಾ ಕೃತಿಯ ಸಂಪಾದಕಿಯರಾದ ಸೂಸಿ ಥಾರು ಮತ್ತು ಕೆ.ಲಲಿತ ಒಂದು ಉದಾಹರಣೆ ಕೊಡುತ್ತಾರೆ. 1910ರಲ್ಲಿ ಬೆಂಗಳೂರು ನಾಗರತ್ನಮ್ಮ 18ನೆಯ ಶತಮಾನದ ತೆಲುಗು ಕವಯಿತ್ರಿ ಮುದ್ದುಪಳನಿಯ ರಾಧಿಕಾ ಸಾಂತ್ವನಮ್ ಎಂಬ ಕೃತಿಯನ್ನು ಮರು

ಮುದ್ರಿಸುತ್ತಾರೆ. ಮುದ್ದುಪಳನಿಯ ಕೃತಿ ಶೃಂಗಾರ, ಮಹಿಳೆಯ ಲೈಂಗಿಕ ಹಂಬಲ, ಪ್ರಣಯಗಳಿಂದ ತುಂಬಿರುವಂತಾದ್ದು. ಇದನ್ನು ಆಂಧ್ರಪ್ರದೇಶದ ಸಮಾಜ ಸುಧಾರಣಾ ಪಿತಾಮಹರೆಂದು ಹೆಸರಾದ ಕಂದುಕೂರಿ ವೀರೇಶಲಿಂಗಂ ಅವರು ಕಂಡು "ಇವು ವ್ಯಭಿಚಾರಿಕ ವಾಸನೆಯಿಂದ ತುಂಬಿದ ಕವನ"ಗಳೆಂದು ಅದನ್ನು ಮುದ್ರಿಸಿದ ನಾಗರತ್ನಮ್ಮ ಕೀಳು ಅಭಿರುಚಿಯ ಹೆಂಗಸೆಂದು ಖಂಡಿಸುತ್ತಾರೆ. ಸ್ತ್ರೀ ತನ್ನ ಲೈಂಗಿಕ ಹಂಬಲಗಳ ಬಗ್ಗೆ ದೇಹದ ಬಗ್ಗೆ ಮುಕ್ತವಾಗಿ ಮಾತನಾಡಿದಾಗೆಲ್ಲ ಅದು "ವ್ಯಭಿಚಾರ", "ಅನೈತಿಕ", "ಹಾದರ" ಎನ್ನಿಸಿಕೊಂಡುಬಿಡುತ್ತದೆ. ತನ್ನತನದ ಬಗ್ಗೆ ಜೋರಾಗಿ ಧ್ವನಿ ಎತ್ತಿ ಮಾತನಾಡಿದಾಗೆಲ್ಲ ಹೆಣ್ಣು ಬೇನಾಮಿ ಆಗುತ್ತಾಳೆ.

ಸ್ತ್ರೀವಾದಿ ಇತಿಹಾಸಕಾರರು "ಮೌಖಿಕ" ಇತಿಹಾಸ, ದಾರಿ ಹಿಡಿದದ್ದೇ ಈ ಮುಖ್ಯವಾಹಿನಿ ಇತಿಹಾಸದ ಹಿಡಿತದಿಂದ ತಪ್ಪಿಸಿಕೊಳ್ಳಲು. ಮಹಿಳೆಯರ ದೃಷ್ಟಿಕೋನದಿಂದ ಇತಿಹಾಸವನ್ನು ಕಟ್ಟಲು ಸಾಧ್ಯವೇ? ವಿವಿಧ ಕಾಲಮಾನಗಳಲ್ಲಿ ಜೀವಿಸಿದ ರಾಣಿಯರಲ್ಲದ ಸ್ತ್ರೀಯರ ಅನುಭವ, ಚಿಂತನೆ, ಒಳನೋಟಗಳಿಂದ ನಾವು ಇನ್ನೊಂದು ಲೋಕವನ್ನೇ ತೆರೆದಿಡಬಹುದು. ಇದನ್ನು (ಮೌನದ ಭಾಷೆಗೆ ಕಿವಿಗೊಡುವುದು) ಎಂದು ಕರೆಯಲಾಗುತ್ತದೆ. ಹಲವರು ಶತಮಾನಗಳಿಂದ ಇತಿಹಾಸದ ರೀತಿಗಳಲ್ಲಿ ಪ್ರಭುತ್ವದ ಪ್ರಹಾರ ಮತ್ತು ಸಮಾಜದ ತುಳಿತಗಳನ್ನು ದಿನನಿತ್ಯದ ಬದುಕಿನಲ್ಲಿ ನಮ್ಮ ಹಾಡು-ಹಸೆ, ಕತೆಗಳಲ್ಲಿ ಪ್ರಶ್ನಿಸುತ್ತಾ ಸೃಜನಶೀಲವಾಗಿ ಬದುಕಿದ ಮಹಿಳೆಯರನ್ನು ಕುರಿತು ಬರೆಯಬೇಕಾಗಿದೆ.

ಭಾರತದಲ್ಲಿ ಸ್ತ್ರೀಯರ ಇತಿಹಾಸವನ್ನು ಹಿಡಿದಿಡುವುದು ಕಷ್ಟಕರವಾದ ಕೆಲಸ. ಭಾರತದಲ್ಲಿ "ಹೆಣ್ಣಾಗಿ" ಬಾಳುವ ಬವಣೆ ವರ್ಗ, ಜಾತಿ, ಪಂಗಡಗಳ ಅನುಭವಗಳ ಜೊತೆ ಜೊತೆಯಲ್ಲೇ ಬರುತ್ತದೆ. ಸಮಾನತೆಯ ಪರಿಕಲ್ಪನೆ, ಹಿಂಸೆ, ನೋವಿನ ಅನುಭವಗಳು, ತನ್ನತನ ಸ್ಥಾಪಿಸುವ ರೀತಿಗಳು, ಖುಷಿಗಳು ಇವೆಲ್ಲಾ ಬೇರೆ ಬೇರೆ ವರ್ಗ, ಜಾತಿಯ ಮಹಿಳೆಯರಿಗೆ ಬೇರೆಬೇರೆಯಾಗಿರುತ್ತದೆ. ಹೆಣ್ಣಿನ ಬದುಕೇ, ಲಿಂಗ, ವರ್ಗ, ಜಾತಿಯ ಸಂಕೀರ್ಣ ಮಿಶ್ರಣ. ಹೀಗಾಗಿ ಇಲ್ಲಿ 'ಸ್ತ್ರೀ ಇತಿಹಾಸ' ಎಂಬುದಿಲ್ಲ. ಇದ್ದರೆ, 'ಸ್ತ್ರೀಯರ ಇತಿಹಾಸಗಳು' ಇರಲು ಸಾಧ್ಯ.

ನಾಗರತ್ನಮ್ಮ, ಮುದ್ದುಪಳನಿ, ಸಿದ್ದೇಶ್ವರಿದೇವಿಯಂತಹ ಹಲವಾರು ಸ್ತ್ರೀಯರ ಇತಿಹಾಸ ಬರೆಯುತ್ತಾ ಹೋದಂತೆ ಈ "ಮಹಾರಾಜರ" ಇತಿಹಾಸದ ಒಳ ಅರ್ಥಗಳು ಗೋಚರವಾಗುತ್ತವೆ.

ಆಗ ಮಹಿಳೆಯ ದುಡಿಮೆಗೆ ಸ್ವಲ್ಪ ಮಟ್ಟಿಗಿನ ಬೆಲೆಯಾದರೂ ದೊರೆಯಬಹುದು. ಫ್ರೆಂಚ್ ಚಿಂತಕ ಮಿಶೆಲ್ ಫುಕೋ ಹೇಳುವಂತೆ ಕ್ಷೀಣವಾಗಿ ಮಿನುಗುತ್ತಿರು ಕನಿಷ್ಟ ಮಟ್ಟಿಗಿನ "ಸತ್ಯ"ವೂ ಸಹ ವಿಶಾಲಾರ್ಥದಲ್ಲಿ ರಾಜಕೀಯ ಶಕ್ತಿಗಳಿಂದ ರೂಪಿಸಲ್ಪಟ್ಟಿರುವಂತಹದ್ದು. ಆದ್ದರಿಂದ, ತಳಸ್ತರದ ಇತಿಹಾಸ ಅಥವಾ ಸ್ತ್ರೀ ನೆಲೆಯಲ್ಲಿ ಇತಿಹಾಸ ಎನ್ನುವುದು ನಿರಂತರ ಬದುಕಿನ ಪ್ರಕ್ರಿಯೆಯಲ್ಲಿ ಆಗುವಂಥದ್ದು. ಆದ್ದರಿಂದಲೇ, ಈ ಪ್ರಕ್ರಿಯೆಯಲ್ಲಿ ಬದುಕೆಂಬುದು ಬರೆಸಿಕೊಳ್ಳಲು, ಪ್ರಕಟಪಡಿಸಿಕೊಳ್ಳಲು ಕಾಯುತ್ತಿರುವುದಿಲ್ಲ. ಬರೆಯಬಲ್ಲಂತಹ ಬದುಕು ಎಲ್ಲರಿಗೂ ಇರುವುದಿಲ್ಲ. ಯಾರ ಬದುಕು ಬರೆಯಲು ಯೋಗ್ಯ ಎಂದು ನಿರ್ಧರಿಸುವುದೂ ಸಹ ಸಾಮಾಜಿಕ ಮತ್ತು ಸಾಂಸ್ಕೃತಿಕ ಶಕ್ತಿಗಳೇ. ಮೌನವಾಗಿರಬೇಕಾದ, ಉದ್ದೇಶಪೂರ್ವಕವಾಗಿ ತನ್ನನ್ನು ಮರೆಯಾಗಿಸಿಕೊಳ್ಳುವ ಅಪ್ಪಟ ಗೃಹಿಣಿ ಗುಣವಿರಬೇಕಾದ ಹೆಣ್ಣೊಬ್ಬಳು "ಇದು ತನ್ನ ಬದುಕು" ಎಂದೋ ಅಥವಾ "ಇದು ಇದ್ದ, ಇಲ್ಲವಾದ ಅಥವಾ ಇದ್ದಿರಬಹುದಾದ ನಾನು" ಎಂದು ಹೇಳುವ ಧೈರ್ಯ ತೋರುವುದು ಸರ್ವಥಾ ಸಲ್ಲ. ಹೆಣ್ಣಿನ ಮೌನದ ತಳಗಟ್ಟಿನ ಮೇಲೆಯೇ ಚಕ್ರಾಧಿಪತ್ಯಗಳು ಕಟ್ಟಲ್ಪಡುವುದು. ವರ್ಜೀನಿಯಾ ವೂಲ್ಫ್ ಹೆಣ್ಣು ಅನುಭವಿಸುವ ಎರಡು ಬಗೆಯ ಗಡೀಪಾರಿನ ಬಗ್ಗೆ ಬರೆಯುತ್ತಾಳೆ. ಒಂದು ಹೊರಗಿನ ಬದುಕಿನಿಂದ ಸ್ಪಷ್ಟವಾಗಿ ಗಡೀಪಾರದ ಸ್ಥಿತಿ ("ಅವ ಹರಿಕಾರ". ನಾನೋ ಬರೀ ಹೆಣ್ಣು. ಅವ ರಾಜಬೀದಿ, ನಾನೊಂದು ಹುಲ್ಲುಹಾದಿ"). ಇನ್ನೊಂದು ಅಂತರ್ಗತವಾಗಿಸಿಕೊಂಡ ಗಡೀಪಾರಿನ ಮನಸ್ಥಿತಿ. ("ಅವ ದುಪ್ಪಟ್ಟಾಗಿ ಕಾಣಿಸುವಂತಹ ಕನ್ನಡಿಯಾಗಿ ನಾನು ಒದಗಿ ಬರಬೇಕಲ್ಲ!") ವೂಲ್ಫಳ ಪ್ರಕಾರ ಎರಡನೆಯದು ಮೊದಲನೆಯದಕ್ಕಿಂತ ಹೀನ. (ಒಳಗೆ ಬಂಧಿಸಲ್ಪಡುವುದು ಹೊರ ಹಾಕಲ್ಪಡುವುದಕ್ಕಿಂತ ಘೋರವಿರಬಹುದಲ್ಲ?) ಹೀಗೆ ಪ್ರಸ್ತುತ ಅಧ್ಯಯನ.

ಸ್ತ್ರೀವಾದವನ್ನು ಸಾಮಾನ್ಯವಾಗಿ ಪುರುಷದ್ವೇಷ ಎಂದು ತಪ್ಪಾಗಿ ಅರ್ಥೈಸುವುದರ ಹಿಂದೆ ಶತಮಾನಗಳ ಈ ಕೊನೆಯಿಲ್ಲದ ಮೌನದ ಪಾಲೂ ಇದೆ. ಹೆಣ್ಣು ಬಾಯಿ ಬಿಡುವುದೇ ತಡ, ಅವಳಿಗೆ ಪುರುಷದ್ವೇಷಿ, ಉಗ್ರ ಸ್ತ್ರೀವಾದಿ ಮುಂತಾದ ಬಿರುದುಗಳು ಅಂಟಿಕೊಳ್ಳುತ್ತವೆ. ತನ್ನ ವ್ಯಕ್ತಿತ್ವದ ಪರಿಗಣನೆಗಾಗಿ ಹೆಣ್ಣು ನಡೆಸುವ ಸಹಜ ಹೋರಾಟಕ್ಕೆ ಅಡೆತಡೆಗಳು ಶುರುವಾಗುವುದೇ ಈ ತಪ್ಪು ಅರ್ಥೈಸುವಿಕೆಯಿಂದ. ಆರಂಭದಿಂದ ಇಂದಿನವರೆಗೂ ಸ್ತ್ರೀವಾದಕ್ಕೆ ಅನೇಕ ಆಪಾದನೆ, ಆಕ್ಷೇಪಗಳು ಎದುರಾಗಿವೆ. "ಪಶ್ಚಿಮದಿಂದ ಎರವಲಾಗಿ ತಂದು ಇಲ್ಲಿ ಕಸಿ ಮಾಡುವ ಹುನ್ನಾರ" ಎಂದು, ಸಾಮ್ರಾಜ್ಯ ಶಾಹಿಯಾದ ಪಶ್ಚಿಮ ಸಂಸ್ಕೃತಿಯ ವಿಚಾರಧಾರೆಯೊಂದನ್ನು ಏನೂ ಪ್ರಶ್ನಿಸದೆ

ಭೋಳೆಯಾಗಿ ಸ್ವೀಕರಿಸಿ ಬಿಡಲಾಗಿದೆ ಎಂದು, ಇದು ಪಾರ್ಶ್ವದೃಷ್ಟಿಯುಳ್ಳ ಹೋರಾಟವೆಂದೂ ಇದಕ್ಕೆ ಭವಿಷ್ಯ ಇಲ್ಲವೆಂದೂ, ತಾತ್ಕಾಲಿಕ ಖಯಾಲಿಯಷ್ಟೇ ಎಂದು, ಇದು ನಗರದ ಮಧ್ಯಮವರ್ಗದ ಮಹಿಳೆಯರನ್ನೇ ಕೇಂದ್ರವಾಗಿಟ್ಟು ಕೊಂಡಿದೆಯೆಂದು, ಇದಕ್ಕೆ ಬಹುಸಂಖ್ಯಾತ ಕೆಳಸ್ತರೀಯ ಹೆಣ್ಣುಮಕ್ಕಳಿಗೆ ಸ್ಪಂದಿಸುವ ಶಕ್ತಿಯಿಲ್ಲವೆಂದು, ಬರೀ ಲಿಖಿತ ಸಾಹಿತ್ಯವನ್ನೇ ಗಮನಿಸುತ್ತಾ ಮಹಿಳೆಯರ ಬಹುಮುಖ್ಯ ಅಭಿವ್ಯಕ್ತಿಯ ನೆಲೆಯಾದ ಮೌಖಿಕ ಪರಂಪರೆಯನ್ನು ನಿರ್ಲಕ್ಷಿಸುತ್ತಿದೆ ಎಂದು... ಹೀಗೆ ಸ್ತ್ರೀವಾದಕ್ಕೂ ಅದನ್ನು ಸ್ಥಳೀಯ ಭಾಷೆಯಲ್ಲಿ ಪರಿಚಯಿಸಿ, ಅನ್ವಯಿಕ ವಿಮರ್ಶೆಗೆ ಯತ್ನಿಸಿದವರಿಗೂ ಬೇಕಾದಷ್ಟು ವಾಗ್ದಾಳಿಗಳು ಎದುರಾಗಿವೆ. ಆದರೆ ಇದೆಲ್ಲ ಆಕ್ಷೇಪಗಳ ಆಚೆಗೂ ಸ್ತ್ರೀವಾದಿ ಚಿಂತನೆಯು ತನ್ನ ಆಯಾಮಗಳನ್ನು ವಿಸ್ತರಿಸಿಕೊಳ್ಳುತ್ತ, ಬಹುರೂಪತೆಯ ಚಲನಶೀಲತೆಯನ್ನು ಕಾಯ್ದುಕೊಂಡೇ ಉಳಿದುಬರುತ್ತಿದೆ. ನಿಜವಾಗಿ ಸ್ತ್ರೀಜಂತುವು ಸೃಷ್ಟಿಯಲ್ಲಿ ಹೆಚ್ಚುಕಾಲ ಉಳಿಯುವುದು ಹೀಗೆ ಅಲ್ಲವೆ!.

ಈ ಮೇಲ್ಕಂಡ ಎಲ್ಲಾ ವಿಷಯಗಳನ್ನು ಆಧರಿಸಿ ಈ ಕೆಳಕಂಡ ಅಧ್ಯಯನದ ಪ್ರಕಾರ ಸಮಗ್ರವಾದ ಮಹಾಪ್ರಬಂಧವನ್ನು ರಚಿಸಲು ಉದ್ದೇಶಿಸಲಾಗಿದೆ. ಇದಕ್ಕೆ ಬೇಕಾದ ಆಧಾರಗ್ರಂಥಗಳು, ದಾಖಲಾತಿಗಳು ಇತ್ಯಾದಿ ಆಕರಗಳನ್ನು ರಾಜ್ಯದ ಪತ್ರಗಾರ ಇಲಾಖೆ ಮತ್ತು ರಾಜ್ಯದ ವಿವಿಧ ವಿಶ್ವವಿದ್ಯಾನಿಲಯಗಳ ಗ್ರಂಥಾಲಯಗಳು ಮತ್ತು ಸಂಶೋಧನಾ ಕೇಂದ್ರಗಳಲ್ಲಿ ದೊರಕುವ ಎಲ್ಲಾ ಆಕರಗಳನ್ನು ಸಮಗ್ರವಾಗಿ ಪರಿಶೀಲಿಸಿ ಈ ಮಹಾಪ್ರಬಂಧವನ್ನು ಸಿದ್ಧಗೊಳಿಸಲಾಗಿದೆ.

ಅದಕ್ಕಾಗಿ ಕೆಳಗಿನಂತೆ 6 ಅಧ್ಯಯನಗಳಲ್ಲಿ ವಿಭಾಗೀಕರಣವನ್ನು ಮಾಡಿಕೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ, ವಿಭಾಗೀಕರಣ ಮತ್ತು ವಿಧಾನ, ಆಕರಗಳು, ಮಹತ್ವ ಮತ್ತು ವ್ಯಾಪ್ತಿ**

1) ಪೀಠಿಕೆ: ಮೈಸೂರು ರಾಜ್ಯದ ಸ್ತ್ರೀಯರ ಸ್ಥಾನಮಾನ-ಸಾಮಾಜಿಕ ಪಿಡುಗು.
2) ಮೈಸೂರು ರಾಜ್ಯದ ಸ್ತ್ರೀಯರ ಸ್ಥಾನಮಾನ-ಸಾಮಾಜಿಕ ಪಿಡುಗು
3) ಸ್ತ್ರೀಯರ ಶಿಕ್ಷಣಾಭಿವೃದ್ಧಿ: ಹಿಂದುಳಿದ ಹೆಣ್ಣುಮಕ್ಕಳ ಶಿಕ್ಷಣ ಹಾಗೂ ನಿಮ್ನ ವರ್ಗದ ಹೆಣ್ಣು ಮಕ್ಕಳ ಶಿಕ್ಷಣ.
4) ಮಹಿಳೆಯರ ಉನ್ನತಿಗಾಗಿ ನಡೆದ ಸಾಮಾಜಿಕ ಚಳುವಳಿಗಳು

ಅ) ಪಾಶ್ಚಿಮಾತ್ಯ ಶಿಕ್ಷಣ ಮತ್ತು ಸಂಸ್ಕೃತಿಯ ಪ್ರಭಾವ ಹಾಗೂ ಮೈಸೂರಿನ ಸುಧಾರಣಾ ಚಳುವಳಿಗಳು.

ಆ) ಸ್ತ್ರೀಯರ ಏಳ್ಗೆಗಾಗಿ ದುಡಿದಂಥ ಸಾಮಾಜಿಕ ಸಂಸ್ಥೆಗಳು, ಪೌರ ಮತ್ತು ಸಾಮಾಜಿಕ ಪ್ರಗತಿ ಸಂಘಗಳು – ಬ್ರಹ್ಮಸಮಾಜ, ಆರ್ಯಸಮಾಜ, ಥಿಯೋಸಾಫಿಕಲ್ ಸೊಸೈಟಿ, ಮಹಿಳಾ ಸೇವಾ ಸಮಾಜಗಳು ಹಾಗೂ ಇತರ ಸಂಸ್ಥೆಗಳು

5) ಸ್ತ್ರೀಯರ ಉನ್ನತಿಯ ಸಾಮಾಜಿಕ ಮಸೂದೆಗಳು

6) ಉಪಸಂಹಾರ

## 1.4 ಅಧ್ಯಯನದ ಆಕರಗಳು

ಈ ಮೇಲಿನ ವಿಭಾಗೀಕರಣಗಳನ್ನು ವಿಶ್ಲೇಷಿಸಲು ಬಳಸಿಕೊಳ್ಳುವ ಆಕಾರ ಮೂಲಗಳು ಈ ಕೆಳಗಿನಂತಿವೆ.

1) ಪ್ರಾಥಮಿಕ ಪತ್ರಗಳು/ದಾಖಲೆಗಳು ಮತ್ತು ಮೈಸೂರು ಆಡಳಿತಕ್ಕೆ ಸಂಬಂಧಿಸಿದ ವರದಿಗಳು

a) Cronological Table of all regulation of the Govt. of Mysore from 1883-1885, Govt. Press Mysore, 1896.
b) All the Census Reports from 1891 to 1931.
c) All the Revenue reports of the Govt. of his Highness the Maharaja of Mysore, legislation branch collection 1928 to 1930.
d) Proceedings of Mysore representative assembly.
e) The Mysore Education Manuals 1916-1943.
f) Archival reports pertaining to Mysore Administration.
g) Ethnographic studies of British Administrators.
h) Women writings from 1881-1956.

2) ದ್ವಿತೀಯ ಪತ್ರಗಳು/ದಾಖಲೆಗಳು/ವರದಿಗಳು

ಅ) ಚರಿತ್ರಾಶಾಸ್ತ್ರಕ್ಕೆ ಸಂಬಂಧಿಸಿದಂತೆ ಇಲ್ಲಿಯವರೆಗೆ ಬಂದಂಥ ಸಬಾಲ್ಟರ್ನ ಸಂಪುಟಗಳು
ಆ) ಸ್ತ್ರೀವಾದವನ್ನು ಕುರಿತಂಥ ಪತ್ರಗಳು
ಇ) ಸ್ವಾತಂತ್ರ್ಯ ಪೂರ್ವ ಮತ್ತು ನಂತರದಲ್ಲಿ ಅದಂಥ ಮಹಿಳಾ ಚಳುವಳಿಗಳ ವರದಿಗಳು
ಈ) ಮೈಸೂರಿನ ಮಹಿಳೆಯರನ್ನು ಕುರಿತಂತೆ ಬಂದಿರುವ ಆತ್ಮಕಥನಗಳು ಮತ್ತು ಬರಹಗಳು.
ಉ) ಮಹಿಳಾ ಅಧ್ಯಯನಕ್ಕೆ ಸಂಬಂಧಿಸಿದಂತೆ ವಿವಿಧ ಜ್ಞಾನ ಶಾಖೆಗಳು ಮಂಡಿಸಿರುವ ಶೋಧಗಳು... ಮುಂತಾದ ವಿಶ್ಲೇಷಣಾ ಪತ್ರಗಳನ್ನು ದ್ವಿತೀಯ ಆಕರಗಳನ್ನಾಗಿ ಸ್ವೀಕರಿಸಿ

ಅಧ್ಯಯನ ನಡೆಸುವುದು. ಅಲ್ಲದೆ ಚರಿತ್ರೆ, ಸಮಾಜಶಾಸ್ತ್ರ, ಆಡಳಿತ, ಮನಃಶಾಸ್ತ್ರ, ಧಾರ್ಮಿಕ ಶಾಸ್ತ್ರಗಳ ನಿರ್ವಚನಗಳನ್ನು ಕೂಡ ವಿಶ್ಲೇಷಣೆಗೆ ಬಳಸುವ ಮೂಲಕ ಸಂಶೋಧನೆಯ ಮಟ್ಟವನ್ನು ಕಾಯ್ದುಕೊಳ್ಳಲು ಉದ್ದೇಶಿಸಲಾಗಿದೆ.

ಆದ್ದರಿಂದ ಈ ಮೇಲಿನ ಆಕರಗಳಿಂದ ಸಂಗ್ರಹಿಸಿದ ಮಾಹಿತಿಗಳನ್ನು ಈ ಕೆಳಗಿನ ಅಧ್ಯಯನ ವಿಧಾನದಲ್ಲಿ ವಿಶ್ಲೇಷಿಸಲಾಗುತ್ತದೆ.

ಒಂದು ಪಠ್ಯಗಳನ್ನು ಪ್ರಜ್ಞಾರೂಪಗಳೆಂದು ಪರಿಗಣಿಸಿ ಚರಿತ್ರಾಶಾಸ್ತ್ರದಲ್ಲಿ ಮಹಿಳಾ ಬರಹಗಳಲ್ಲಿರುವ ಕರ್ತೃತ್ವದ/ಪ್ರತಿರೋಧದ ಸಾಂಸ್ಕೃತಿಕ ನೆಲೆಗಳನ್ನು ಪರೀಕ್ಷಿಸುವುದು. ಎರಡು, ಚಾರಿತ್ರಿಕ ವಾಸ್ತವಗಳನ್ನು ಸಾಂಸ್ಕೃತಿಕ ಚೌಕಟ್ಟಿನಲ್ಲಿ ಅಧ್ಯಯನ ಮಾಡುತ್ತಾ ಮಹಿಳಾ ಅಭಿವೃದ್ಧಿ ಎನ್ನುವುದು ಆಯಾ ಪ್ರಾದೇಶಿಕ ಸಮುದಾಯಗಳ ನಿರ್ಧಾರಕ್ಕೆ ಬಿಟ್ಟ ಸಂಗತಿಯೇ ವಿನಃ ಸಾರ್ವತ್ರಿಕವಾಗಿ ನಿರ್ದೇಶಿಸುವ ಸಂಗತಿ ಅಲ್ಲ ಎನ್ನುವುದನ್ನು ಮಹಿಳಾ ದೃಷ್ಟಿಯಲ್ಲಿ ವಿವರಿಸಿಕೊಳ್ಳುವುದು. ಈ ಎರಡು ವಿಧಾನಗಳ ಸಮ್ಮಿಲನದಲ್ಲಿ ಪ್ರಸ್ತುತ ಅಧ್ಯಯನ ನಡೆಯುತ್ತದೆ. ಕಾರಣ ಪುರುಷ ಪ್ರಧಾನ ಊಳಿಗಮಾನ್ಯ ಸಮಾಜದಲ್ಲಿ ಮಹಿಳೆಯ ಇರುವಿಕೆಯನ್ನು. ನಿರಾಕರಣೆಯನ್ನು ಪ್ರಶ್ನಿಸಿ ಅವಳನ್ನು ಒಳಗೊಳ್ಳುವಂತೆ ವಾದಿಸುವುದು ಸರಳವಾದ ವಿಚಾರವೇನೂ ಅಲ್ಲ. ಇದು ಹಲವೊಮ್ಮೆ ಅಸಮ್ಮತಿಯ ರೂಪ ಕೂಡ ಪಡೆಯುವುದಿಲ್ಲ. ಅಧಿಕಾರಹೀನ ಹಾಗೂ ಅಂಚಿಗೆ ದೂಡಲ್ಪಟ್ಟವನ ಮೇಲೆ ಪ್ರಭುತ್ವದ ಹತೋಟಿ ಹಾಗೂ ಅವರ ಬಗ್ಗೆ ತಾರತಮ್ಯ ಭಾವಗಳು ಈ ಸಮಾಜದಲ್ಲಿ ಬೆಳೆದಿವೆ. ಕೆಲವೊಂದು ಜನಸಮುದಾಯಗಳ ಆಗುಹೋಗುಗಳನ್ನೇ ಹೊಲಿಸ್ಟಿಕ್ ಮಾದರಿ ಎಂದು ಪರಿಗಣಿಸಲಾಗಿದೆ. ಆದರೆ ಈ ಮಾದರಿಯು ಸಕಲ ಸೌಲಭ್ಯಗಳಿಂದ ವಂಚಿತರಾದವರನ್ನು ಮತ್ತು ದೈಹಿಕವಾಗಿ ಹಾಗೂ ಆರ್ಥಿಕವಾಗಿ ದುರ್ಬಲವಾಗಿರುವವರನ್ನು ಅಲ್ಲದೇ ಪ್ರಭುತ್ವದ ಒತ್ತಾಸೆಯಿಲ್ಲದವರನ್ನು ಪರಿಗಣಿಸುವುದೇ ಇಲ್ಲ; ಮಹಿಳೆಯಿಂದ ಸಮಾಜಕ್ಕೆ ದೊರಕುವ ಯಾವುದೇ ರೀತಿಯ ಆರ್ಥಿಕ ಕೊಡುಗೆಯನ್ನು, ಆಕೆಯ ಪುರುಷ ಜೊತೆಗಾರನ ಕೊಡುಗೆಯ ಒಂದು ವಿಸ್ತರಣೆ ಎಂದಷ್ಟೇ ನೋಡುತ್ತದೆ; ಭೌತಿಕ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳನ್ನು ಪ್ರವೇಶಿಸಲು ಮಹಿಳೆಯ ಮೇಲೆ ಹೇರಲಾಗಿರುವ ನಿಷೇಧ ಹಾಗೂ ಇದು ಸ್ವಾಭಾವಿಕವೆಂಬ ನಂಬಿಕೆಯನ್ನು ಮಹಿಳೆಯರಲ್ಲೇ ಮೂಡಿಸುವುದು ಸಮಾಜಕ್ಕೆ ಒಪ್ಪಿಗೆಯಾಗಿರುವ ಮಾದರಿಯಾಗಿದೆ.

ಮಿಶೆಲ್ ಬ್ಯಾರೆಟ್ ಅವರ ಪ್ರಕಾರ, ಲಿಂಗಾಧಾರಿತ ವ್ಯವಸ್ತೆಗೆ ಸಿದ್ಧಾಂತವು ಅತಿಮುಖ್ಯವಾದರೂ ಇದನ್ನು ಒಟ್ಟಾರೆ ಸಮಾಜದ ಭಾವವೆಂದು ಅರ್ಥಮಾಡಿಕೊಳ್ಳಬೇಕೇ ವಿನಃ

ಇದೊಂದು ಸ್ವಾಯುತ್ತ ರೂಢಿ ಅಥವಾ ವ್ಯಾಖ್ಯಾನ ಎಂದೇನೂ ಅಲ್ಲ.[9] ಸಮಾಜವು ಹೆಣ್ಣುಗಂಡಿಗೆ ವಿಭಿನ್ನ ಕಾಲ್ಪನಿಕ ಪರಿಧಿಯನ್ನು ರೂಪಿಸಿ ಅವರ ಸ್ಥಾನ, ನಿರ್ದಿಷ್ಟ ವರ್ತನೆ ಹಾಗೂ ಭೌಗೋಳಿಕ ಗಡಿಗಳನ್ನು ರೂಪಿಸಿ, ಅವರು ಕಾರ್ಯ ನಿರ್ವಹಿಸುವಂತೆ ಅವರನ್ನು ಬಂಧಿಸಿವೆ. ಕೌಟುಂಬೀಕರಣ ಸಿದ್ಧಾಂತವು ಗಂಡಿಗೆ ಲಿಂಗಾಧಾರಿತ ಗಡಿಯ ಮೇಲ್ವಿಚಾರಣೆ ಹಾಗೂ ಪಾತ್ರ ನಿರ್ವಹಣೆಗೆ ನೀಡಿದ್ದಲ್ಲದೆ ಅವನ ಪ್ರಭುತ್ವ ಸೃಷ್ಟಿಗೆ ಅದು ಒತ್ತಾಸೆಯಾಗಿದೆ.

ಆದ್ದರಿಂದ ಹಳೇ ಮೈಸೂರು ಸಂಸ್ಥಾನ ಆಧುನಿಕ ಮೈಸೂರು ಎಂದು ಪಲ್ಲಟಗೊಳ್ಳುವಾಗ ಆದ ಸಾಮಾಜಿಕ ಬದಲಾವಣೆಗಳನ್ನು ಮಹಿಳಾ ದೃಷ್ಟಿಯಿಂದ ನೋಡಿದಾಗ ಈ ಬದಲಾವಣೆಗಳು ಬ್ರಿಟಿಷರ ಸಾಮ್ರಾಜ್ಯಶಾಹಿ ನೀತಿಯ ಒತ್ತಡಗಳಿಂದಾಗಿ ಹತ್ತೊಂಬತ್ತನೆಯ ಶತಮಾನದಲಲಿ ಕಂಡುಬಂದವು ಎಂದರೆ ತಪ್ಪಾಗಲಾರದು. ಈ ಬದಲಾವಣೆಗಳು ತೀವ್ರತರಹದ ಕಂಪನಗಳನ್ನು ನಾಡಿನಲ್ಲಿ ಹುಟ್ಟುಹಾಕಿತು. ಶಿಕ್ಷಣ ಪದ್ಧತಿ, ಆರ್ಥಿಕತೆ ಹಾಗೂ ಆಡಳಿತಗಳಲ್ಲಿ ಉಂಟಾದ ತೀವ್ರ ಬದಲಾವಣೆಗಳ ಫಲವಾಗಿ ಹೊಸ ಸಾಮಾಜಿಕ ವರ್ಗಗಳು ಹುಟ್ಟಿದವು. ಈ ವರ್ಗಗಳ ಹುಟ್ಟು ವಿಭಿನ್ನ ಪ್ರದೇಶಗಳಲ್ಲಿ ಹಾಗೂ ವಿಭಿನ್ನ ಸಮುದಾಯಗಳಲ್ಲಿ ಬೇರೆಬೇರೆ ತೆರನಾಗಿತ್ತು ಹಾಗೂ ಬಹುತೇಕವಾಗಿ ಬ್ರಿಟಿಷರ ಪ್ರವೇಶ ಮತ್ತು ಅವರು ಪ್ರಾಂತಗಳನ್ನು ವಶಪಡಿಸಿಕೊಳ್ಳುವ ಗತಿಯನ್ನು ಅವಲಂಬಿಸಿತ್ತು.

ಬ್ರಿಟಿಷರು ನಾಡನ್ನು ಆರ್ಥಿಕವಾಗಿ ಹಿಂಡಿಹಿಪ್ಪೆ ಮಾಡುತ್ತ ತಮ್ಮ ಅನುಕೂಲಕ್ಕೆ ತಕ್ಕಂತೆ ಒಡೆದು ಆಳುವ ನೀತಿಯನ್ನು ಅನುಸರಿಸುತ್ತಿದ್ದರೂ, ಅಪರೋಕ್ಷ ನಾಡಿನ ಏಕೀಕರಣದ ಬೀಜವನ್ನೂ ಬಿತ್ತಿದರೆಂಬುದನ್ನು ನಾವು ಒಪ್ಪಿಕೊಳ್ಳಬೇಕು. ತಮ್ಮ ಸಾಮ್ರಾಜ್ಯದ ಹಿತಾಸಕ್ತಿಗಳಿಗೆ ಪೂರಕವಾದ ಬಂಡವಾಳವಾದಿ ದಿಕ್ಕಿನಲ್ಲಿ ನಾಡನ್ನು ಪರಿವರ್ತಿಸಲೆತ್ನಿಸುತ್ತಿದ್ದ ಬ್ರಿಟಿಷರು ತಮ್ಮ ಆಡಳಿತಾತ್ಮಕ ನೀತಿಗಳಲ್ಲಿ ಉದರವಾದಿಯಾಗಿರಬೇಕಾದದ್ದು ಅನಿವಾರ್ಯವಾಗಿತ್ತು.

ಇಲ್ಲಿ 'ಉದಾರವಾಗಿರುವುದು' ಎಂದರೆ ವೈಯಕ್ತಿಕ ಸ್ವಾತಂತ್ರ್ಯ ಹಾಗೂ ಸಾಮಾಜಿಕ ಸಮಾನತೆಯ ತತ್ವಗಳನ್ನು ರೂಪಿಸುವುದು ಎಂದರ್ಥ. ರಾಜಕೀಯ ವ್ಯವಸ್ಥೆಯ ದಕ್ಷ ನಿರ್ವಹಣೆಗಾಗಿ ಬ್ರಿಟಿಷರು ಬಹುಮಟ್ಟಿಗೆ ಸರ್ವಸಮಾನವಾದ ಕೆಲವು ಆಡಳಿತಾತ್ಮಕ ನಿಯಮಗಳನ್ನು ರೂಪಿಸಿದರು. ಈ ನಿಯಮಗಳು ಜಾರಿಗೊಳ್ಳುವುದನ್ನು ನೋಡಿಕೊಳ್ಳಲು ನ್ಯಾಯಾಂಗ ಹಾಗೂ

ಅಧಿಕಾರಶಾಹಿಯನ್ನು ರೂಪಿಸಿದರು. ಈ ಬಗೆಯ ಆಡಳಿತದ ಶಾಖೆಗಳ ಮಧ್ಯಮ ಹಾಗೂ ಆ ನಂತರದ ಸ್ತರಗಳಲ್ಲಿ ಇಂಗ್ಲಿಷ್ ಶಿಕ್ಷಣ ಪಡೆದ ಭಾರತೀಯರನ್ನು ನೇಮಿಸಲಾಯಿತು.

ಈ ಹೊಸ ಪ್ರಭುತ್ವದ ನೀತಿಗೂ ಸಾಂಪ್ರದಾಯಿಕ ಭಾರತೀಯ ಸಮಾಜಕ್ಕೂ ಸಮರ್ಪಕ ಹೊಂದಾಣಿಕೆಯಾಗುವುದು ಸುಲಭವಿರಲಿಲ್ಲ. ಇದರ ಜೊತೆಗೆ 'ನಾಗರಿಕ ಪಶ್ಚಿಮ'ದ ಭಾಗವಾಗಿದ್ದ ಬ್ರಿಟಿಷರು 1857 ರವರೆಗೂ ಭಾರತೀಯ ಸಾಮಾಜಿಕ ರಚನೆಯಲ್ಲಿದ್ದ ಜಡ ಶ್ರೇಣೀಕರಣವನ್ನು ಅನುಮೋದಿಸಿರಲಿಲ್ಲ. ಈ ಕಾರಣದಿಂದಾಗಿಯೇ ಮಹಿಳಾ ಸುಧಾರಣಾ ಕಾರ್ಯಕ್ರಮಗಳು ತೀವ್ರಗೊಳ್ಳುತ್ತವೆ. ಅವರ ಶಿಕ್ಷಣ ಜನ ಬೆಂಬಲ ಸಾಕಷ್ಟು ದೊರೆತು ಮೈಸೂರು ಒಂದು ಮಾದರಿ ಸಂಸ್ಥಾನವಾಗುವುದನ್ನು ಗಮನಿಸಬೇಕಾಗುತ್ತದೆ.

ಆದ್ದರಿಂದ ಈ ಎಲ್ಲಾ ಅಂಶಗಳನ್ನು ಅವಲೋಕಿಸಲು ಮೈಸೂರು ಸಂಸ್ಥಾನದಲ್ಲಿ ಸ್ತ್ರೀಯರ ವಿಮೋಚನೆ ಮತ್ತು ಸ್ತ್ರೀಯರನ್ನು ಪ್ರಗತಿಪಥದಲ್ಲಿ ಒಯ್ಯಲು ಮೈಸೂರು ಮಹಾರಾಜರು ಹಾಗೂ ದಿವಾನರು ಕಾಲಕಾಲಕ್ಕೆ ಕೈಗೊಂಡ ಅನೇಕ ಗಣನೀಯ ಕಾರ್ಯಕ್ರಮಗಳು, ಯೋಜನೆಗಳು, ಸುಧಾರಣೆಗಳು ಹಾಗೂ ಅವರು ಜಾರಿಗೆ ತಂದ ಕಾನೂನು ಮತ್ತು ಶಾಸನಳು ಅತ್ಯಂತ ಶ್ಲಾಘನೀಯವಾಗಿದೆ. ತತ್ಸಬಂಧ ಪಡೆದ ಫಲಿತಾಂಶ ಅದರಂತೆ ಅಂದಿನ ಮೈಸೂರಿನ ಪ್ರಜೆಗಳ ಪ್ರತಿಕ್ರಿಯೆ ಪರ ಹಾಗೂ ವಿರೋಧ ವಿಶೇಷವಾಗಿ ಸನಾತನ ಧರ್ಮಗಳಿಂದ ಹಾಗೂ ಜಾತೀಯತೆಯ ಮತ್ತು ಮತ ಸಂಬಂಧ ಕಟ್ಟುಪಾಡುಗಳು ಅಂದಿನ ಸಾಮಾಜಿಕ ವ್ಯವಸ್ಥೆ, ಸ್ತ್ರೀಯರ ಸ್ಥಾನಮಾನ, ಪಾಶ್ಚಿಮಾತ್ಯರ ಸಂಸ್ಕೃತಿ ಮತ್ತು ಶಿಕ್ಷಣದ ಪ್ರಭಾವ ಹಾಗೂ ಅಂದಿನ ಸಮಾಜ ಸುಧಾರಕರು ಸ್ತ್ರೀಯರ ಪುರೋಭಿವೃದ್ಧಿಗಾಗಿ ವಹಿಸಿದಂಥ ಪಾತ್ರ ಹಾಗೂ ಅವರು ಕೈಗೊಂಡ ಕ್ರಮಗಳು ಮತ್ತೊಮ್ಮೆ ಮೌಲ್ಯಮಾಪನಕ್ಕೊಳಪಡಿಸುವ ಜರೂರು ಎದುರಿಗಿದೆ. ಹಿಂದೂ ಸಮಾಜದ ಅನೇಕ ನ್ಯೂನತೆಗಳನ್ನು ಹೋಗಲಾಡಿಸಲು ಹಿಂದೂ ಮತದ ಸುಧಾರಣೆಗೋಸ್ಕರ ಹುಟ್ಟಲ್ಪಟ್ಟ ಸಂಘ ಸಂಸ್ಥೆಗಳಾದ ಬ್ರಹ್ಮಸಮಾಜ, ಆರ್ಯಸಮಾಜ, ಥಿಯೋಸಾಫಿಕಲ್ ಸೊಸೈಟಿ ಮತ್ತು ಅನೇಕ ಮಹಿಳಾ ಸಮಾಜಗಳು ಸ್ತ್ರೀಯರ ವಿಮೋಚನೆ ಹಾಗೂ ಅವರ ಉದ್ಧಾರಕ್ಕೆ ಕೈಗೊಂಡ ಹೋರಾಟಗಳು, ಕಾರ್ಯಕ್ರಮಗಳು ಅನೇಕ. ಅದರಂತೆಯೇ ರಾಜ್ಯದ ಅನೇಕ ಮಹಾನ್ ವ್ಯಕ್ತಿಗಳು ಸ್ತ್ರೀಯರ ಕಲ್ಯಾಣಕ್ಕೋಸ್ಕರ ಹೋರಾಡಿದ ರೀತಿ, ಗಳಿಸಿದ ಸಾಧನೆಗಳನ್ನು ಅವಲೋಕನ ಮಾಡಬಹುದು.

## ಅಡಿಟಿಪ್ಪಣಿಗಳು

1) ಇದಕ್ಕೆ ಸ್ಪಷ್ಟ ಉದಾಹರಣೆಯನ್ನು ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಬಗ್ಗೆ ಬರೆದಿರುವ ಚರಿತ್ರೆಯಲ್ಲಿ ಕಾಣಬಹುದು. ಹಿಂದೂವಾದಿಗಳಿಗೆ ಇವರಿಬ್ಬರೂ ಸಹ ಮಾಡಿದ್ದು ಹಿಂದೂ ಸಂಸ್ಕೃತಿಯ ನಾಶವಲ್ಲದೆ ಬೇರೇನೂ ಇಲ್ಲ. ಇದಕ್ಕೆ ಭೈರಪ್ಪನವರು ಇತ್ತೀಚೆಗೆ ಪ್ರಕಟಪಡಿಸಿದ ಆವರಣ ಕೃತಿಯೇ ಸಾಕ್ಷಿ

2) ಈ ವಿಷಯದ ಕುರಿತು ನಡೆದಿರುವ ಅಧ್ಯಯನಗಳನ್ನು ಗಮನಿಸಿದಲ್ಲಿ ಮಹಿಳೆಯರ ಮೇಲೆ ನಿರಂತರವಾಗಿ ನಡೆಯುತ್ತಿರುವ ಹಿಂಸೆಯನ್ನು ಗಮನಿಸಲೇ ಬೇಕಾಗುತ್ತದೆ. ಅಂಥ ಅಧ್ಯಯನಗಳಲ್ಲಿ ಮುಖ್ಯವಾದುದೆಂದರೆ, ಅಹಿಜಾರವರ ಅಧ್ಯಯನ. ಅದರಲ್ಲಿ ಅವರು ವರದಕ್ಷಿಣೆಯ ಬಗ್ಗೆ ನಡೆಯುತ್ತಿರುವ ಹಿಂಸೆಯನ್ನು ಅಧ್ಯಯನಕ್ಕೆ ತೆಗೆದುಕೊಂಡಿದ್ದನ್ನು

3) The development is often a process of balances and imbalances. The crisis demonstrated the impact of financial liberalization that exceeded the international and national capacity to manage the emerging systems. The answer is not to give up the benefits of liberalization – but rather to strengthen our governance systems – and the social safety nets to protect the vulnerable. The same is true whether we are looking at imbalances of power between vulnerable and less vulnerable groups, or between governments and broader society and perhaps the most important element of the response has to be a new openness to new partnerships – both for understanding and for action.

4) ಈ ಪರಿಕಲ್ಪನೆ ಹೇಗೆ ಲಿಂಗ ತಾರತಮ್ಯ ಹಾಗೂ ಅಸ್ಪೃಶ್ಯತೆಗೆ ಕಾರಣವಾಗಿದೆ ಎಂಬುದನ್ನು ಗೇಬಿಯೆಲಾ ಡಿಟ್ರೇಜ್ ಈ ಕೆಳಗಿನಂತೆ ವಿವರಿಸಿದ್ದಾರೆ:

   Gabriele Dietrich (1992) in her extremely balanced article "Dalit Movements and Women's Movements" page No.47-49.

5) See Sabyassachi Bhattacharya, Vande Mataram: The Biography of a Song 25-27, and Tanika Sarkar, Hindu Wife, Hindu Nation, Permanent Black, Delhi, 2000.

6) Ibid

7) Refer Sarojini's (probably a pen-name of Edattata Rugmini Amma) essay on "Womanliness"

8) Ibid

9) Michele Barrett, Ideology and Cultural Production of Gender: Feminist Criticism and Social Change – Sex, Class and Race in Literature and Culture, ed. Judith Newton and Deborah Rosenfelt, Methuen: New York, 1985.

# ಅಧ್ಯಾಯ-2

# ಮೈಸೂರು ರಾಜ್ಯದ ಸ್ತ್ರೀಯರ ಸ್ಥಾನಮಾನ - ಸಾಮಾಜಿಕ ಪಿಡುಗು

2.1 ಪೀಠಿಕೆ

2.2 ಮೈಸೂರು ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿ

2.3 ಜಾತಿಪದ್ಧತಿ ಮತ್ತು ಸ್ತ್ರೀಯರ ಸ್ಥಿತಿಗತಿ

2.4 ವಸಾಹತುಶಾಹಿ ಸಂದರ್ಭ ಮತ್ತು ಬದಲಾವಣೆಗಳು

2.5 ಉಪಸಂಹಾರ

## 2.1 ಪೀಠಿಕೆ

ಲಿಂಗಪ್ರಜ್ಞೆಯನ್ನು[1] ಗಮನದಲ್ಲಿರಿಸಿಕೊಂಡು ಜಗತ್ತಿನಲ್ಲಿ ಮಹಿಳಾಭಿವೃದ್ಧಿ ಯಾವ ಮಟ್ಟದಲ್ಲಿ ಇದೆ ಎಂದು ನೋಡಿದಾಗ 102 ದೇಶಗಳಲ್ಲಿ ಭಾರತದ ಸ್ಥಾನವು 95ನೆಯದ್ದಾಗಿದೆ. ಮಹಿಳಾಭಿವೃದ್ಧಿ ಎನ್ನುವುದು ಎಷ್ಟು ಶೋಚನೀಯ ಸ್ಥಿತಿಯಲ್ಲಿದೆ ಎನ್ನುವುದು ವೇದ್ಯವಾಗುತ್ತದೆ. ಜಗತ್ತಿನ ಯಾವುದೇ ಸಮಾಜವಾಗಲೀ, ಯಾವುದೇ ಮತಧರ್ಮವಾಗಲೀ ಮಹಿಳೆಯನ್ನು ನಿಷ್ಪಕ್ಷಪಾತವಾಗಿ ನಡೆಸಿಕೊಂಡಿಲ್ಲ. ಎಲ್ಲ ಸಮಾಜಗಳೂ, ಎಲ್ಲ ಮತಧರ್ಮಗಳು ಮಹಿಳೆ ಬಗ್ಗೆ ತಾವು ನಿಷ್ಪಕ್ಷಪಾತಿ ಎಂದೇ ಬಡಾಯಿ ಕೊಚ್ಚಿಕೊಂಡರೂ ಅದೆಲ್ಲ ಎರಡು ನಾಲಗೆಯ ಇಬ್ಬಂದಿ ಬೊಗಳೆ. ಆದ್ದರಿಂದ ಮಹಿಳೆಯ ಸ್ಥಾನಮಾನ ಮತ್ತು ವಸಾಹತುಶಾಹಿ ಆಧುನಿಕತೆ ಎಂಬ ಎರಡು ಪರಿಭಾಷೆಗಳೂ ಮೈಸೂರು ಸಂಸ್ಥಾನದ ಹಿನ್ನಲೆಯಲ್ಲಿ ಒಂದಕ್ಕೊಂದು ಪೂರಕವಾಗಿ ಪರಿಕಲ್ಪಿತವಾಗಿವೆ ಎಂಬುದನ್ನು ಈ ಅಧ್ಯಾಯದ ಆರಂಭದಲ್ಲೇ ಸ್ಪಷ್ಟಪಡಿಸಬೇಕಾಗುತ್ತದೆ. ಕಾರಣ ಈ ವಸಾಹತುಶಾಹಿ ಆಧುನಿಕತೆ ಈ ನಾಡಿನಲ್ಲಿ ಪ್ರವೇಶಿಸಿದಾಕ್ಷಣ ಎಲ್ಲಾ ಸಮುದಾಯಗಳಲ್ಲೂ ಒಂದು ರೀತಿಯ ನಾಗರಿಕ ಚಲನೆ ಎನ್ನುವುದು ಆರಂಭವಾಗುತ್ತದೆ. ಅಲ್ಲದೆ, ನಾವು ಗ್ರಹಿಸುವ ಸತ್ಯಗಳೂ ಸಹ ಈ ವಸಾಹತುಶಾಹಿ ಆಧುನಿಕತೆಯಿಂದಲೇ ಹೊರಹೊಮ್ಮಿದ್ದು ಎನ್ನುವುದನ್ನು ಮರೆಯುವಂತಿಲ್ಲ. "ವಸಾಹತುಶಾಹಿ ಭಾಷೆಯೆಂದರೆ ಅದೊಂದು ನಿರ್ದಿಷ್ಟ ಬಗೆಯ ಅಭಿವೃದ್ಧಿ ಕಥನ, ನಿರ್ದಿಷ್ಟ ಬಗೆಯ ವಿಜ್ಞಾನ, ತಂತ್ರಜ್ಞಾನ ಹಾಗೂ ನಿರ್ದಿಷ್ಟ ಬಗೆಯ ಜೀವನ ಕ್ರಮ."[2]

ಆದ್ದರಿಂದ ಮಹಿಳೆಯರ ಸ್ಥಾನಮಾನ ಎಂದಾಕ್ಷಣ ನಮ್ಮೆದುರು ನಿಲ್ಲುವ ಸಂಗತಿಗಳು ಈ ಕೆಳಗಿನಂತಿವೆ. "ಸಮಾಜವೊಂದು ಸಾಧಿಸಿರುವ ನಾಗರಿಕತೆಯ ಮಟ್ಟವನ್ನು ಅಳೆಯುವಲ್ಲಿ ಅತ್ಯಂತ ಮುಖ್ಯವಾದ ಸೂಚಿ", ಜೇಮ್ಸ್ ಮಿಲ್‌ನ ಪ್ರಕಾರ, "ಸ್ತ್ರೀಯರಿಗೆ ಆ ಸಮಾಜ ನೀಡಿರುವ ಸ್ಥಾನಮಾನವೇ ಆಗಿರುತ್ತದೆ. ಒರಟು ಜನಗಳ ಪೈಕಿ ಮಹಿಳೆಯರನ್ನು ಸಾಮಾನ್ಯವಾಗಿ ತುಚ್ಛೀಕರಿಸಲಾಗಿರುತ್ತದೆ. ನಾಗರಿಕ ಜನರ ನಡುವೆ ಅವರನ್ನು ಘನತೆಯ ಸ್ಥಾನಕ್ಕೇರಿಸಲಾಗಿರುತ್ತದೆ... ಹಿಂದೂಗಳು ತಮ್ಮ ಮಹಿಳೆಯರನ್ನು ಕುರಿತಂತೆ ಬೆಳೆಸಿಕೊಂಡಿರುವ ರೂಢಿಗತ ತಿರಸ್ಕಾರ ಭಾವವನ್ನು ಮೀರಿದ್ದು ಯಾವುದೂ ಇಲ್ಲ. ಹಿಂದೂಗಳ ಕಾನೂನುಗಳಲ್ಲಿ ಅಥವಾ ಅವರ ಇತರ ಪುಸ್ತಕಗಳಲ್ಲಿ ಮಹಿಳೆಯರ ಪ್ರಸ್ತಾಪ ಬರುವುದು ಅತಿ ವಿರಳ. ಆದರೆ ಯಾರ ಸ್ವಭಾವದಲ್ಲಿ ಯಾವುದೇ ಬಗೆಯ ಒಳ್ಳೆಯ ಅಥವಾ ಉಪಯುಕ್ತ ಗುಣಗಳನ್ನು ತಂದು ಸೇರಿಸಲಾಗದೋ

ಅಂತಹ ಅತ್ಯಂತ ಹೀನ ಮತ್ತು ದುಷ್ಟ ಪ್ರವೃತ್ತಿಗಳನ್ನೇ ಹೊಂದಿದ ಅನಿಷ್ಟ ಜೀವಿಗಳು ಎಂದು ಅವರನ್ನು ಚಿತ್ರೀಕರಿಸಲಾಗಿದೆ."[3]

ಆದ್ದರಿಂದ ಮೈಸೂರು ಸಂಸ್ಥಾನದಲ್ಲಿ ಮಹಿಳೆಯರ ಸ್ಥಾನಮಾನ ಎಂದಾಕ್ಷಣ ಮೈಸೂರಿಗೆ ಸಂಬಂಧಪಟ್ಟಂತೆ ಆಗಿರುವಂಥ ಸಂಶೋಧನೆಗಳು ತೀರ ಕಡಿಮೆ ಎಂದೇ ಹೇಳಬೇಕಾಗುತ್ತದೆ. ಆದರೂ ಇತ್ತೀಚೆಗೆ ಅದರ ಚರಿತ್ರೆ ಹಲವಾರು ವಿದೇಶಿ ಹಾಗೂ ದೇಶೀ ಸಂಶೋಧಕರನ್ನೂ ತಮ್ಮತ್ತ ಆಕರ್ಷಿಸಿವೆ. ಈ ಕಾಲದ ಮೈಸೂರು ವಿವಿಧ ಚರಿತ್ರಕಾರರಿಗೆ ಬೇರೆ ಬೇರೆಯಾಗಿ ಕಂಡಿದೆ. ಆಧುನಿಕ ಮೈಸೂರು ಸಂಸ್ಥಾನ ಎಂಥ ಸಂಕೀರ್ಣವಾದದ್ದೆಂದರೆ ಅದರ ಬಗ್ಗೆ ಒಂದು ಸ್ಪಷ್ಟ ಚಿತ್ರಣವನ್ನು ರೂಪಿಸಿಕೊಳ್ಳಲು ಇನ್ನೂ ನಮಗೆ ಸಾಧ್ಯವಾಗಿಲ್ಲವೆಂದು ಕಾಣುತ್ತದೆ. ಅದರಲ್ಲೂ ಅಂದಿನ ಮೈಸೂರಿನಲ್ಲಿ ಮಹಿಳಾ ಸ್ಥಿತಿಗತಿ ಹೇಗಿತ್ತು ಎನ್ನುವುದು ಮತ್ತೂ ಸಮಸ್ಯಾತ್ಮಕವಾದುದು. ಭಾರತದಲ್ಲಿ ಸ್ತ್ರೀಯರ ಇತಿಹಾಸವನ್ನು ಹಿಡಿದಿಡುವುದು ಕಷ್ಟಕರವಾದ ಕೆಲಸ. ಭಾರತದಲ್ಲಿ "ಹೆಣ್ಣಾಗಿ" ಬಾಳುವ ಬವಣೆ ವರ್ಗ, ಜಾತಿ, ಪಂಗಡಗಳ ಅನುಭವಗಳ ಜೊತೆಜೊತೆಯಲ್ಲೇ ಬರುತ್ತದೆ. ಸಮಾನತೆಯ ಪರಿಕಲ್ಪನೆ, ಹಿಂಸೆ, ನೋವಿನ ಅನುಭವಗಳು, ತನ್ನತನ ಸ್ಥಾಪಿಸುವ ರೀತಿಗಳು, ಖುಷಿಗಳು ಇವೆಲ್ಲಾ ಬೇರೆಬೇರೆ ವರ್ಗ, ಜಾತಿಯ ಮಹಿಳೆಯರಿಗೆ ಬೇರೆಬೇರೆ ಯಾಗಿರುತ್ತದೆ. ಹೆಣ್ಣಿನ ಬದುಕೇ, ಲಿಂಗ, ವರ್ಗ, ಜಾತಿಯ ಸಂಕೀರ್ಣ ಮಿಶ್ರಣ. ಹೀಗಾಗಿ ಇಲ್ಲಿ 'ಸ್ತ್ರೀ ಇತಿಹಾಸ' ಎಂಬುದಿಲ್ಲ, ಇದ್ದರೆ 'ಸ್ತ್ರೀಯರ ಇತಿಹಾಸಗಳು' ಇರಲು ಸಾಧ್ಯ.

"ಸ್ತ್ರೀ" ಅಭಿವೃದ್ಧಿಗೆ ಸಂಬಂಧಿಸಿದಂತೆ ಅಮರ್ತ್ಯಸೇನ್ ಅವರ ಈ ಮಾತು ಈ ಸಂದರ್ಭದಲ್ಲಿ ಮುಖ್ಯ ಅನ್ನಿಸುತ್ತದೆ. "ಲಿಂಗ ಅಸಮಾನತೆಯು ಉಳಿದೆಲ್ಲಾ ಬಗೆಯ ಅಸಮಾನತೆಗಳಿಗಿಂತ ತುಂಬಾ ಸೂಕ್ಷ್ಮವು ಸಂಕೀರ್ಣವು ಆದುದಾಗಿದೆ. ಏಕೆಂದರೆ ಲಿಂಗಸಂಬಂಧಿ ಅಸಮಾನತೆಯ ನೆಲೆಗಳು ಹಾಗೂ ಲಿಂಗಸಂಬಂಧಿ ತಾರತಮ್ಯದ ರೂಪಗಳು ಅಮೂರ್ತವೂ, ಅಗೋಚರವೂ, ಅವ್ಯಕ್ತವೂ ಆಗಿರುತ್ತದೆ. ಲಿಂಗಸಂಬಂಧಿ ಅಸಮಾನತೆಯನ್ನು ವರಮಾನ ಸಂಪತ್ತು, ಸಂಪನ್ಮೂಲಗಳಿಗೆ ಸಂಬಂಧಿಸಿದ ಅಸಮಾನತೆಗಳಿಗೆ ಸಮಾನವೆಂದಾಗಲಿ ಅಥವಾ ಅವುಗಳನ್ನು ಪರಿಭಾವಿಸುವ ರೀತಿಯಲ್ಲಾಗಲಿ ನೋಡಲು ಸಾಧ್ಯವಿಲ್ಲ. ಏಕೆಂದರೆ ಲಿಂಗಸಂಬಂಧಿ ಅಸಮಾನತೆಯ ಬೇರುಗಳು ಕುಟುಂಬದೊಳಗಿನ ಸಂಬಂಧಗಳಲಲೂ ಹರಡಿಕೊಂಡಿರುತ್ತವೆ. ವರಮಾನ, ಉತ್ಪನ್ನಗಳ ಅಸಮಾನತೆಗಿಂತ ಭಿನ್ನವಾದ ನೆಲೆಯಲ್ಲಿ ಲಿಂಗಸಂಬಂಧಿ ಅಸಮಾನತೆ ಕ್ರಿಯಾಶೀಲವಾಗಿರುತ್ತದೆ.

ಕುಟುಂಬದೊಳಗಿನ ಸ್ವಾತಂತ್ರ್ಯದ ಬಗೆಗಿನ ಅಸಮಾನತೆ ಸಂಪನ್ಮೂಲಗಳ ಬಳಕೆಗೆ ಸಂಬಂಧಿಸಿದ ಅಸಮಾನತೆ, ಅನುಭೋಗಕ್ಕೆ ಸಂಬಂಧಿಸಿದ ಅಸಮಾನತೆ ಮುಂತಾದವುಗಳನ್ನು ವರಮಾನ-ಉತ್ಪನ್ನಗಳಿಗೆ ಸಂಬಂಧಿಸಿದ ನೆಲೆಯಲ್ಲಿ ಪರಿಭಾವಿಸುವುದು ಸಾಧ್ಯವಿಲ್ಲ" (ಸಿ.ಸಿ.ಕಥನ-ಟಿ.ಆರ್.ಸಿ-ಪು.19). ಬಹುಶಃ ಭಾರತೀಯ ಪರಂಪರೆಯಲ್ಲಿ ವ್ಯಕ್ತ ಅವ್ಯಕ್ತ ನೆಲೆಯಲ್ಲಿರುವ 'ಸ್ತ್ರೀ' ಶೋಷಣೆಯ ನೆಲೆಯನ್ನು ಅಮರ್ತ್ಯಸೇನ್ ನಿರೂಪಿಸಿರುವಂತೆ ಬೇರ್‍ಯಾರೂ ನಿರೂಪಿಸಲು ಸಾಧ್ಯವಿಲ್ಲ. ಅಲ್ಲದೆ ಆಧುನಿಕ ಎಂದು ಭ್ರಮಿಸುತ್ತಿರುವ ಕಾಲ ಹುಟ್ಟು ಹಾಕಿರುವ 'ಸ್ತ್ರೀ' ಶೋಷಣೆಯ ಸ್ವರೂಪವನ್ನು ಸಹ ಅವರೇ ತಮ್ಮ ಅಭಿವೃದ್ಧಿ ಅಧ್ಯಯನದಲ್ಲಿ ವಿವರಿಸಿದ್ದಾರೆ.

ಆಧುನೀಕರಣ, ನಗರೀಕರಣ, ಕೈಗಾರೀಕರಣ ಮುಂತಾದವುಗಳನ್ನು ಒಳಗೊಂಡ ವರಮಾನಮುಖಿ ಅಭಿವೃದ್ಧಿಯು ಲಿಂಗಸಂಬಂಧಿ ಅಸಮಾನತೆಗಳನ್ನು ನಿವಾರಿಸುವುದಕ್ಕೆ ಪ್ರತಿಯಾಗಿ ಅದು ಲಿಂಗ ಸಂಬಂಧಗಳಲ್ಲಿನ ಅಂತರ ಅಸಮಾನತೆಗಳನ್ನು ತೀವ್ರಗೊಳಿಸುತ್ತದೆ. ಏಕೆಂದರೆ ಅದು ಏಕಲಿಂಗ-ಏಕಮುಖಿಯ ಪ್ರಕ್ರಿಯೆಯಾಗಿದೆ. ಈ ಬಗೆಯ ಅಭಿವೃದ್ಧಿ ಮಹಿಳೆಯರ ಹಿತಾಸಕ್ತಿಗಳಿಗೆ ಪ್ರತಿಕೂಲವಾಗಿ ಪರಿಣಮಿಸುತ್ತದೆ. ಮಹಿಳೆಯರ ವಿಮೋಚನೆ, ಸ್ವಾಯತ್ತತೆ ಮತ್ತು ಸಶಕ್ತೀಕರಣಗಳಿಗೆ ಇಲ್ಲಿ ಸ್ಥಾನ ವಿರುವುದಿಲ್ಲ. (ಸಿ.ಸಿ.ಸಿ.ಟಿ.ಆರ್.ಸಿ.ಪು.59). ಆದ್ದರಿಂದ ಈ ಅಧ್ಯಾಯದಲ್ಲಿ ಮೈಸೂರು ಸಂಸ್ಥಾನದಲ್ಲಿ ಮಹಿಳೆಯರ ಸ್ಥಾನಮಾನದ ಬಗ್ಗೆ ಮತ್ತು ಅಂದಿನ ಸಾಮಾಜಿಕ ಸಂದರ್ಭದಲ್ಲಿ ಅವರಲ್ಲಾದ ಬದಲಾವಣೆಗಳನ್ನು ಮೇಲಿನ ತಾತ್ವಿಕ ಚರ್ಚೆಗಳ ಹಿನ್ನಲೆಯಲ್ಲಿ ಇನ್ನು ಮುಂದೆ ಗಮನಿಸೋಣ.

## 2.2 ಮೈಸೂರು ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿ

"ವಸಾಹತು ಭಾರತದ ಸುಮಾರು 565 ದೇಶೀ ಸಂಸ್ಥಾನಗಳಲ್ಲಿ ಮೈಸೂರು ವಿಸ್ತೀರ್ಣದಲ್ಲಿ ಎರಡನೆಯ ದೊಡ್ಡ ಸಂಸ್ಥಾನ. 1799ರಲ್ಲಿ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನ್ ಸೋತು ಕೊಲ್ಲಲ್ಪಟ್ಟ ನಂತರ ಆತನ ರಾಜ್ಯವನ್ನು ಹರಿದು ಹಂಚಿಕೊಳ್ಳಲಾಯಿತು. ಒಂದು ಭಾಗ ಬ್ರಿಟಿಷರಿಗೆ, ಇನ್ನೊಂದು ಭಾಗ ಹೈದರಾಬಾದ್ ನಿಜಾಮನ ಪಾಲಿಗೆ ಹೋದರೆ ಉಳಿದದ್ದನ್ನು 1763ರ ನಂತರ ಮೂಲೆ ಗುಂಪಾಗಿದ್ದು ಮೈಸೂರು ಒಡೆಯರ ಮನೆತನಕ್ಕೆ ವಹಿಸಿಕೊಡಲಾಯಿತು. ಒಡೆಯರ ವಂಶದ ಈ ಪುನಶ್ಚೇತನ ಬ್ರಿಟಿಷರು ಹೇರಿದ ಷರತ್ತುಗಳಿಗೆ ಒಳಪಟ್ಟಿತ್ತು. ತಾವು ದಯಪಾಲಿಸಿದ ರಾಜ್ಯವನ್ನು ವಾಪಸ್ಸು ಪಡೆಯಲು ಸಾಮ್ರಾಜ್ಯಶಾಹಿ ಬ್ರಿಟಿಷರು

ಒಪ್ಪಂದದಲ್ಲೇ ಅನುವು ಮಾಡಿಕೊಂಡಿದ್ದರು. ಇದಕ್ಕೆ ಕಾರಣಗಳನ್ನು ಸೃಷ್ಟಿಸಿಕೊಳ್ಳುವ ಜಾಣ್ಮೆ ಅವರಲ್ಲಿತ್ತು. 1831ರಲ್ಲಿ ನಡೆದ ನಗರ ದಂಗೆಯ ನೆಪವೊಡ್ಡಿ ಒಡೆಯರ ಮೈಸೂರನ್ನೂ ಬ್ರಿಟಿಷರು ತಮ್ಮ ನೇರ ಆಡಳಿತಕ್ಕೆ ವಹಿಸಿಕೊಂಡರು."[4]

1831 ರಿಂದ 1881 ರವರೆಗೆ ಮೈಸೂರು ಬಿಳಿಯರ ಆಡಳಿತಕ್ಕೆ ಒಳಪಟ್ಟು ಹಲವಾರು ಬದಲಾವಣೆಗಳನ್ನು ಕಂಡಿತು. ಹಲವಾರು ಕಾರಣಗಳಿಂದ ಮೈಸೂರನ್ನು ಅನಿವಾರ್ಯವಾಗಿ ಮತ್ತೆ 1881ರಲ್ಲಿ ಒಡೆಯರಿಗೆ ವಹಿಸಿಕೊಡಲಾಯಿತು. ಹಾಗೆ ಮಾಡಿದಾಗ ಬ್ರಿಟಿಷರ ಷರತ್ತುಗಳು ಹೆಚ್ಚಾದವು. "1799ರಲ್ಲಿ ಮೈಸೂರು ಪ್ರಾಂತ್ಯ ಸೃಷ್ಟಿಯಾದಾಗ ಇತರ ಷರತ್ತುಗಳೊಂದಿಗೆ ರಾಜರು ವರ್ಷಕ್ಕೆ 24.5 ಲಕ್ಷ ರೂಪಾಯಿಗಳ ಕಪ್ಪಕೊಡಬೇಕಾಗಿತ್ತು. 1881ರಲ್ಲಿ ಅದನ್ನು 35 ಲಕ್ಷ ರೂಪಾಯಿಗಳಿಗೆ ಏರಿಸಲಾಯಿತು."[5] ಹೀಗೆ ಎರಡು ಬಾರಿಯೂ ಒಡೆಯರನ್ನು 'ಪುನಶ್ಚೇತ'ಗೊಳಿಸಿದ್ದು ಬ್ರಿಟಿಷ್ ಆಳರಸರೇ. ಅವರದೇ ಆದ ಷರತ್ತುಗಳೊಂದಿಗೆ ಅದನ್ನು ಮಾಡಲಾಯಿತು. ಹೀಗಾಗಿ ಮೈಸೂರು ಸಂಸ್ಥಾನ 'ಸಾಮ್ರಾಜ್ಯಶಾಹಿಯ ಕೂಸು' ಈ ಹಿನ್ನಲೆಯಲ್ಲೇ ನಾವು ಮೈಸೂರಿನ ಮೇಲೆ ವಿಧಿಸಿದ ನಿರ್ದಯಿ ಕಪ್ಪ ಮುಂತಾದ ತೆರಿಗೆಗಳನ್ನು ನೋಡಬೇಕು. ಮೈಸೂರು ಮತ್ತು ಮೈಸೂರಿಗರು ಬ್ರಿಟಿಷ್ ವಸಾಹತುವಾದಿಗಳ ಈ ಶೋಷಣೆಯನ್ನು 150 ವರ್ಷಗಳಷ್ಟು ದೀರ್ಘಕಾಲ ಸಹಿಸಬೇಕಾಯಿತು. ರಾಜ್ಯದಲ್ಲೇ ಆಗಲಿ, ಹೊರಗಡೆಯೇ ಆಗಲಿ ಈ ಶೋಷಣೆ ಕುರಿತ ಚರ್ಚೆಯನ್ನು 'ಒಪ್ಪಂದ'ದ ಮೂಲಕವೇ ನಿಷೇಧಿಸಲಾಗಿತ್ತು. ಹೀಗಾಗಿ ಅದರ ಬಗ್ಗೆ ಬಹಿರಂಗ ವಿರೋಧವಿರಲಿ, ಚರ್ಚೆಗೂ ಅವಕಾಶಬಲ್ಲವಾಗಿತ್ತು.

ರಾಜ್ಯ ಕಳೆದುಕೊಂಡ ಮುಮ್ಮುಡಿ ಕೃಷ್ಣರಾಜ ಒಡೆಯರು ಅದನ್ನು ವಾಪಸ್ಸು ಪಡೆಯಲು ತೀವ್ರ ಪ್ರಯತ್ನ ನಡೆಸಿದರು. "ಅದಕ್ಕಾಗಿ ಬ್ರಿಟನ್ನಿನಲ್ಲಿ ಮತ್ತು ಸ್ವದೇಶದಲ್ಲಿ ಅಪಾರ ಹಣ ವೆಚ್ಚ ಮಾಡಿ ಬಿಳಿಯರನ್ನು ಸಾಕಿಕೊಂಡರು. ಆದರೂ ಅವರಿಗೆ ಅಧಿಕಾರ ಮರಳಿ ದೊರೆಯದೆ ಹೊದರೂ ಅವರ ಸಾಕು ಮಗ ವಯಸ್ಕನಾದ ಮೇಲೆ ರಾಜ್ಯಾಧಿಕಾರ ತನ್ನ ವಂಶಕ್ಕೆ ದೊರೆಯುವ ಭರವಸೆ ಸಿಕ್ಕಿತು. ಈ ಪ್ರಯತ್ನದಲ್ಲಿ 'ಮದ್ರಾಸ್ ನೇಟಿವ್ ಅಸೋಸಿಯೇಷನ್' ಮತ್ತು ಇತರ ಸಾರ್ವಜನಿಕ ಸಂಸ್ಥೆಗಳು, ಪತ್ರಿಕೆಗಳು ಮತ್ತು ಪ್ರಭಾವಿ ಭಾರತೀಯರು ಒಡೆಯರಿಗೆ ಸಹಾಯಹಸ್ತ ನೀಡಿದರು."[6] ಹೀಗಾಗಿ ಸಾರ್ವಜನಿಕ ಅಭಿಪ್ರಾಯದ ಮಹತ್ವ ಒಡೆಯರಿಗೆ ತಿಳಿದಿತ್ತು. ಅದನ್ನು ಕಡೆಗಣಿಸಲು ಯಾರಿಗೂ ಸಾಧ್ಯವಿಲ್ಲವೆಂಬ ಅಂಶವೂ ಮನದಟ್ಟಾಗಿತ್ತು. ಬ್ರಿಟಿಷ್ ಸಾಮ್ರಾಜ್ಯವಾದಿಗಳ ಕೃಪೆಯೂ

ಅವರಿಗೆ ಎಲ್ಲಕ್ಕಿಂತ ಮುಖ್ಯವೆಂಬ ಅರಿವಿತ್ತು. ಹೀಗೆ ಒಂದು ಕಡೆ ಸಾರ್ವಜನಿಕ ಅಭಿಪ್ರಾಯ, ಇನ್ನೊಂದು ಕಡೆ ಬ್ರಿಟಿಷ್ ಆಳರಸರು ಎರಡನ್ನೂ ಓಲೈಸಬೇಕಾದ ಅನಿವಾರ್ಯತೆಗೆ ಅವರು ಸಿಕ್ಕಿದ್ದರು. ಎರಡನ್ನೂ ಒಟ್ಟಿಗೇ ನಿಭಾಯಿಸಬಲ್ಲ ತಂತ್ರವೊಂದನ್ನು ಮಹಾರಾಜರ ಆಡಳಿತ ರೂಪಿಸಿಕೊಂಡಿತು. ಸರ್ಕಾರ ಏನು ಕ್ರಮ ಕೈಗೊಂಡರೂ ಯಾರಿಗೂ ತೀವ್ರ ಅತೃಪ್ತಿಯುಂಟಾಗದಂತೆ ತೀರ್ಮಾಣ ತೆಗೆದುಕೊಳ್ಳುವ ಪ್ರವೃತ್ತಿ ಬೆಳೆಸಿಕೊಂಡರು.

ಈ ತಂತ್ರಗಾರಿಕೆ 1947 ರಲ್ಲಿ ಸ್ವಾತಂತ್ರ್ಯ ಪ್ರಾಪ್ತಿಗಾಗಿ ಅರಸೊತ್ತಿಗೆ ಇಲ್ಲವಾಗುವವರೆಗೂ ಹಾಗೂ ಹೀಗೂ ಮುಂದುವರಿಯಿತು. 1881ರಲ್ಲಿ ಈ ತಂತ್ರಗಾರಿಕೆ ಹುಟ್ಟುಹಾಕಿದ್ದೇ ಮೈಸೂರು ಪ್ರಜಾಪ್ರತಿನಿಧಿ ಸಭೆ. ಈ ಪ್ರತಿನಿಧಿ ಸಭೆ ಆರಂಭದಲ್ಲಿ ಹೆಸರಿಗೆ ಮಾತ್ರ ಪ್ರತಿನಿಧಿ ಸಭೆಯಾಗಿದ್ದು ಯಾವುದೇ ಅಧಿಕಾರ ಹೊಂದಿರಲಿಲ್ಲ. ವರ್ಷಕ್ಕೆ ಒಮ್ಮೆ ದಸರಾ ಹಬ್ಬದ ಸಂದರ್ಭದಲ್ಲಿ ಕರೆಯಲಾಗುತ್ತಿದ್ದ ಈ ಸಭೆಗೆ ರಾಜ್ಯ ಶ್ರೀಮಂತ ರೈತರು ವರ್ತಕರು ಮತ್ತು ಮೇಲಧಿಕಾರಿಗಳು ಆಹ್ವಾನಿತರು. ಮೈಸೂರಿಗೆ ಬಂದು ದಸರಾ ಉತ್ಸವವನ್ನು ಮಹಾರಾಜರ ದರ್ಬಾರು, ಅಂಬಾರಿ ಮೆರವಣಿಗೆಗಳನ್ನು ಕಣ್ಣು ತಣಿಯುವಷ್ಟು ನೋಡಿ ದಿವಾನರು ಹೇಳಿದ್ದನ್ನು ಕೇಳಿ, ಇದ್ದರೆ ಮನವಿ ಅರ್ಪಿಸಿ ಊರುಗಳಿಗೆ ಮರಳುವುದೇ ಸದಸ್ಯರು ಮಾಡುತ್ತಿದ್ದ ಕೆಲಸವಾಗಿತ್ತು.

ಅಧಿಕಾರರಹಿತ ಪ್ರತಿನಿಧಿ ಸಭೆಯ ಸ್ಥಾಪನೆಯು ಒಂದು ರೀತಿಯಲ್ಲಿ ಮೈಸೂರಿನ ಸಾರ್ವಜನಿಕರು ಖಾಸಗಿ ಸಾರ್ವಜನಿಕ ಸಂಸ್ಥೆಗಳನ್ನು ಕಟ್ಟುವ ಪ್ರಯತ್ನಗಳಿಗೆ ಅಡ್ಡಿಯುಂಟು ಮಾಡಿತು. ರಾಷ್ಟ್ರೀಯ ಕಾಂಗ್ರೆಸ್ಸಿಗಿಂತ ಐದು ವರ್ಷಗಳ ಮುನ್ನವೇ ಆರಂಭವಾದ ಈ ಸಭೆ, ಮೈಸೂರಿಗರು ಸರ್ಕಾರವನ್ನು ಟೀಕೆ ಮಾಡುವುದಕ್ಕೂ ಆಸ್ಪದವಿಲ್ಲದಂತೆ ಮಾಡಿತು. ಏಕೆಂದರೆ ಬ್ರಿಟಿಷ್ ಪ್ರಾಂತ್ಯಗಳ ಭಾರತೀಯ ನಾಯಕರು ಮತ್ತು ಅವರ ಪತ್ರಿಕೆಗಳು ದೇಶೀಯ ರಾಜರು ಸ್ಥಾಪಿಸಿದ ಈ ಪ್ರತಿನಿಧಿ ಸಭೆಯನ್ನು ಹಾಡಿ ಹೊಗಳುತ್ತಿದ್ದರು. ಅಷ್ಟೇ ಅಲ್ಲ ಬ್ರಿಟಿಷ್ ಪ್ರಾಂತ್ಯಗಳಲ್ಲೂ ಅದೇ ರೀತಿಯ ಸಭೆಗಳನ್ನು ಸ್ಥಾಪಿಸಿ ಆ ಮೂಲಕ ಸಾರ್ವಜನಿಕ ಅಭಿಪ್ರಾಯಗಳನ್ನು ತಿಳಿಯುವಂತೆ ಒತ್ತಾಯ ಮಾಡಲಾರಂಭಿಸಿದರು. 1907ರಲ್ಲಿ ಮೈಸೂರು ನ್ಯಾಯ ವಿಧೇಯಕ ಸಭೆಯೂ ಆರಂಭಗೊಂಡಿತು. ಅದೂ ಮಹಾರಾಜರ ಇಚ್ಛೆಯಂತೆಯೇ ಹೊರತು ಸಾರ್ವಜನಿಕರ ಒತ್ತಾಯದಿಂದಲ್ಲ.

ಕಾಂಗ್ರೆಸ್ ನಾಯಕರಾದಿಯಾಗಿ ಬ್ರಿಟಿಷ್ ಪ್ರಾಂತ್ಯಗಳ ಸಾರ್ವಜನಿಕರು ಮೈಸೂರಿನ ಪ್ರತಿನಿಧಿ ಸಭೆಯನ್ನು 'ಪೂರ್ವದೇಶಗಳ ಜನತಾಂತ್ರಿಕ ಕಲ್ಪನೆ'ಯದೆಂದು, ನ್ಯಾಯ ವಿಧಾಯಕ ಸಭೆಯನ್ನು 'ಪಾಶ್ಚಾತ್ಯ ಮಾದರಿ'ಯದೆಂದು ಹಾಡಿ ಹೊಗಳಿ ಎರಡನ್ನೂ ಮೇಳೈಸಿಕೊಂಡ ಮೈಸೂರಿನ ಕಡೆ ಹೆಮ್ಮೆಯಿಂದ ನೋಡತೊಡಗಿದರು.

ಆಗ ಪ್ರಚಲಿತವಿದ್ದ ಸಾಮಾಜಿಕ, ಧಾರ್ಮಿಕ ಸುಧಾರಣೆಗಳು, ನೇರವಾಗಿ ರಾಜಕೀಯಕ್ಕೆ ಸಂಬಂಧಪಟ್ಟಿರಲಿಲ್ಲವಾದ್ದರಿಂದ ಮೈಸೂರು ಸರ್ಕಾರ ಅಲ್ಲಿಯೂ ಕೈಯಾಡಿಸಿತು. ಬಾಲ್ಯವಿವಾಹ, ಮಹಿಳಾ ಶಿಕ್ಷಣ, ಅಸ್ಪೃಶ್ಯರಿಗಾಗಿ ವಿಶೇಷ ಸ್ಕೂಲುಗಳು ಮುಂತಾದ ಬಗ್ಗೆ ಕೆಲವು ಕಾನೂನುಗಳನ್ನು ತಂದು ಸುಧಾರಣೆಗಳಲ್ಲಿ ಆಸಕ್ತಿಯಿದ್ದವರನ್ನು ತಣಿಸಿತು. ಹಾಗೆ ಅವರ ಬೆಂಬಲ ಗಳಿಸಿಕೊಂಡು ಹೊಗಳಿಕೆಗೆ ಪಾತ್ರವಾಯಿತು. ಮೈಸೂರಿಗರು ಇಲ್ಲೂ ಚಕಾರವೆತ್ತುವಂತಿರಲಿಲ್ಲ.

ಬ್ರಿಟಿಷ್ ಪ್ರಾಂತ್ಯಗಳ ನಾಯಕರು ಒತ್ತಾಯಪಡಿಸುತ್ತಿದ್ದ ಬಿಳಿಯರು ಮತ್ತು ಭಾರತೀಯರ ನಡುವಿನ ಸಮಾನತೆಯ ಸಮಸ್ಯೆಯೂ ಮೈಸೂರಿನಲ್ಲಿ ಅಪ್ರಸ್ತುತವೆನಿಸಿತ್ತು. ಯಾಕೆಂದರೆ ಮೇಲ್ನೋಟಕ್ಕೆ ತಿಳಿಯುವಂತೆ ಮಹಾರಾಜರಾದಿಯಾಗಿ ಮೈಸೂರಿನಲ್ಲಿ ದೇಶೀಯರೇ ಬ್ರಿಟಿಷರ ಅಂಕೆಗೊಳಪಟ್ಟು ಆಡಳಿತ ನಡೆಸುತ್ತಿದ್ದರು. ಆದ್ದರಿಂದ ರಾಷ್ಟ್ರೀಯ ಕಾಂಗ್ರೆಸ್ಸೂ ಮೈಸೂರಿನಂಥ ದೇಶೀ ಸಂಸ್ಥಾನಗಳ ಜನರ ಸಮಸ್ಯೆಗಳನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಯಾಕೆಂದರೆ ಅಲ್ಲಿ ಎಲ್ಲ ದೇಶೀಮಯವಾಗಿತ್ತು. ಅವರು ಬ್ರಿಟಿಷರಿಂದ ಕೇಳುತ್ತಿದ್ದುದೂ ಅಷ್ಟನ್ನೇ. ಹೀಗಾಗಿ ಮೈಸೂರು ಸರ್ಕಾರ 1894ರಲ್ಲಿ ಒಂದು ಪತ್ರಿಕೆಯನ್ನು ಮುಟ್ಟುಗೋಲು ಹಾಕಿಕೊಂಡಾಗಲೂ ಕಾಂಗ್ರೆಸ್ ಆ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ. ಕಾಂಗ್ರೆಸ್ಸಿನಂಥ ಸಂಸ್ಥೆಗಳ ಉಪಯುಕ್ತತೆ ತಿಳಿದಿದ್ದ ಮಹಾರಾಜರು ಮದ್ರಾಸಿನಲ್ಲಿ 1887ರಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ರೂ.1000 ದಷ್ಟು ದೇಣಿಗೆ ನೀಡಿ ತಮ್ಮ ಸರ್ಕಾರದ ಅಧಿಕಾರಿಗಳನ್ನು ಅಲ್ಲಿಗೆ ಕಳಿಸಿಕೊಟ್ಟಿದ್ದರು. ನಾಲ್ವಡಿ ಕೃಷ್ಣರಾಜರು 1903ರಲ್ಲಿ ಕಾಂಗ್ರೆಸ್ ಅಧಿವೇಶನದ ಅಂಗವಾಗಿ ನಡೆದ ಕೈಗಾರಿಕಾ ವಸ್ತುಪ್ರದರ್ಶನವನ್ನು ಉದ್ಘಾಟಿಸಿ ಬಂದರು.

ಇನ್ನೊಂದು ಕಡೆ ಬ್ರಿಟಿಷ್ ಸಾಮ್ರಾಜ್ಯವಾದಿಗಳು ಮೈಸೂರಿನ ವಿರುದ್ಧ ಏನೂ ತಕರಾರು ಮಾಡುವಂತಿರಲಿಲ್ಲ. ಅವರಿಗೆ ಬೇಕಾದದ್ದೇನೆಂದು ತಾವೇ ಅರ್ಥಮಾಡಿಕೊಂಡು ಕೇಳುವ ಮುಂಚೆಯೇ ಆ ಕೆಲಸ ಮಾಡುವ ಜಾಣ್ಮೆಯನ್ನು ಮೊದಲ ಇಬ್ಬರು ದಿವಾನರೂ ಹೊಂದಿದ್ದರು. ಬಿಳಿಯರ ಹಿತಾಸಕ್ತಿಗಳನ್ನು ಮೈಸೂರಿನಲ್ಲಿ ಬೆಳೆಯಲು ಅವಕಾಶ ಮಾಡಿಕೊಡಲಾಯಿತು.

ಆದ್ದರಿಂದಲೇ 'ಒಬ್ಬನೇ ವ್ಯಕ್ತಿ'ಯ (ದಿವಾನ್ ಶೇಷಾದ್ರಿ ಐಯ್ಯರ್) ಆಡಳಿತವನ್ನು ವಸಾಹತುಶಾಹಿಯೂ ಬೆಂಬಲಿಸಿತು. ಹೀಗೆ ಮೈಸೂರು ಸರ್ಕಾರ ದೇಶೀ ಮತ್ತು ವಿದೇಶೀ ಪ್ರಭಾವಿ ಶಕ್ತಿಗಳನ್ನು ಸಂತುಷ್ಟಗೊಳಿಸಿತು.

ಸಣ್ಣ ರೈತರಿಂದ ಕೂಡಿದ ಮೈಸೂರು ಸಂಸ್ಥಾನದ ಗ್ರಾಮಾಂತರ ಪ್ರದೇಶ ವಸಾಹತುಶಾಹಿಯ ಆರಂಭ ಕಾಲದ ರಾಜಕೀಯದಿಂದ ದೂರವೇ ಉಳಿಯಿತು. ಜೊತೆಗೆ ವಸಾಹತುಶಾಹಿ ಪ್ರಭಾವ ಮೈಸೂರು ಪ್ರಾಂತ್ಯದ ಆಳಕ್ಕೆ ಇಳಿದಿದ್ದು ತೀರ ನಿಧಾನವಾಗಿ. ಅದಕ್ಕೂ ಮಿಗಿಲಾಗಿ ನಗರ ಪ್ರದೇಶದ ಶ್ರೀಮಂತ ವರ್ತಕರು ಮತ್ತು ಸರ್ಕಾರಿ ಅಧಿಕಾರಿಗಳಿಗೆ ಗ್ರಾಮೀಣ ಪ್ರದೇಶಗಳ ಆಗುಹೋಗುಗಳಲ್ಲಿ ಇದ್ದ ಒಂದೇ ಒಂದು ಆಸಕ್ತಿಯೆಂದರೆ ಕಂದಾಯ ಮಾತ್ರ. ಮೈಸೂರಿನಲ್ಲಿ ಇತರ ಪ್ರದೇಶಗಳಷ್ಟು ಜಮೀನಿದ್ದ ಮನೆತನಗಳು ಕೇವಲ ಎಂಬತ್ತೊಂಭತ್ತು ಮಾತ್ರ. ಈ ಮನೆತನಗಳೂ ಅವಿಭಕ್ತ ಕುಟುಂಬಗಳ ಹಿಸ್ಸೆಯಿಂದಾಗಿ ಕ್ರಮೇಣ ಛಿದ್ರವಾದವು. ಗ್ರಾಮೀಣ ಪ್ರದೇಶ ಒಂದು ರೀತಿಯಲ್ಲಿ ಆರ್ಥಿಕ ಮುಗ್ಗಟ್ಟು ಮತ್ತು ಕ್ಷಾಮದಿಂದ ತತ್ತರಿಸಿ ಹೋಗಿತ್ತು.

ಜಗತ್ತನ್ನೇ ಅಲುಗಾಡಿಸಿದ 1929–1931ರ ಅವಧಿಯ ಆರ್ಥಿಕ ಮುಗ್ಗಟ್ಟು ರೈತರನ್ನೂ ಕಾರ್ಮಿಕರನ್ನು ಕಾಡಿತು. ತಮ್ಮನ್ನು ರಕ್ಷಿಸಬೇಕಾದ ಸರ್ಕಾರ ಬೇಜವಾಬ್ದಾರಿಯಿಂದ ವರ್ತಿಸಿದ್ದು ಅವರನ್ನು ರೊಚ್ಚಿಗೆಬ್ಬಿಸಿತು. ಅಂಥಾ ಸರ್ಕಾರದ ಜಾಗದಲ್ಲಿ ತಮ್ಮದೇ ಜನಪ್ರತಿನಿಧಿಗಳ ಸರ್ಕಾರಗಳಿದ್ದರೆ ತಮ್ಮ ಮೊರೆ ಕೇಳಿಸುತ್ತಿತ್ತೆಂದು ಅವರು ಭಾವಿಸಿದ್ದು ಸಹಜವಾಗಿತ್ತು. ಅಲ್ಲಲ್ಲಿ ನಡೆದ ಮುಷ್ಕರ, ಪ್ರತಿಭಟನೆಗಳನ್ನು ಸರ್ಕಾರ ಕಡೆಗಣಿಸಿತು ಅಥವಾ ಹಿಂಸಾತ್ಮಕವಾಗಿ ಹತ್ತಿಕ್ಕಿತು. ಮೈಸೂರಿಗಿದ್ದ 'ಮಾದರಿ ರಾಜ್ಯ'ವೆಂಬ ಬಿರುದು ಟೊಳ್ಳು ಎಂದು ಜನರಿಗೆ ಅನ್ನಿಸತೊಡಗಿತು. ರಾಜಶಾಹಿಯ ವಿರುದ್ಧ ಜನಾಭಿಪ್ರಾಯ ರೂಪಿತವಾದಂತೆ, ದಮನವೂ ಹೆಚ್ಚಾಯಿತು. ದಿವಾನ್ ಮಿರ್ಜಾ ಇಸ್ಮಾಯಿಲ್ಲರು 1932 ತರುವಾಯ ರಾಜ್ಯಾಧಿಕಾರವನ್ನು ಪ್ರಶ್ನಿಸುವಂಥ ಎಲ್ಲ ರಾಜಕೀಯ ಚಟುವಟಿಕೆಗಳನ್ನೂ ದ್ವೇಷಿಸಿ ಹತ್ತಿಕ್ಕಿದ್ದರು. ಸರ್ಕಾರದ ಈ ಜನತಂತ್ರ ವಿರೋಧಿ ನೀತಿಯೇ ಪರಸ್ಪರ ಸಂದೇಹಿಸುತ್ತಿದ್ದವರನ್ನು ಒಟ್ಟುಗೂಡಿಸಲು ಸಹಾಯಕವಾಯಿತು. ಮೈಸೂರು ಸರ್ಕಾರ ರಾಜಕೀಯ ಭಿನ್ನಮತವನ್ನು ಹತ್ತಿಕ್ಕಿದ ರೀತಿ ಅದರ ಅಭಿಮಾನಿಗಳನ್ನೂ ಬೆಚ್ಚಿಸಿತು. ವಿ.ವಿ.ಗಿರಿಯಂಥ

ಸೌಮ್ಯವಾದಿ ಕಾರ್ಮಿಕ ನಾಯಕನನ್ನು ಮೈಸೂರು ರಾಜ್ಯ ಪ್ರವೇಶಿಸಿದಂತೆ ಪ್ರತಿಬಂಧಕಾಜ್ಞೆ ಹೊರಡಿಸಲಾಯಿತು. ನಾರಿಮನ್, ಕಮಲಾದೇವಿ ಮುಂತಾದವರಿಗೂ ಇದೇ ಶಾಸ್ತಿಯಾಯಿತು.

ಈ ಮಧ್ಯೆ ಭಾರತ ಸರ್ಕಾರ 1935ರ ಕಾಯ್ದೆಯನ್ನು ಪ್ರಕಟಿಸಿತು. ಪ್ರಾಂತೀಯ ಮಟ್ಟದಲ್ಲಿ ಜವಾಬ್ದಾರಿ ಸರ್ಕಾರಗಳಿಗೆ ಅಧಿಕಾರ ವರ್ಗಾವಣೆಯಾಗಲಿತ್ತು. ಉದ್ದೇಶಿತ ಒಕ್ಕೂಟದ ಸದಸ್ಯತ್ವದಲ್ಲಿ 1/3 ಭಾಗ ದೇಶೀ ಸಂಸ್ಥಾನಗಳಿಂದ ಇರಬೇಕು. ಈ ಸದಸ್ಯರನ್ನು ಅಲ್ಲಿಯ ಸರ್ಕಾರಗಳೇ ನಾಮಕರಣ ಮಾಡುತ್ತವೆ. ಅನ್ಯರಿಂದ ಆಯ್ಕೆಯಾಗಬೇಕಾಗಿಲ್ಲ. ಸಂಸ್ಥಾನಗಳಲ್ಲಿನ ಸರ್ಕಾರದ ಸ್ವರೂಪದ ಬಗ್ಗೆ ಅಲ್ಲಿ ಯಾವುದೇ ಪ್ರಸ್ತಾಪವಿರಲಿಲ್ಲ. ಈ ಸಂಗತಿಗಳು ಸಂಸ್ಥಾನಿಗರೆಲ್ಲರಿಗೂ ಗಾಬರಿಯುಂಟು ಮಾಡಿದವು. ರಾಷ್ಟ್ರೀಯ ಚಳವಳಿಯ ಮುಂದಾಳುಗಳೂ ಸಂಸ್ಥಾನಿ ಭಾರತದ ಭವಿಷ್ಯ ಮತ್ತು ಅದು ಇಡೀ ವಸಾಹತು ವಿರೋಧಿ ಚಳವಳಿಯ ಮೇಲೆ ಮಾಡಬಲ್ಲ ದುಷ್ಪರಿಣಾಮದ ಬಗ್ಗೆ ಚಿಂತಿತರಾದರು. ಭಾರತ ಒಕ್ಕೂಟದ ಸಂಸತ್ತಿನಲ್ಲಿ ದೇಶೀ ಸಂಸ್ಥಾನಗಳಿಂದ ಬರುವ ನಾಮಕರಣಗೊಂಡ ಸದಸ್ಯರುಗಳು ಬ್ರಿಟಿಷರ ಪರವೇ ಇರುವುದು ಖಚಿತವಾಗಿದ್ದುದರಿಂದ, ಸಂಸತ್ತು ಬ್ರಿಟಿಷರ ಅಡಿಯಾಳಾಗಿರುವುದು ಗ್ಯಾರಂಟಿ. ಅದನ್ನು ತಪ್ಪಿಸಬೇಕಾದರೆ ಸಂಸ್ಥಾನಗಳ ಸದಸ್ಯರೂ ಜನರಿಂದ ಆಯ್ಕೆಯಾದವರಾಗಬೇಕು. ಅಂದಿನ ಪರಿಸ್ಥಿತಿಯಲ್ಲಿ ಅದು ಅಸಾಧ್ಯವಾಗಿತ್ತು. ಸಂಸ್ಥಾನಿಗರೇ ಆ ಬಗ್ಗೆ ಆಸಕ್ತಿವಹಿಸಿ ತೀವ್ರ ಹೊಗಾಟ ನಡೆಸಿದರೆ ಮಾತ್ರ ಬದಲಾವಣೆಯಾಗಬಹುದೆಂದು ಅವರು ತರ್ಕಿಸಿದರು. ಆ ಹಿನ್ನಲೆಯಲ್ಲೇ ದೇಶೀ ಸಂಸ್ಥಾನಗಳ ರಾಷ್ಟ್ರೀಯ ವಾದಿಗಳು ಜನ ಸಂಘಟನೆ ಮಾಡುವುದು ಅವಶ್ಯವೂ, ಅನಿವಾರ್ಯವೂ ಆಗಿತ್ತು. ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥಾನಗಳಿಂದ 'ದೂರವಿರುವ' ತನ್ನ ಎಂದಿನ ನೀತಿಯನ್ನು ಬದಲಾಯಿಸುವುದು ಅನಿವಾರ್ಯವಾಯಿತು.

1937ರಲ್ಲಿ ಬ್ರಿಟಿಷ್ ಪ್ರಾಂತ್ಯಗಳ ಪ್ರತಿನಿಧಿ ಸಭೆಗಳಿಗೆ ಚುನಾವಣೆ ನಡೆದು, ಜನಪ್ರತಿನಿಧಿಗಳ ಸರ್ಕಾರ ಅಸ್ತಿತ್ವಕ್ಕೆ ಬಂದು ಭಾರತೀಯರೇ ಅಧಿಕಾರ ವಹಿಸಿಕೊಂಡರು. ಕಾಂಗ್ರೆಸ್ಸಿನ ಬೆರಳೆಣಿಕೆಯಷ್ಟು ಮಂದಿಗೂ ಬಹುಸಂಖ್ಯಾತ ಬ್ರಾಹ್ಮಣೇತರ ಪಕ್ಷದವರಿಗೂ ಇದು ಒಂದು ದೊಡ್ಡ ಪಾಠವನ್ನೂ ಕಲಿಸಿತು. ಬ್ರಿಟಿಷ್ ಭಾರತದಲ್ಲಿ ಅದು ಸಾಧ್ಯವಾದದ್ದು ಅಲ್ಲಿಯ ನಾಯಕರು ಕಾಂಗ್ರೆಸ್ ನೇತೃತ್ವದಲ್ಲಿ ಜನರನ್ನು ಸಂಘಟಿಸಿ ಹೋರಾಟ ನಡೆಸಿದ್ದರಿಂದ. ಅನ್ಯ ಸಂಘಟನೆ, ಹೋರಾಟಗಳಿಂದ ಮಾತ್ರವೇ ಸರ್ವಾಧಿಕಾರವನ್ನು ಮಣಿಸಿ, ಜವಾಬ್ದಾರಿ ಸರ್ಕಾರ ಸ್ಥಾಪಿಸಲು ಸಾಧ್ಯವೆಂದು ಅವರಿಗೆ

ಮತ್ತೊಮ್ಮೆ ಮನದಟ್ಟಾಯಿತು. ಮೈಸೂರು ಸರ್ಕಾರ ಸ್ಥಾಪಿಸಲು ಸಾಧ್ಯವೆಂದು ಅವರಿಗೆ ಮತ್ತೊಮ್ಮೆ ಮನದಟ್ಟಾಯಿತು. ಮೈಸೂರು ಸರ್ಕಾರದ ದಮನ ನೀತಿ 1937ರ ಮಾರ್ಚಿಯಲ್ಲಿ ಪ್ರತಿನಿಧಿ ಸಭೆಗೆ ನಡೆದ ಚುನಾವಣಾ ಸಂದರ್ಭದಲ್ಲಿ ಪರಾಕಾಷ್ಟೆ ಮುಟ್ಟಿತು. ಅನ್ಯರಿಗಿದ್ದ ಅಲ್ಪಸ್ವಲ್ಪ ಹಕ್ಕುಗಳನ್ನೂ ನಿರಾಕರಿಸಲಾಯಿತು. ಕಾಂಗ್ರೆಸ್ ಮತ್ತು ಬ್ರಾಹ್ಮಣೇತರ ಪಕ್ಷಗಳೆರಡೂ ದಬ್ಬಾಳಿಕೆಗೆ ಗುರಿಯಾದವು. ಎಲ್ಲ ಅಮಾನುಷ ಅನೈತಿಕ ಕಾನೂನುಗಳನ್ನು ಮುರಿಯಿರಿ ಎಂದ ಕಾಂಗ್ರೆಸ್ ಕಛೇರಿಗೆ ಮುತ್ತಿಗೆ ಹಾಕಿತು. ಕೌನ್ಸಿಲ್‌ನ 'ಸರ್ವಾಧಿಕಾರಿ'ಯೆಂದು ನೇಮಿಸಲಾಗಿದ್ದ ಕೆ.ಟಿ.ಭಾಷ್ಯಂ ಅವರನ್ನು ಮೈಸೂರಿನ ಹೋಟೆಲ್ ಒಂದರಿಂದ ಮಧ್ಯರಾತ್ರಿಯಲ್ಲಿ ಬಂಧಿಸಿ ಜೈಲಿಗೆ ದೂಡಲಾಯಿತು.

ಆದ್ದರಿಂದ 1799ನೇ ಇಸವಿಯಲ್ಲಿ ಅಸ್ತಿತ್ವಕ್ಕೆ ಬಂದ ಮೈಸೂರು ಸಂಸ್ಥಾನದಲ್ಲಿನ ಸಾಮಾಜಿಕ ರಾಜಕೀಯ ಸ್ಥಿತಿಗತಿಗಳು ಪೂರ್ತಿಯಾಗಿ ಬ್ರಿಟಿಷ್ ವಸಾಹತುಶಾಹಿಯ ಪ್ರಭಾವಕ್ಕೊಳಗಾದವು ಎಂದರೆ ತಪ್ಪಾಗಲಾರದು. 1947ರವರೆಗೂ ಅದು ಹಾಗೆಯೇ ಮುಂದುವರೆಯಿತು. ವಸಾಹತುವಾದಿಗಳ ಕೂಸಾದ ಮೈಸೂರು ವಸಾಹತುವಾದದೊಂದಿಗೆ ಅವನತಿ ಹೊಂದುತ್ತಾ ಅದರ ಜೊತೆಯೇ ಮಾಯವಾಯಿತು. ಹೀಗಾಗಿ ವಸಾಹತುಶಾಹಿಯಿಂದಲೇ ಅದು ತ್ರಾಣ ಪಡೆಯುತ್ತಿತ್ತು. ವಸಾಹತುಶಾಹಿಯಂತೆ ತನ್ನದೇ ರೀತಿಯಲ್ಲಿ ಜನತಾಂತ್ರಿಕ ಶಕ್ತಿಯ ವಿಕಾಸಕ್ಕೆ ಪ್ರತಿರೋಧ ಒಡ್ಡಿತು. ಚಾರಿತ್ರಿಕ ಗತಿಯಲ್ಲಿ ವಸಾಹತುಶಾಹಿ ಅಸ್ತಮಿಸಿದಂತೆ ಕ್ರಮೇಣ ಅದು ರಾಷ್ಟ್ರೀಯ ಜನತಾಂತ್ರಿಕ ಭಾರತದಲ್ಲಿ ಸೇರ್ಪಡೆಯಾಗಿ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳಬೇಕಾಯಿತು.

ಈ ಎಲ್ಲ ಬೆಳವಣಿಗೆಗಳೊಂದಿಗೆ ಬಗೆಹರಿಯದೆ ಉಳಿಯುವ ಪ್ರಶ್ನೆ ಒಂದಿದೆ. ಇಡೀ ಭಾರತದಲ್ಲಿ ಮೈಸೂರು ಹಲವಾರು ಕ್ಷೇತ್ರಗಳಲ್ಲಿ ಅಭಿವೃದ್ಧಿ ಪಥವೂ ಸೇರಿದಂತೆ ಮೊದಲ ಸ್ಥಾನದಲ್ಲಿತ್ತು. ಗಾಂಧೀಜಿಯಂಥ ನಾಯಕರೇ ಮೈಸೂರನ್ನು 'ರಾಮರಾಜ್ಯ'ವೆಂದೂ ನಾಲ್ವಡಿ ಕೃಷ್ಣರಾಜರನ್ನು 'ರಾಜರ್ಷಿ'ಯೆಂದೂ ಮೆಚ್ಚಿದ್ದುಂಟು.

ಇಂದಿಗೂ ಹಳೆಯ ಮೈಸೂರು ಸಂಸ್ಥಾನದ ಕುಗ್ರಾಮಗಳ ಮನೆಗೋಡೆಗಳ ಮೇಲೆ ಮೈಸೂರು ಅರಸರ ಭಾವಚಿತ್ರಗಳು ರಾರಾಜಿಸುತ್ತಿವೆ. ಒಡೆಯರ ಮನೆತನ ತನ್ನ ಔದಾರ್ಯಕ್ಕೆ

ಪ್ರಸಿದ್ಧಿಯಾಗಿತ್ತು. ಆದರೂ ಈ ಔದಾರ್ಯ ಏಕೆ ಅವರ ಆಳ್ವಿಕೆಯನ್ನು ಸ್ವಲ್ಪ ಕಾಲ ಕೂಡಾ ಮುಂದುವರೆಸಲು ಸಹಾಯಕವಾಗಲಿಲ್ಲ? ಹಾಗೆ ನೋಡಿದರೆ ಭಾರತ ಒಕ್ಕೂಟವನ್ನು ಸೇರುವ ಒಪ್ಪಂದಕ್ಕೆ ಮೊದಲು ಸಹಿ ಹಾಕಿ ತಮ್ಮ ಅಸ್ತಿತ್ವಗಳನ್ನೇ ಕಳೆದುಕೊಂಡ ದೇಶೀ ಸಂಸ್ಥಾನಗಳಲ್ಲಿ ಮೈಸೂರು ಸಂಪದ್ಭರಿತವಾದುದು, ಹಾಗೆಯೇ ವಿಶಾಲವಾದದ್ದು. ಈ ಬೆಳವಣಿಗೆ ಮೈಸೂರು ಒಡೆಯರ ಸಾಮಾಜಿಕ ನೆಲೆ ಮತ್ತು ಸಾರ್ವಜನಿಕ ಬೆಂಬಲಗಳ ಬಗ್ಗೆ ಮೂಲಭೂತ ಪ್ರಶ್ನೆಗಳನ್ನು ಎತ್ತುತ್ತದೆ. ರಾಜಮನೆತನದ ಜನಪ್ರಿಯತೆ ಕೇವಲ ಹುಸಿಯಾಗಿತ್ತೆ? ಅಥವಾ ಮಹಾರಾಜರು ಮತ್ತು ಅವರ ಸಲಹೆಗಾರರು ಭ್ರಮಾಲೋಕದಲ್ಲಿ ವಿಹರಿಸುತ್ತಿದ್ದರೇ? ಈ ಪ್ರಶ್ನೆಗಳು ಮೈಸೂರು ಸಂಸ್ಥಾನದ 'ಮಾದರಿ ರಾಜ್ಯ'ವೆಂಬ ಪರಿಕಲ್ಪನೆಯ ಆಳಕ್ಕೆ ನಮ್ಮನ್ನು ಎಳೆದೊಯ್ಯುತ್ತದೆ. ಈ ಪ್ರಶ್ನೆಯನ್ನು ಎತ್ತಿಕೊಂಡು ಸಂಶೋಧನೆ ಮಾಡಿರುವ ಜೇಮ್ಸ್ ಮೆನೋರ್ 'ಮಾದಿ ರಾಜ್ಯ'ವೆಂಬುದು ಮೈಸೂರು ಆಳರಸರು ಪ್ರಜ್ಞಾಪೂರ್ವಕವಾಗಿ ಬೆಳೆಸಿಕೊಂಡು ಒಂದು 'ಹುಸಿ ಪ್ರತಿಮೆ' ಎಂಬ ತೀರ್ಮಾನಕ್ಕೆ ಬರುತ್ತಾರೆ. ಈ ತೀರ್ಮಾನಕ್ಕೆ ಕೆಲವೊಂದು ಸಮರ್ಥನೆಗಳನ್ನೂ ಒದಗಿಸುತ್ತಾರೆ. ಆದರೆ ಈ ಪ್ರತಿಮೆಯನ್ನು ಅಲ್ಲಗಳೆಯುವ ಉತ್ಸಾಹದಲ್ಲಿ ಮೈಸೂರಿನಲ್ಲಾದ ಹಲವಾರು ಉತ್ತಮ ಅಭಿವೃದ್ಧಿ ಕಾರ್ಯಗಳನ್ನು ಕೇವಲವೆಂದು ತಳ್ಳಿಹಾಕಿಬಿಡುತ್ತಾ ರಾಜಶಾಹಿಯ ದಮನ ನೀತಿಯನ್ನೂ ಗೌಣಗೊಳಿಸುತ್ತಾರೆ. ಮೈಸೂರಿನಲ್ಲಾದದ್ದೆಲ್ಲಾ ಹುಸಿಯಾಗಿ, ಕ್ಷುಲ್ಲಕವಾಗಿ ಅವರಿಗೆ ಕಾಣುತ್ತದೆ. ಆರ್ಥಿಕ ಕ್ಷೇತ್ರವಾಗಿರಲಿ, ಪ್ರತಿನಿಧಿ ಸಭೆಗಳಾಗಲಿ ಎಲ್ಲವೂ ಬೋಗಸ್ ಎಂದೇ ಅವರು ವಾದಿಸುತ್ತಾರೆ. ಇವುಗಳ ಸತ್ಯ ಅಸತ್ಯತೆಗಳನ್ನು ಒರೆಹಚ್ಚಿ ನೋಡುವುದು ಐತಿಹಾಸಿಕ ವಸ್ತುನಿಷ್ಠತೆಯ ದೃಷ್ಟಿಯಿಂದ ಅತ್ಯವಶ್ಯಕವಾಗಿದೆ.

ಅಲ್ಲದೆ, ಮೇಲಿನ ಪ್ರಶ್ನೆಗಳಿಗೆ ಸೂಕ್ತ ಉತ್ತರ ದೊರೆಯಬೇಕಾದರೆ ಅಂದಿನ ಸಮಾಜದಲ್ಲಿ ಬೇರುಬಿಟ್ಟಿದ್ದ ವಾಸ್ತವಗಳಾದ ಜಾತಿಪದ್ಧತಿ, ಬಾಲ್ಯವಿವಾಹ ಮುಂತಾದ ಸಾಮಾಜಿಕ ಪಿಡುಗುಗಳನ್ನು ಗಮನಿಸಲೇ ಬೇಕಾಗುತ್ತದೆ.

## 2.3 ಜಾತಿಪದ್ಧತಿ ಮತ್ತು ಸ್ತ್ರೀಯರ ಸ್ಥಿತಿಗತಿ

ಮೈಸೂರು ಸಂಸ್ಥಾನದಲ್ಲಿ ವಸಾಹತುಶಾಹಿ ಆಧುನಿಕತೆಯಿಂದ ಇಲ್ಲಿ ಶತಮಾನಗಳಿಂದ ಇದ್ದಿತ್ತೆನ್ನುವ ಜಾತಿ ಪದ್ಧತಿಯ ಆಚರಣೆ ಮತ್ತು ಅದರ ಪರಿಣಾಮಗಳು 19ನೇ ಶತಮಾನದಲ್ಲಿ ತೀವ್ರವಾಗಿತ್ತು ಎನ್ನುವುದನ್ನು ಮರೆಯುವಂತಿಲ್ಲ. ಜರ್ಮನ್ ಪಂಡಿತ ಫ್ರೆಡ್ರಿಕ್ ಮ್ಯಾಕ್ಸ್ ಮ್ಯುಲ್ಲರ್ ಹೇಳಿದಂತೆ, 'ಭಾರತೀಯ ಚರಿತ್ರೆಯಲ್ಲಿ ವೇದಕಾಲ, ತನ್ನ ನಂತರದ ಅವಧಿಗಳ ಮೇಲೆ ಎಂತಹ

ಪ್ರಭಾವ ಬೀರಿದೆಯೆಂದೆ... ಭಾರತ ರಾಷ್ಟ್ರದ ಮನಸ್ಸಿನಲ್ಲಿ ಆ ಪ್ರಾಚೀನಯುಗದ ಧಾರ್ಮಿಕ ಮತ್ತು ನೈತಿಕ ವಿಚಾರಗಳು ಎಷ್ಟು ಆಳವಾಗಿ ಬೇರುಬಿಟ್ಟಿವೆಯಂದರೆ, ಹಳೆಯ ಸಂಪ್ರದಾಯನಿಷ್ಟ ನೀತಿಬೋಧನೆಗಳು ಎಷ್ಟು ಸೂಕ್ಷ್ಮವಾಗಿ ಭಾರತೀಯ ಜೀವನದ ಪ್ರತಿಯೊಂದು ಖಾಸಗಿ ಮತ್ತು ಸಾರ್ವಜನಿಕ ಕ್ರಿಯೆಯನ್ನು ನಿಯಂತ್ರಿಸಿವೆಯೆಂದರೆ ವೈದಿಕಯುಗದ ಸಾಹಿತ್ಯಿಕ ಅವಶೇಷಗಳ ಜ್ಞಾನವನ್ನು ಹೊಂದದೆ ಭಾರತೀಯ ಧರ್ಮ, ನೀತಿಗಳು ಮತ್ತು ಸಾಹಿತ್ಯವನ್ನು ನಿರ್ಣಾಯಕವಗಿ ನೋಡಲು ಸಾಧ್ಯವೇ ಇಲ್ಲ.' ಈ ಕಾರಣದಿಂದಾಗಿಯೇ ವೇದಕಾಲದಿಂದಲೂ ವರ್ಣಾಶ್ರಮ ಪದ್ಧತಿ ಜಾರಿಯಾಗಿ ಅದರ ದುಷ್ಪರಿಣಾಮ ಇಡೀ ಸಮಾಜದ ಮೇಲೆ ಆಗಿದೆ. ಅದೊಂದು ಸಾಮಾಜಿಕ ಪಿಡುಗಾಗಿ ಕೆಳಜಾತಿಗಳನ್ನು ಶೋಷಿಸುತ್ತಿದ್ದನ್ನು ಯಾರೂ ಸಹ ಅಲ್ಲಗಳೆಯಲಾರರು. ಎ.ಕೆ.ಕೃಷ್ಣ ಅಯ್ಯರ್‌ನವರ 'ಮೈಸೂರು ಟ್ರೈಬ್ಸ್ ಅಂಡ್ ಕಾಸ್ಟ್ಸ' ಎನ್ನುವ ಕೃತಿಯಲ್ಲಿ ಬರುವ ಈ ಹೇಳಿಕೆಯನ್ನು ಗಮನಿಸಿ, ಇಲ್ಲಿ ಲೇಖಕರು ಪ್ರತಿಪಾದಿಸುವ ಬ್ರಹ್ಮಣಿಕಲ್ ಚರಿತ್ರೆಯನ್ನು ನೋಡಬಹುದು. ಈ ವಿದ್ವಾಂಸರ ಪ್ರಕಾರ ಜಾತಿ ವ್ಯವಸ್ಥೆಯೆನ್ನುವುದು ಇಲ್ಲಿನ ವಾಸ್ತವರೂಪವಾಗಿದ್ದು, ಅದು ಶೋಷಣಾತ್ಮಕವೂ ಮತ್ತು ಗೊಂದಲಕಾರಿಯೂ ಆಗಿ ವಿವಿಧ ಗುಂಪುಗಳ ಘರ್ಷಣಾತ್ಮಕ ಹಿತಾಸಕ್ತಿಗಳನ್ನು ಒಳಗೊಂಡಿದ್ದು ಆರ್ಥಿಕ ಮತ್ತು ಆಡಳಿತಾತ್ಮಕ ಪ್ರಗತಿಗೆ ಅಥವಾ ಮತಾಂತರಕ್ಕೆ ಅಡ್ಡಿಯಾಗಿ ಕಾಣುತ್ತದೆ. ಅಲ್ಲದೆ, ಬ್ರಾಹ್ಮಣರು ಜಾತಿ ವ್ಯವಸ್ಥೆಯ ನಿಜವಾದ ಹಿಡಿತವನ್ನು ಹೊಂದಿದವರಾಗಿ ಕಾಣುತ್ತಾರೆ. ಹಾಗಾಗಿ ಜೇಮ್ಸ್ ಮಿಲ್‌ನ ಪ್ರಕಾರ ಆತನ ಪ್ರಕಾರ ವರ್ಣವ್ಯವಸ್ಥೆ ಸರಳೀಕ್ರತ ವೃತ್ತಿ ವರ್ಗೀಕರಣವನ್ನು ಪ್ರತಿನಿಧಿಸುತತದೆ. ಅಲ್ಲದೆ ಹಿಂದೂಗಳ ದೈನಂದಿನ ಆಚರಣಾ ವಿಧಿಯನ್ನು ಈ ಕೆಳಗಿನಂತೆ ವಿವರಿಸುತ್ತಾನೆ,

ಈ ಬ್ರಾಹ್ಮಣರ ಹಿಡಿತದಿಂದಾಗಿ 19ನೇ ಶತಮಾನದಲ್ಲಿ ಜಾತಿಗಳು ತೀವ್ರವಾದ ಹಸಿವು, ಬಡತನ, ಅಸ್ಪೃಶ್ಯತೆ, ಅವಮಾನಗಳನ್ನು ಅನುಭವಿಸುತ್ತಿದ್ದವು ಎಂಬುದನ್ನು ಗಮನಿಸಬೇಕಾಗುತ್ತದೆ. ಈ ಹಿಂಸೆಯಿಂದಾಗಿ ಮನುಷ್ಯನ ಆತ್ಮವಿಶ್ವಾಸ, ಅಂತಃಶಕ್ತಿ, ವಿವೇಚನಾಶಕ್ತಿ, ಚೈತನ್ಯವನ್ನು ಉಡುಗಿಸಿ ನಿಸ್ತೇಜನನ್ನಾಗಿರಿಸಿ ನೇರ ದಾಸ್ಯಕ್ಕೆ ತಳ್ಳುತ್ತದೆ ಎಂಬುದನ್ನು ಗಮನಿಸಬೇಕಾಗುತ್ತದೆ. ಮೈಸೂರು ಸಂಸ್ಥಾನದಲ್ಲಿ ಅತ್ಯಂತ ಘೋರವಾದ ಬಡತನ, ಹಸಿವು ಹೀನಾಯವಾದ ಅಸ್ಪೃಶ್ಯತೆ, ಶೋಷಣೆಯನ್ನು ಉಂಡು ಸಾಮಾಜಿಕ ದಾಸ್ಯಕ್ಕೆ ತಳ್ಳಲ್ಪಟ್ಟ ಸಮುದಾಯಗಳೆಂದರೆ ದಲಿತ ಜಾತಿಗಳು ಮತ್ತು ಬುಡಕಟ್ಟು ಪಂಗಡಗಳು. ಹಿಂದೂ ಸಮಾಜದಲ್ಲಿ ಅತ್ಯಂತ ಹಿಂಸಾರೂಪಿಯಾಗಿರುವ ಜಾತೀಯ ಪರಿಕಲ್ಪನೆಯಡಿ ಬೆಳೆದು ಬಂದಿರುವ ಶ್ರೇಣೀಕೃತ ಜಾತಿವ್ಯವಸ್ಥೆಯಲ್ಲಿ ದಲಿತರು 'ಸತ್ತದನ ತಿನ್ನುವ' ಜನಾಂಗವೆಂಬ ತಿರಸ್ಕಾರದಿಂದಲೂ ಹಾಗೂ ಧನಿಯಿಲ್ಲದೆ ಪ್ರತಿಭಟನಾ

ಶಕ್ತಿಯನ್ನು ಸಂಪೂರ್ಣ ಉಡುಗಿಸಿಕೊಂಡಿರುವವರು ಎಂಬ ಧೈರ್ಯದಿಂದಲೂ, ಇವರನ್ನು ಪಂಚಮರಲ್ಲಿ ಪಂಚಮರು, ಅಸ್ಪೃಶ್ಯರು, ಇಡೀ ಜಾತಿವ್ಯವಸ್ಥೆಯಲ್ಲೇ ಅಂತ್ಯಜರು ಎಂದು ಪರಿಗಣಿಸಿ ಬಿಟ್ಟಿತು ಸಮಾಜ.

ಇಂಥ ಅಮಾನವೀಯ ಜಾತಿಪದ್ಧತಿಯನ್ನು ಜಾರಿಗೆ ತಂದ ಮನುವಿನ ವರ್ಣವ್ಯವಸ್ಥೆ ಹೇಳುವುದೇನು? ತನ್ನ ಜೀವನಾರ್ಥಕ್ಕಾಗಿ ಸಮಾಜದ ಸೌಹಾರ್ದತೆಗಾಗಿ ತನ್ನ ಪೂರ್ವಜರ ಅಧಿಕೃತ ಕಸುಬನ್ನೇ ಒಬ್ಬ ವ್ಯಕ್ತಿ ಅಥವಾ ಜಾತಿ ಅನುಸರಿಸಬೇಕು ಎಂದು. ಆದರೆ ಅಲ್ಲೇ ಸ್ವತಂತ್ರ ಬದುಕನ್ನು ನಡೆಸುತ್ತಿದ್ದರೆ ವರ್ಣಾಶ್ರಮ ವ್ಯವಸ್ಥೆಯು ಸೂಚಿಸಿರುವ ದೇವರ ಮತ್ತು ಉಳ್ಳವರ ಮನೆಯ ಜೀತ ಮತ್ತು ಸಾಂಪ್ರದಾಯಿಕ ಬಿಟ್ಟಿಚಾಕರಿಯನ್ನು ಮಾಡುವವರಾರು?

ಜಾತಿವ್ಯವಸ್ಥೆಯ ಮೇಲ್ತುದಿಯನ್ನು ಆಕ್ರಮಿಸಿಕೊಂಡಿರುವ ವೈದಿಕಶ್ರೇಷ್ಟರು ಮಾತ್ರವೇ ಅಲ್ಲ, ಆ ವೈದಿಕ ಶ್ರೇಷ್ಟರಿಂದಲೇ ನಿರಂತರ ಅಸ್ಪೃಶ್ಯತೆಯ ನಿಂದನೆಗೆ ಒಳಗಾಗುತ್ತಿದ್ದ ಮತ್ತು ಪಂಚಮರಿಗಿಂತ ತುಸುವೇ ಮೇಲಕ್ಕಿದ್ದ ಶೂದ್ರ ಸಂಕುಲವೂ ಕೂಡಾ ಮೇಲ್ಜಾತಿಯವರ ಹುನ್ನಾರದೊಳಗೆ ಬೆರೆತು ದಲಿತ ಜಾತಿಗಳ ಕೊರಳಿಗೆ ಅತ್ಯಂತ ಅಮಾನವೀಯವಾದ, ಸಾಂಪ್ರದಾಯಿಕ ಬಿಟ್ಟಿಚಾಕರಿಯದ್ದೇ ರೂಪದಲ್ಲಿದ್ದ ಜೀತದ ಹೊರೆ ಹೊರಿಸಿ ಅವರನ್ನು ಆ ಹಿಂದೂ ಸಮಾಜದಲ್ಲಿ ಸಂಪೂರ್ಣ ನಿಷ್ಕ್ರಿಯರನ್ನಾಗಿರಿಸಿತ್ತು. ಹೀಗೆ ಹಿಂದೂಧರ್ಮಕ್ಕೆ ಗಂಡಾಂತರವನ್ನು ತಂದೊಡ್ಡುವಷ್ಟು ಅಪಾಯಕಾರಿಯೂ ಅಮಾನವೀಯವೂ ಆಗಿರುವ ಅಸ್ಪೃಶ್ಯತೆ ಇಂದು ಈ ಸ್ವತಂತ್ರ ಭಾರತದ ನಾಗರಿಕ ಸಮಾಜದಲ್ಲೂ ತಮ್ಮ ಬದುಕಿನ ಶೈಲಿಯನ್ನು ಸ್ವಲ್ಪ ಮಾತ್ರವೇ ಬದಲಾಯಿಸಿಕೊಂಡಿದ್ದು ಸಂಪೂರ್ಣವಾಗಿ ಬದಲಿಸಿಕೊಳ್ಳಲು ಅವರಿನ್ನೂ ಮಾನಸಿಕವಾಗಿ ಸಿದ್ಧರಾಗಿಲ್ಲ. ಶತಶತಮಾನಗಳಿಂದಲೂ ಮೇಲ್ಜಾತಿ ಸಮಾಜ ಇವರ ಮೇಲೆ ಧರ್ಮಕರ್ಮದ ಹೆಸರಲ್ಲಿ ನಡೆಸಿರುವ ಮಾನಸಿಕ ಮತ್ತು ದೈಹಿಕ ದೌರ್ಜನ್ಯದ ಗಾಯ ಭಯದಿಂದ ಅವರಿಗಿನ್ನೂ ಹೊರಬರಲು ಸಾಧ್ಯವಾಗಿಲ್ಲ.

ಆದರೂ ಸನಾತನಿಗಳು ಚಾತುರ್ವರ್ಣ್ಯವನ್ನು ಚಾಚೂ ತಪ್ಪದಂತೆ ಜಾರಿಗೊಳಿಸಲು ಯತ್ನಿಸುತ್ತಿರುವಂತೆಯೆ ಅದನ್ನು ವಿರೋಧಿಸುವ ಧ್ವನಿಗಳೂ ಕಾಲಕಾಲಕ್ಕೆ ಇತಿಹಾಸದಲ್ಲಿ ಮೂಡಿಬಂದಿವೆ. ಈ ಧ್ವನಿಗಳು ಬಲಿಷ್ಟ ಸಮಾಜವನ್ನು ವಿರೋಧಿಸಿ ಜನಸಾಮಾನ್ಯರ ಪ್ರತಿನಿಧಿಯಾಗಿ

ಕೆಲಸ ಮಾಡಿವೆ. ಮನುಸ್ಮೃತಿಯನ್ನು ಅಕ್ಷರಶಃ ಜಾರಿಗೊಳಿಸಲು ಯತ್ನಿಸಿದ ಪೇಶ್ವೆಗಳ ಕಾಲದಿಂದಲೇ ಅದನ್ನು ಪ್ರಬಲವಾಗಿ ವಿರೋಧಿಸಿದ ಜ್ಯೋತಿಬಾ ಫುಲೆ ಮತ್ತು ಡಾ॥ ಬಾಬಾಸಾಹೇಬ ಅಂಬೇಡ್ಕರ್‌ರು ಹುಟ್ಟಿಬಂದುದು ಇತಿಹಾಸದ ಅವಕಾಶವಾಗಿದೆ. ಈ ಧ್ವನಿಗಳು ಹುಟ್ಟಿ ಬರದಿದ್ದರೆ ಭಾರತ ಇನ್ನೂ 16ನೆಯ ಶತಮಾನದಲ್ಲಿಯೇ ಉಳಿಯುವ ಸಾಧ್ಯತೆಯನ್ನು ಅಲ್ಲಗಳೆಯಲಾಗುವುದಿಲ್ಲ.

ಸನಾತನಿಗಳ ಅಟ್ಟಹಾಸವನ್ನು ಮೊಟ್ಟ ಮೊದಲ ಬಾರಿಗೆ ಮುರಿದು ಹಾಕಿದವರು ಜ್ಯೋತಿಬಾ ಫುಲೆಯವರು. ಮನುಸ್ಮೃತಿಯನ್ನು ಬೆಂಕಿಗೆ ಹಾಕಿ ಫುಲೆ ವೈಚಾರಿಕತೆಯನ್ನು ಮೆರೆದವರು. ಇಡೀ ಶೂದ್ರರ ಪ್ರತಿನಿಧಿಯಾಗಿ ಫುಲೆ ವೈದಿಕರನ್ನು ಎದುರು ಹಾಕಿಕೊಂಡು, ಅವರ ಅರ್ಥಹೀನ ಆಚಾರವಿಚಾರಗಳನ್ನು ಖಂಡಿಸಿದವರು. ಶೂದ್ರರ ಅವನತಿಗೆ ಅವರ ಅನಕ್ಷರತೆಯೇ ಕಾರಣವೆಂದು ಬಗೆದ ಫುಲೆ ಸ್ವತಃ ಶಾಲೆಗಳನ್ನು ಆರಂಭಿಸಿ, ಶೂದ್ರ ಹುಡುಗರ ಹುಡುಗಿಯರ ಶಿಕ್ಷಣಕ್ಕೆ ಬಾಗಿಲು ತೆರೆದರು. ತಮ್ಮ ಹೆಂಡತಿ ಸಾವಿತ್ರಿಬಾಯಿಯನ್ನು ಹುಡುಗಿಯರಿಗೆ ಕಲಿಸಲೆಂದು ತರಬೇತಿ ನೀಡಿದರು. ಹೆಣ್ಣುಮಕ್ಕಳು ಶಾಲೆ ಕಲಿಯುವುದನ್ನು ವಿರೋಧಿಸಿದ ಸನಾತನಿಗಳು ಸಾವಿತ್ರಿಬಾಯಿಗೆ ನಾನಾ ರೀತಿಯಲ್ಲಿ ತೊಂದರೆ ನೀಡಿದರು. ಸಾವಿತ್ರಿ ಬಾಯಿಯ ಮೇಲೆ ಸಗಣಿ ತೂರಲಾಯಿತು; ಕಲ್ಲು ಹೊಡೆಯಲಾಯಿತು. ಇದಾವುದನ್ನು ಲೆಕ್ಕಿಸದೆ ಸಾವಿತ್ರಿಬಾಯಿ, ಜ್ಯೋತಿಬಾ ಫುಲೆ ತಮ್ಮ ಕಾರ್ಯವನ್ನು ಮುಂದುವರೆಸಿದರು. ಈ ಇಬ್ಬರ ಪ್ರಯತ್ನದ ಫಲವಾಗಿಯೇ ಭಾರತಕ್ಕೆ ಡಾ॥ ಬಾಬಾಸಾಹೇಬ ಅಂಬೇಡ್ಕರ್‌ರವರು ಲಭ್ಯವಾದದ್ದು.

ಆ ಕಾಲದಲ್ಲಿ ದಲಿತರ ಬದುಕು ಅಸಹನೀಯವಾಗಿತ್ತು. ಅವರಿಗೆ ಎಲ್ಲಿಯೂ ಪ್ರವೇಶವಿರಲಿಲ್ಲ; ಬೆನ್ನ ಹಿಂದೆ ಕಸಬರಿಗೆ ಕಟ್ಟಿಕೊಂಡು ಕೊರಳಿಗೆ ಗಡಿಗೆ ಕಟ್ಟಿಕೊಂಡು ಅವರು ಹೊರಬೀಳಬೇಕಾಗಿತ್ತು. ಅವರು ರಸ್ತೆಯಲ್ಲಿ ಮೂಡಿಸಿದ ಹೆಜ್ಜೆಗಳನ್ನು ಕಸಬರಿಗೆ ಅಳಿಸಿ ಹಾಕುವುದೆಂದೂ ಉಗುಳು ಬಂದರೆ ಗಡಿಗೆಯಲ್ಲಿ ಉಗುಳಬೇಕೆಂದೂ ಅವರ ಮೇಲೆ ಸಮಾಜ ನಿರ್ಬಂಧ ಹೇರಿತ್ತು. ದಲಿತರನ್ನು ಊರ ಹೊರಗೆ ಹಾಕಿ ಅವರನ್ನು ಅಪರಾಧಿ ಜನಾಂಗವೆಂಬ ರೀತಿಯಲ್ಲಿ ನಡೆಸಿಕೊಳ್ಳಲಾಗಿತ್ತು. ಊರಲ್ಲಿ ಕಳುವು, ದರೋಡೆಗಳಾದರೆ ಅವುಗಳಿಗೆ ದಲಿತರನ್ನೇ ಜವಾಬ್ದಾರಿ ಮಾಡಲಾಗುತ್ತಿತ್ತು. ಬರಗಾಲ ಬಂದಾಗಲೂ ಅದಕ್ಕೆ ದಲಿತರೇ ಕಾರಣವೆಂದು ಹೇಳಲಾಗುತ್ತಿತ್ತು. ಒಂದು ವೇಳೆ ಅತಿವೃಷ್ಟಿಯಾಗಿದ್ದರೂ ಅದಕ್ಕೂ ದಲಿತರನ್ನೇ

ದೂಷಿಸಲಾಗುತ್ತಿತ್ತು. ದಲಿತರಿಗೆ ನಿರ್ದಿಷ್ಟವಾದ ಕೆಲಸಗಳೂ ಇರಲಿಲ್ಲ. ಅವರು ಸಾರ್ವಜನಿಕ ಬಾವಿಯಿಂದ ನೀರು ಸೇದುವ ಹಾಗಿರಲಿಲ್ಲ. ದೇವಸ್ಥಾನಗಳಲ್ಲಿ ಅವರಿಗೆ ಪ್ರವೇಶವಿರಲಿಲ್ಲ. ಸತ್ತ ದನವನ್ನು ಅವರು ತಿನ್ನಬೇಕಾಗುತ್ತಿತ್ತು. ಧರ್ಮಶಾಸ್ತ್ರಗಳು ಅವರಿಗೆ ಪಶುವಿಗಿಂತಲೂ ಕಡೆಯದಾದ ಜೀವನ ಕ್ರಮವನ್ನು ವಿಧಿಸಿದ್ದವು.

ಸಮಾಜದ ಈ ಕಟ್ಟಳೆಗಳನ್ನು ವಿರೋಧಿಸಿದ ಜ್ಯೋತಿಬಾ ಫುಲೆಯವರಿಗೆ ಒತ್ತಾಸೆಯಾಗಿ ನಿಂತವರು ಆಗಿನ ಮೈಸೂರು ಸಂಸ್ಥಾನವನ್ನು ಮುನ್ನಡೆಸಿದವರು ನಾಲ್ವಡಿ ಕೃಷ್ಣರಾಜ ಒಡೆಯರು. ದಲಿತ ಮತ್ತು ಶೂದ್ರರ ಸುಧಾರಣೆಗಾಗಿ ಅನೇಕ ಜನಪರ ಕಾರ್ಯಕ್ರಮಗಳನ್ನು ಜಾರಿಗೆ ತಂದ ನಾಲ್ವಡಿ ಕೃಷ್ಣರಾಜ ಒಡೆಯರು ದಲಿತರ ಕೈವಾರಿಗಳೆಂದು ಇತಿಹಾಸದಲ್ಲಿ ನಮೂದಾಗಿದ್ದರೆ. ಅವರ ಈ ಕ್ರಮಗಳನ್ನು ಒಳಗಿಂದೊಳಗೆ ಸನಾತನಿಗಳು ವಿರೋಧಿಸಿದ್ದರು. ಶೂದ್ರರಿಗಾಗಿ, ದಲಿತರಿಗಾಗಿ ಅಲ್ಲಲ್ಲಿ ಶಾಲೆಗಳನ್ನು ಆರಂಭಿಸಲಾಯಿತು.

ಡಾ.ಅಂಬೇಡ್ಕರ್ ಅವರ ಜಾತ್ಯಾಧಾರಿತ ಸಮಾಜದ ಬಗ್ಗೆಯ ವಿಶ್ಲೇಷಣೆಯೊಂದನ್ನು ಉಲ್ಲೇಖಿಸಬೇಕು. ಬದುಕಿನ ವಿವಿಧ ಮಜಲುಗಳಲ್ಲಿ ಅಸ್ಪೃಶ್ಯತೆಯ ಬರೆ ಹಾಕಿಸಿಕೊಂಡ ಅಂಬೇಡ್ಕರ್‌ರವರು ಶ್ರೇಣೀಕೃತ ಸಮಾಜವನ್ನು ಕುರಿತು ಹೀಗೆ ಅಭಿಪ್ರಾಯಪಡುತ್ತಾರೆ. 'ಈ ಸಮಾಜದ ಜಾತಿವ್ಯವಸ್ಥೆಯ ವಿನ್ಯಾಸ ಹೇಗಿದೆಯೆಂದರೆ ಪ್ರತಿ ಜಾತಿಯು ಶ್ರೇಣೀಕರಣದ ನಿರ್ದಿಷ್ಟ ಹಂತದಲ್ಲಿದ್ದು, ಪ್ರತಿ ಜಾತಿಯೂ ಕೂಡಾ ತನಗಿಂತ ಕೆಳಗಿರುವ ಜಾತಿಯನ್ನು ಹೀನಾಯವಗಿ ಅಮಾನವೀಯವಾಗಿ ನಡೆಸಿಕೊಳ್ಳುತ್ತದೆ ಹಾಗೂ ತನ್ನ ಮೇಲಿರುವ ಜಾತಿಯನ್ನು ಓಲೈಸತೊಡಗುತ್ತದೆ. ಜಾತಿವ್ಯವಸ್ಥೆಯ ಈ ಸಂಕೀರ್ಣತೆಯ ಕಾರಣದಿಂದ ಪ್ರತಿ ಜಾತಿಯೂ ಅದು ಮೇಲ್ಜಾತಿಯಾಗಲಿ, ಹಿಂದುಳಿದ ಕೆಳಜಾತಿಯಾಗಲಿ ಅಥವಾ ದಲಿತ ಜಾತಿಯಾಗಲಿ ತಮ್ಮಲ್ಲೆ ಶ್ರೇಣೀಕರಣವನ್ನೇರ್ಪಡಿಸಿಕೊಂಡು ತಾರತಮ್ಯಗಳಲ್ಲಿ ತೊಡಗುತ್ತವೆ.' ಅಂಬೇಡ್ಕರರ ಈ ಅಭಿಪ್ರಾಯ ನಾವು ಇಂದಿಗೂ ತಿರಸ್ಕರಿಸಲಾಗಿಲ್ಲ ಎಂಬುದು ದುರಂತವೇ ಸರಿ.

ಸ್ವಾತಂತ್ರ್ಯಾನಂತರ ರಚನೆಯಾದ ಭಾರತದ ಸಂವಿಧಾನದಲ್ಲಿ, ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಜಾತಿ ತಾರತಮ್ಯ ಮತ್ತು ಆರ್ಥಿಕ, ರಾಜಕೀಯ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿನ ಅಸಮಾನತೆಯನ್ನು ಹತ್ತಿಕ್ಕಿ ಎಲ್ಲರಿಗೂ ಸಮಾನ ಅವಕಾಶವನ್ನು ನೀಡಬೇಕಾದ ಅಗತ್ಯತೆಯನ್ನು

ಗುರುತಿಸಲಾಯಿತು. ಅಸಮಾನತೆಯಿಲ್ಲದ ನವಸಮಾಜಕ್ಕೆ ಅಗತ್ಯವಾಗಿ ಜೀವರಕ್ಷಕ ಕವಚದಂತೆ ಬೇಕಾದಂತಹ ಅಸ್ಪೃಶ್ಯತಾ ಅಪರಾಧ ಶಾಸನ, ನಾಗರಿಕ ಹಕ್ಕುಗಳ ರಕ್ಷಣಾ ಶಾಸನ ಹಾಗೂ ಅನುಸೂಚಿತ ಜಾತಿ ಮತ್ತು ಬುಡಕಟ್ಟುಗಳ ದೌರ್ಜನ್ಯ ಪ್ರತಿಬಂಧಕ ಶಾಸನಗಳನ್ನು ಈ ಸಂವಿಧಾನದಲ್ಲಿ ಅಳವಡಿಸಿಕೊಳ್ಳಲಾಯಿತು.

## ಸ್ತ್ರೀಯರ ಸ್ಥಾನಮಾನ

ಮೇಲೆ ಚರ್ಚಿಸಿದಂತೆ ಹಿಂದೂ ಜಾತಿ ಪದ್ಧತಿಯ ಕ್ಷುದ್ರಮುಖವನ್ನು ನೋಡಲಾಗಿದೆ. ಮೈಸೂರು ಸಂಸ್ಥಾನದಲ್ಲಿ ಸ್ತ್ರೀಯರ ಸ್ಥಿತಿಗತಿ[10]ಯನ್ನು ನೋಡುವಾಗಲೂ ಇದೇ ಜಾತಿವ್ಯವಸ್ಥೆ ಇಡೀ ಸ್ತ್ರೀಕುಲಕ್ಕೆ ಅವಮಾನವನ್ನು ಮಾಡುವುದನ್ನು ಕಾಣುತ್ತೇವೆ. ಮೇಲ್ಜಾತಿಯವನನ್ನು ಕೆಳಜಾತಿಯವಳು ಮದುವೆಯಾಗ ಬೇಕಾದರೆ ಮದುವೆಯಾಗುವವನಿಂದ ಜಾತಿ ಶುದ್ಧೀಕರಣಕ್ಕೆ ಒಳಗಾಗಬೇಕಾಗುತ್ತದೆ. ಆರ್ಥಿಕವಾಗಿ, ರಾಜಕೀಯವಾಗಿ ಮೇಲುಸ್ತರದಲ್ಲಿ ಇರುವ ಕುಟುಂಬಕ್ಕೆ ಸೇರಿದ ಕ್ಷತ್ರಿಯ ಹೆಣ್ಣು, ಕೆಳವರ್ಗಕ್ಕೆ ಸೇರಿದ ಮೇಲ್ವರ್ಣದ ಹುಡುಗನ ಜೊತೆ ಮದುವೆಯಾದರೆ, ಅವಳು ಮೇಲ್ವರ್ಗದ ಪಿತೃಪ್ರಧಾನ ಮೌಲ್ಯಗಳನ್ನು ಅನುಸರಿಸುತ್ತಾ ಅದು ಪ್ರತಿನಿಧಿಕರಿಸಿಕೊಟ್ಟ 'ಹೆಂಡತಿ' ಪರಿಕಲ್ಪನೆಯಂತೆ ನಡೆದುಕೊಳ್ಳಬೇಕಾಗುತ್ತದೆ. ಅಂದರೆ 'ಹೆಂಡತಿ' ಪರಿಕಲ್ಪನೆಗೆ ಏಕರೂಪದ ಅರ್ಥ ನಿರ್ವಚನವಿಲ್ಲ. ವಿವಾಹವಾದವರ ವರ್ಗ, ಜಾತಿ, ವರ್ಣ ಹಾಗೂ ಲಿಂಗ ಶ್ರೇಣೀಕರಣವನ್ನು ಅನುಸರಿಸಿ ಪತ್ನಿತ್ವದ ನಿರ್ವಚನಗಳು ಆಚರಣೆಯಲ್ಲಿರುವುದನ್ನು ಕಾಣಬಹುದು. ಗಂಡನು ಮತ್ತು ಆತನ ಕುಟುಂಬದವರು ಎಷ್ಟೇ ಹಿಂಸೆಯನ್ನು ನೀಡಿದರೂ ಅವುಗಳನ್ನೆಲ್ಲಾ ಸಹಿಸಿಕೊಂಡು ಆತನ ಒಲವಿಗಾಗಿ ಕಾಯಬೇಕು.

ಹೀಗೆ ಹೆಣ್ಣುವ್ಯಕ್ತಿತ್ವದಿಲ್ಲದಂತೆ ಕೇವಲ ದಾಸಿಯಂತೆ ಇದ್ದಂತಹ ಸ್ಥಿತಿ ಇತ್ತೆನ್ನುವುದನ್ನು ಮರೆಯುವಂತಿಲ್ಲ. ಆದ್ದರಿಂದ ಹೆಣ್ಣು ಶಿಶುವಿನ ಹತ್ಯೆಗೆ ಕಾರಣವಾಗಿರುವ ಪರಿಸ್ಥಿತಿಯ ಬಗ್ಗೆ ಗಂಭೀರವಾಗಿ ಅವಲೋಕಿಸುವ ಅಗತ್ಯವಿದೆ. ಮೇಲೆ ವಿವರಿಸಿದಂತೆ ಮಹಿಳೆಯ ಬಗೆಗಿನ ಧಾರ್ಮಿಕ, ರಾಜಕೀಯ, ಆರ್ಥಿಕ, ಸಾಮಾಜಿಕ ಧೋರಣೆಗೂ ಈ ಸಮಸ್ಯೆಗೂ ನಿಕಟ ಸಂಬಂಧವಿದೆ. ಮಹಿಳೆ ಧಾರ್ಮಿಕ ಕ್ರಿಯೆಗೆ ಅರ್ಹಳಲ್ಲ. ರಾಜಕೀಯ ಅಧಿಕಾರ ಆಕೆಗೆ ಬೇಕಿಲ್ಲ. ಆರ್ಥಿಕ ಜವಾಬ್ದಾರಿಯನ್ನು ಆಕೆ ಹೊರಲಾರಳು ಎನ್ನುವಂತಹ ಪುರುಷ ಪ್ರಧಾನ ಧೋರಣೆ ಒಂದು ಕಡೆಯಾದರೆ, ವರದಕ್ಷಿಣೆಯಂತಹ ಅಮಾನವೀಯ ಬೇಡಿಕೆ, ಬಾಲ್ಯವಿವಾಹ, ದೇವದಾಸಿ ಪದ್ಧತಿ, ವಿಧವಾ

ನಿಯಂತ್ರಣ ಇವೆಲ್ಲವೂ ಮಹಿಳೆಯ ಅಸ್ತಿತ್ವದ ಮೇಲೆ ನಕರಾತ್ಮಕ ಪರಿಣಾಮ ಬೀರುತ್ತಿದ್ದವು. ಜೊತೆಗೆ, ಮುಪ್ಪಿನಲ್ಲಿ ಹೆತ್ತವರನ್ನು ನೋಡಿಕೊಳ್ಳುವವನು ಮಗ, ಮಗಳೇನಿದ್ದರೂ ಮದುವೆಯಾಗಿ ಗಂಡನ ಮನೆಗೆ ಹೋಗುವವಳು ಎನ್ನುವ ಸಾಂಪ್ರದಯಿಕ ಮನೋಭಾವ ಹೆಣ್ಣು ಮಗುವನ್ನು ನಿರಾಕರಿಸುವಂತೆ ಮಾಡಿತ್ತು. ಆದ್ದರಿಂದಲೆ ಮಹಿಳೆಯ ಸ್ಥಾನಮಾನ ವಸಾಹತುಶಾಹಿ ಆಧುನಿಕತೆಯಲ್ಲಿ ಪ್ರಮುಖ ಸ್ಥಾನವನ್ನು ಪಡೆದದ್ದು.

ಯುದ್ಧ ಸಮಯದಲ್ಲಿ ಮಹಿಳೆಯ ಅಪಹರಣ, ಅತ್ಯಾಚಾರ ಮುಂತಾದ ಲೈಂಗಿಕ ದೌರ್ಜನ್ಯಗಳು ಸಾಮಾನ್ಯವಾಗಿದ್ದವು. ಇದರಿಂದಾಗಿ ಮಗಳನ್ನು ಹೆತ್ತು ಪರಿತಾಪಕ್ಕೆ ಒಳಗಾಗುವುದಕ್ಕಿಂತ ಮಗನೇ ಮೇಲು ಎನ್ನುವ ಭಾವನೆ ಚಾಲ್ತಿಯಲ್ಲಿತ್ತು.

ಜಾತಿವ್ಯವಸ್ಥೆಗೆ ಕಾರಣನಾದ ಮನು ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲಾ ಮಹಿಳೆಯರನ್ನು ಪಾಪಜೀವಿಗಳಂತೆಯೂ, ಮುಟ್ಟಲು ಅನರ್ಹರು, ಪುರುಷರ ಭೋಗಕ್ಕೆ ಮೀಸಲಾದ, ಸ್ವಾತಂತ್ರ್ಯಕ್ಕೆ ಅನರ್ಹಳಾದವಳು ಎಂದು ವಿಕೃತವಾಗಿ ನಿಷೇಧಗಳನ್ನು ಹೇರುತ್ತಾನೆ. ಆದುದರಿಂದಲೇ ಇಂದಿಗೂ ಹೆಣ್ಣೆಂದರೆ ಇಡೀ ಭಾರತದಲ್ಲಿ ಆಕೆ ಎರಡನೇ ದರ್ಜೆ ಪ್ರಜೆಯಂತೆ ಪರಿಗಣಿಸಲ್ಪಟ್ಟಿರುವುದು. ಈ ಮನು ಅಷ್ಟಕ್ಕೆ ಸುಮ್ಮನಾಗುವುದಿಲ್ಲ. ಆತನ ಪ್ರಕಾರ, ಶೂದ್ರನಿಗೆ ಶೂದ್ರಳೇ ಹೆಂಡತಿಯಾಗಬೇಕು. ವೈಶ್ಯನಿಗೆ ವೈಶ್ಯ ಜಾತಿಯ ಹಾಗೂ ಶೂದ್ರ ಜಾತಿಯ ಹೆಣ್ಣಾಗಬಹುದು. ಕ್ಷತ್ರಿಯನಿಗೆ ಕ್ಷತ್ರಿಯ ಜಾತಿಯವಳು, ವೈಶ್ಯ ಜಾತಿಯವಳು ಹಾಗೂ ಶೂದ್ರಳು ಹೆಂಡತಿಯಾಗಬಹುದು. ಬ್ರಾಹ್ಮಣನಿಗೆ ಬ್ರಾಹ್ಮಣ ಸ್ತ್ರೀಯೂ, ಕ್ಷತ್ರಿಯಳೂ, ವೈಶ್ಯಳೂ, ಶೂದ್ರಳೂ, ಹೆಂಡತಿಯಾಗಬಹುದು. ಬ್ರಾಹ್ಮಣರು ಶ್ರೇಷ್ಠರಾದ ಕಾರಣಕ್ಕೆ ಶೂದ್ರ ಮಹಿಳೆಯರನ್ನು ದಾಸಿಯರಂತೆ ಇಟ್ಟುಕೊಳ್ಳಬಹುದೆಂದು ಅನುಮತಿ ನೀಡುತ್ತಾನೆ. ಶೂದ್ರರು ಮುಟ್ಟಲೂ ಯೋಗ್ಯವಲ್ಲದವರು. ಶೂದ್ರ ಸ್ತ್ರೀಯನ್ನು ವಿವಾಹವಾದರೆ ಭ್ರಷ್ಟ ಮಕ್ಕಳು ಹುಟ್ಟುತ್ತಾರೆ. ಅಂದರೆ ಶೂದ್ರರು ಭ್ರಷ್ಟರು ಎಂಬ ತೀರ್ಮಾನಕ್ಕೆ ಬಂದು ಪರಸ್ಪರ ವಿವಾಹವಾಗದಂಥ ಗೋಡೆಗಳನ್ನು ಮನು ಕಟ್ಟುತ್ತಾನೆ. ಅಂದರೆ, ಜಾತಿ ಶ್ರೇಣೀಕರಣದಲ್ಲಿ ಕೆಳಸ್ತರಕ್ಕೆ ಸೇರಿದ್ದು, ವರ್ಗ ಶ್ರೇಣೀಕರಣದಲ್ಲಿ ಮೇಲುಸ್ತರದಲ್ಲಿರುವ ಕುಟುಂಬಕ್ಕೆ ಸೇರಿದ ಹೆಣ್ಣು ಮಗಳೂ ಮೇಲ್ಜಾತಿಯ ವ್ಯಕ್ತಿಯು ತನ್ನನ್ನು ಇಷ್ಟಪಟ್ಟರೆ ಅವನನ್ನು ವರಿಸಲೇಬೇಕಾಗುತ್ತದೆ. ಅವಳಿಗೆ ಆಯ್ಕೆಯ ಪ್ರಶ್ನೆಯೇ ಇರುವುದಿಲ್ಲ. ಒಲ್ಲದ ಗಂಡನೊಂದಿಗೆ ಬಾಳಬೇಕಾಗುತ್ತದೆ. ಕೆಳಜಾತಿಯ ಸ್ತ್ರೀಪುರುಷರು ಮೇಲ್ಜಾತಿಯವರಿಗೆ ದಾಸದಾಸಿಯರಾಗಿದ್ದು ಅವರ ಸ್ವತ್ತಾಗಿಯೇ

ಪ್ರತಿನಿಧಿಕರಿಸಲ್ಪಟ್ಟಿರುವವರು. ಇಂತಹ ಮಹಿಳೆಯರು ಮೇಲ್ಜಾತಿಯ ಪುರುಷರಿಗೆ ಮೊದಲನೆಯ ಹೆಂಡತಿಯಾಗಿ ಪ್ರತಿನಿಧೀಕರಣಗೊಳ್ಳದೆ ಉಪಪತ್ನಿಯರಾಗಿ ಪ್ರತಿನಿಧೀಕರಣಗೊಂಡಿರುವವರು.

ಮುಂದೆ ಮನುವು ಸ್ತ್ರೀಯರ ಧಾರಣಶಕ್ತಿಯನ್ನೂ ಸಹ ಅವಹೇಳನ ಮಾಡುತ್ತಾನೆ. "ಸ್ತ್ರೀ ಸ್ವಭಾವತಃ ದುರ್ಬಲಳು ಹಾಗೂ ಅಸಹಾಯಕಳು. ಗರ್ಭಾವಸ್ಥೆ ಮತ್ತು ಪ್ರಸೂತಾವಸ್ಥೆಗಳಲ್ಲಿ ನೈಸರ್ಗಿಕವಾಗಿ ಪರಾಧೀನಳು".[11] ಹೀಗೆಯೇ ಮುಂದುವರೆದ ಸ್ತ್ರೀಯ ಸ್ಥಾನಮಾನ ಮಧ್ಯಯುಗೀನ ವೇಳೆಗೆ ಮತ್ತಷ್ಟು ಕುಸಿಯುತ್ತದೆ. ರಾಜಕೀಯ ಅಸ್ಥಿರತೆ, ಸಾಮಾಜಿಕ ಏರುಪೇರು ಮುಂತಾದವುಗಳಿಂದಾಗಿ ಆಕೆ ಮತ್ತಷ್ಟು ಸಂಕಷ್ಟಕ್ಕೆ ಸಿಲುಕುತ್ತಾಳೆ. ಇದಕ್ಕೆ ಪ್ರಮುಖ ಕಾರಣಗಳನ್ನು ಮತ್ತು ಆಚರಣೆಗಳನ್ನು ಈ ಕೆಳಗಿನಂತೆ ಹೆಸರಿಸಬಹುದು.

### 1) ಪರದಾ ಪದ್ಧತಿ

ಸ್ತ್ರೀಯರು ತಮ್ಮ ಶೀಲವನ್ನು ರಕ್ಷಿಸಿಕೊಳ್ಳುವುದು ಅವರ ಪ್ರಮುಖ ಕರ್ತವ್ಯವಾಗಿತ್ತು. ಮರ್ಯಾದಸ್ಥ ಸ್ತ್ರೀ ಯಾವಾಗಲೂ ಮನೆಯಲ್ಲಿಯೇ ಇರತಕ್ಕದ್ದು. ಒಂದು ವೇಳೆ ಆಕೆ ಹೊರಗೆ ಹೋಗಬೇಕಾದರೂ ಬುರ್ಖಾವನ್ನು ಧರಿಸಿಯೇ ಹೊಗತಕ್ಕದ್ದು ಎಂಬ ಪದ್ಧತಿ ಉತ್ತರ ಭಾರತದಲ್ಲಿ ಜಾರಿಯಲ್ಲಿತ್ತು. ಇದು ಮುಸ್ಲಿಂರಲ್ಲಿ ಮೊದಲು ಪ್ರಚಾರದಲ್ಲಿದ್ದು ಅನಂತರದಲ್ಲಿ ಹಿಂದೂಗಳು ಸಹ ಇದನ್ನು ಆಚರಿಸತೊಡಗಿದರು. ಈ ಪದ್ಧತಿಯಿಂದಾಗಿ ಮಹಿಳೆಯರ ಶಿಕ್ಷಣ ಮತ್ತಷ್ಟು ಅಧೋಗತಿಗಿಳಿಯಿತು.

### 2) ಸತಿಪದ್ಧತಿ

ಪತಿ ಮರಣ ಹೊಂದಿದಾಗ ಸತಿಯು ಆತನ ಮೃತದೇಹದೊಡನೆ ಚಿತೆ ಏರುವುದನ್ನು ಸತಿಪದ್ಧತಿ ಅಥವಾ ಸಹಗಮನ ಪದ್ಧತಿ ಎನ್ನುತ್ತೇವೆ. ಇದೊಂದು ಅಮಾನುಷ ಪದ್ಧತಿ. ಈ ಜಗತ್ತಿನಲ್ಲಿ ಬಾಳಿ ಬದುಕಬೇಕೆಂಬ ಹೆಣ್ಣಿನ ಕನಸು ಈ ಆಚರಣೆಯಲ್ಲಿ ಅಳಿಸಿಹೋಗುತ್ತದೆ. ಸ್ತ್ರೀಯು ತನ್ನ ಪತಿ ಯಾವುದೇ ಕಾರಣದಿಂದ ಮರಣ ಹೊಂದಿದಾಗ ತಕ್ಷಣವೇ ಸ್ವಇಚ್ಛೆಯಿಂದ ಇಲ್ಲವೇ ಬಲತ್ಕಾರದಿಂದ ತನ್ನ ಪತಿಯ ಶವದೊಡನೆ ಅಗ್ನಿಗಾಹುತಿಯಾಗುವ ವಿಷಣ್ಣ ಸನ್ನಿವೇಶವೇ ಸತಿ ಆಚರಣೆ. ಫ್ರೆಂಚ್ ಯಾತ್ರಿಕ ಬರ್ನಿಯರ್ ತನ್ನ ಪ್ರವಾಸ ಕಥನದಲ್ಲಿ ಸ್ತ್ರೀಯರು ಸತಿ ಹೋಗುವ ಹೃದಯ ವಿದ್ರಾವಕ ಸನ್ನಿವೇಶವನ್ನು ಬಹಳ ಮಾರ್ಮಿಕವಾಗಿ ವಿವರಿಸುತ್ತಾನೆ. ಈ

ದೇಶದಲ್ಲಿ ಹೀಗೆ ಸತಿಹೋದ ನೆನಪಿನಲ್ಲಿ ಸ್ಥಾಪಿಸಿರುವ ಸಾವಿರಾರು ಮಾಸ್ತಿಕಲ್ಲುಗಳನ್ನು ದೇಶದ ಉದ್ದಗಲಕ್ಕೂ ನೋಡಬಹುದು.

### 3) ಬಾಲ್ಯವಿವಾಹ

ಬಾಲ್ಯವಿವಾಹ ಪದ್ಧತಿಯೂ ಸಹ ಸ್ತ್ರೀಯನ್ನು ಶೋಷಿಸುವ ಮತ್ತೊಂದು ಅನಿಷ್ಟ ಸಾಂಪ್ರದಾಯಿಕ ಹಿಂದೂ ಸಮಾಜದಲ್ಲಿ ಬಾಲ್ಯವಿವಾಹ ಬಹಳವಾಗಿ ರೂಢಿಯಲ್ಲಿತ್ತು. ವಯಸ್ಕ ಹೆಣ್ಣುಮಕ್ಕಳನ್ನು ಮನೆಯಲ್ಲಿ ಇರಿಸಿಕೊಳ್ಳಲು ಹಿಂದೂ ಕುಟುಂಬಗಳು ಒಪ್ಪುತ್ತಿರಲಿಲ್ಲ. ಈ ಪದ್ಧತಿಯಿಂದಾಗಿ ಸ್ತ್ರೀಯ ಶಾರೀರಿಕ ಮತ್ತು ಮಾನಸಿಕ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುತ್ತದೆ. ಹದಿಹರೆಯದಲ್ಲೇ ತಾಯಂದಿರಾಗುವುದು, ಅಪೌಷ್ಟಿಕತೆ, ರಕ್ತಹೀನೆ, ದುರ್ಬಲತೆಯಿಂದಾಗಿ ನರಳುವುದು ಸಾಮಾನ್ಯ ಸಂಗತಿಯಾಯಿತು. ಬಾಲ ವಿಧವೆಯರ ಸಂಖ್ಯೆ, ಮಕ್ಕಳ ಮರಣ ದರ, ಮಾತೆಯರ ಮರಣ ದರ ಗಣೀಯವಾಗಿ ಏರಿತು. ಈ ಪದ್ಧತಿ ಎಲ್ಲಾ ಜಾತಿ ಸಮುದಾಯಳಲ್ಲೂ ಸಹ ಆಚರಣೆಯಲ್ಲಿದ್ದುದನ್ನು ಆ ಸಂದರ್ಭದಲ್ಲಿ ಕಾಣಬಹುದು.

### 4) ವಿಧವಾ ವಿವಾಹದ ಮೇಲಿನ ನಿಷೇಧ

ವಿಧವಾ ವಿವಾಹದ ಮೇಲಿನ ನಿರ್ಬಂಧ ಸಾಂಪ್ರದಾಯಿಕ ಹಿಂದೂ ಸಮಾಜದಲ್ಲಿ ಆಚರಣೆಯಲ್ಲಿದ್ದ ಮತ್ತೊಂದು ಪಿಡುಗು. ವಿಧವೆಯರ ಪುನರ್ವಿವಾಹಕ್ಕೆ ಧಾರ್ಮಿಕವಾಗಿ ನಿಷೇಧವಿತ್ತು. ಈ ಧಾರ್ಮಿಕ ನಂಬಿಕೆಯ ಪ್ರಕಾರ ಗಂಡ ಸತ್ತ ನಂತರವೂ ವಿವಾಹ ಸಂಬಂಧ ಮುಂದುವರೆಯುತ್ತದೆಯೆಂದು ಭಾವಿಸಲಾಗಿತ್ತು. ಹೀಗಾಗಿ ವಿಧವೆಯರು ಅದರಲ್ಲೂ ಬಾಲ ವಿಧವೆಯರು ಕರುಣಾಜನಕ ಸ್ಥಿತಿಯಲ್ಲಿ ಕಾಲ ಕಳೆಯುತ್ತಿದ್ದರು. ಬದುಕಿದ್ದು ಸತ್ತಂತೆ ಇವರ ಬದುಕು ಆಗಿತ್ತು. ಬಿಳಿ/ಕೆಂಪು ವಸ್ತ್ರವನ್ನು ಧರಿಸುವುದು, ಕೇಶಮುಂಡನ ಮಾಡಿಸಿಕೊಳ್ಳುವುದು, ಹೂಕುಂಕುಮ, ಬಳೆ ಆಭರಣ ತೊಡದಿರುವುದು ವಿಧವೆಯರು ಪಾಲಿಸಬೇಕಾದ ನಿಯಮವಾಗಿತ್ತು. ಆಕೆಯ ದರ್ಶನ ಅಪಶಕುನವೆಂದೇ ಭಾವಿಸಲಾಗಿತ್ತು. ಆದ್ದರಿಂದ ವಿಧವೆಗೆ ಯಾವುದೇ ಶುಭ ಕಾರ್ಯಗಳಲ್ಲಿ ಪ್ರವೇಶವಿರಲಿಲ್ಲ. ಹೀಗೆ ಆಕೆಯ ಬದುಕು ಮಹಾ ನರಕ ವಾಗಿರುತ್ತಿತ್ತು.

### 5) ದೇವದಾಸಿ ಪದ್ಧತಿ ಅಥವಾ ದೇವಾಲಯದಲ್ಲಿ ವೇಶ್ಯಾವಾಟಿಕೆ

ಧರ್ಮದ ಹೆಸರಿನಲ್ಲಿ ದೇವಾಲಯಗಳಲ್ಲಿ ಹೆಣ್ಣುಮಕ್ಕಳನ್ನು ದೇವದಾಸಿಯರನ್ನಾಗಿ, ನರ್ತಕಿಯರನ್ನಾಗಿ ಅಥವಾ ಬಸವಿಯರನ್ನಾಗಿ ಬಿಡುವುದು ಸರ್ವೇಸಾಮಾನ್ಯವಾಗಿತ್ತು. ಇದನ್ನು

ಮತ್ತೊಂದು ರೀತಿಯಲ್ಲಿ ಹೇಳುವುದಾದರೆ ಮೇಲ್ಜಾತಿ ಗಂಡಸರ ಕಾಮನೆಗಳಿಗಾಗಿ ದೇವಾಲಯಗಳಲ್ಲಿ ನಡೆಯುತ್ತಿದ್ದ ವೇಶ್ಯಾವಾಟಿಕೆ ಎಂದೇ ಕರೆಯಲಾಗಿದೆ. ಇಂದಿಗೂ ಸಹ ಇದು ಮುಂದುವರೆದಿರುವುದನ್ನು ನಾವು ಕರ್ನಾಟಕದಲ್ಲಿ ಕಾಣಬಹುದು.

### 6) ಅವಿಭಕ್ತ ಕುಟುಂಬ ವ್ಯವಸ್ಥೆ

ಸ್ತ್ರೀಯರ ಸ್ಥಾನಮಾನವನ್ನು ಮತ್ತಷ್ಟು ಕಾಡಿದ ಇನ್ನೊಂದು ವ್ಯವಸ್ಥೆಯೆಂದರೆ ಅವಿಭಕ್ತ ಕುಟುಂಬ ಪದ್ಧತಿ. ಸಾಂಪ್ರದಾಯಿಕ ಪಿತೃಪ್ರಧಾನ ಹಿಂದೂ ಕುಟುಂಬಗಳಲ್ಲಿ ಸ್ತ್ರೀಯರ ಸ್ಥಾನಮಾನಗಳು ತುಂಬಾ ಶೋಚನೀಯವಾಗಿದ್ದವು. ಸ್ತ್ರೀಯರು ಆಸ್ತಿಯ ಹಕ್ಕಿನಿಂದ ವಂಚಿತಳಾಗಿ, ಆರ್ಥಿಕವಾಗಿ ಪರಾವಲಂಬಿ ಗಳಾಗುವಂತೆ ಈ ಅವಿಭಕ್ತ ವ್ಯವಸ್ಥೆ ಕಾರಣವಾಗಿತ್ತು. ಅಲ್ಲದೆ, ಆಕೆಗೆ ಅಲ್ಲಿ ಖಾಸಗಿ ವೇಳೆ ಎಂಬುದು ಇರುತ್ತಿರಲಿಲ್ಲ. ಪತಿಗೆ ವಿಧೇಯಳಾಗಿದ್ದು ಕುಟುಂಬದಲ್ಲಿರುವ ಎಲ್ಲರ ಸೇವೆ ಮಾಡಿಕೊಂಡಿರುವುದೇ ಆಕೆಯ ಮುಖ್ಯ ಕರ್ತವ್ಯವಾಗಿತ್ತು.

ಈ ಎಲ್ಲಾ ಪದ್ಧತಿಗಳಿಮದಾಗಿ ಹೆಣ್ಣು ಕೇವಲ ಗಂಡುಮಕ್ಕಳನ್ನು ಹೆರುವ ಯಂತ್ರವಾಗಿ ವ್ಯಕ್ತಿತ್ವವಿಲ್ಲದಂತೆ ಬದುಕುತ್ತಿದ್ದಳು. ಈ ಸಂದರ್ಭದಲ್ಲಿ ಈ ನಾಡಿನಲ್ಲಿ ಪ್ರವೇಶಿಸಿದ ವಸಾಹತುಶಾಹಿ ಆಧುನಿಕತೆ ಸಹಜವಾಗಿಯೇ ಹಿಂದೂ ಸಮಾಜವನ್ನು ನಾಗರಿಕಗೊಳಿಸುವ ಕಾರ್ಯಕ್ಕೆ ಅವಕಾಶ ಮಾಡಿಕೊಟ್ಟಿತು ಎಂದರೆ ತಪ್ಪಾಗಲಾರದು. ಈ ಅವಕಾಶವನ್ನು ಮೈಸೂರು ಒಡೆಯರು ಸದ್ಬಳಕೆ ಮಾಡದಿರಿ ಎಂದರೆ ಅತಿಶಯೋಕ್ತಿಯೇನೂ ಇಲ್ಲ.

ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಮಹಿಳೆಯ ವಿರುದ್ಧ ತಾರತಮ್ಯ ಎಂಬುದು ಅರಿಸ್ಟಾಟಲ್ ಕಾಲದಿಂದಲೇ ಆರಂಭವಾಯಿತು. ಪಾಶ್ಚಿಮಾತ್ಯ ತತ್ವಶಾಸ್ತ್ರದ ಪಿತಾಮಹ ಎಂದೇ ಪರಿಗಣಿಸಲಾದ ಅರಿಸ್ಟಾಟಲ್ ಸಹ ಮಹಿಳೆಯರು ಕೀಳು ಎಂದೇ ಬೋಧಿಸಿದ್ದ. ಈತನ ಕಣ್ಣಲ್ಲಿ ಗ್ರೀಕರಲ್ಲದವರೆಲ್ಲರೂ ಕಡು ಕೀಳು. ಇದಕ್ಕೆ ಕಾರಣ ಇಂಥವರು ಗ್ರೀಕ್ ಭಾಷೆಯನ್ನು ಮಾತನಾಡಲಾರರು ಎಂಬುದು. 1920 ರಲ್ಲಷ್ಟೇ ಅಮೆರಿಕದಂಥ ರಾಷ್ಟ್ರದಲ್ಲೂ ಮಹಿಳೆಯರು ಮತದಾನದಂಥ ಸಮಾನತೆ ಗಳಿಸಿದ್ದು ಎಂದರೆ ಅಚ್ಚರಿ ಪಡಬೇಕು. ಬ್ರಿಟನ್ನಿನಲ್ಲೂ ಮಹಿಳೆಯರಿಗೆ ಮತದಾನದ ಸಮಾನತೆ ಸಿಕ್ಕಿದ್ದು 1928ರಲ್ಲಿ. ಇದಾದ ನಂತರವಷ್ಟೇ ಭಾರತದಲ್ಲೂ ಆಕೆ ಮತದಾನ ಮಾಡುವ ಹಕ್ಕನ್ನು ಪಡೆದದ್ದು.

ಮಹಿಳೆಯನ್ನು ಪುರುಷನಿಗೆ ಸಮಾನವಾಗಿ ಪರಿಭಾವಿಸುವ ವಿಷಯದಲ್ಲಿ ಭಾರತವು ಪಾಶ್ಚಿಮಾತ್ಯ ರಾಷ್ಟ್ರಗಳಿಗಿಂತ ಬಹಳಷ್ಟು ಮುನ್ನಡೆ ಸಾಧಿಸಿರಬೇಕಿತುತ. ನಮ್ಮದು ಹೇಳಿಕೇಳಿ ಅರ್ಧನಾರೀಶ್ವರ ಉದಾತ್ತ ತತ್ವ. ಇಂಥ ತತ್ವದಿಂದಾಗಿಯೋ ಏನೋ ನಮ್ಮ ಪೂರ್ವೋಕ್ತ ಸಾಂಸ್ಕೃತಿಕ ಆಧಾರದ ರೀತ್ಯ ಪುರುಷನು ಎಂದೆಂದೂ ಸ್ತ್ರೀ ಇಲ್ಲದೆ ಪರಿಪೂರ್ಣ ಎನಿಸಲಾರ. ವಾಸ್ತವವಾಗಿ ನೋಡುವುದಾದರೆ ನಮ್ಮಲ್ಲಿ ಸ್ತ್ರೀಗೆ ಅಗ್ರಸ್ಥಾನ. ಲಕ್ಷ್ಮಿನಾರಾಯಣ, ಜಾನಕೀರಮಣ, ಸೀತಾರಾಮ ಎಂಬಂಥ ನಮ್ಮ ಪಾರಂಪರಿಕ ಹೆಸರುಗಳೇ ಈ ಮೇಲಿನ ಮಾತಿಗೆ ಸಾಕ್ಷಿ. ಮಧುರೆಯಲ್ಲಿ ಮೀನಾಕ್ಷಿಗೆ ಸಾಕ್ಷಾತ್ ಪರಶಿವನೇ ತಲೆಬಾಗಿದ್ದಾನೆ.

ಇದೆಲ್ಲ ಏನೇ ಇದ್ದರೂ ಆಚರಣೆಯಲ್ಲಿ ಮಹಿಳೆಯನ್ನು ಕ್ರೂರವಾಗಿ ನಡೆಸಿಕೊಳ್ಳುವಲ್ಲಿ ಹಿಂದೂ ಧರ್ಮವೇನೂ ಕಡಿಮೆಯಲ್ಲ. ಭಾರತೀಯ ಸಮಾಜದಲ್ಲಿ ಪುರುಷ ಪ್ರಾಧಾನ್ಯವನ್ನೇ ನೀತಿ ನಿಯಮವನ್ನಾಗಿ ಪರಿಗಣಿಸಲಾಗುತ್ತಿರುವುದು ದುರಂತವಾಗಿದೆ.

ಸೈದ್ಧಾಂತಿಕವಾಗಿ ಮೇಲಿನ ಅಂಶಗಳಲ್ಲಿ ಕಾಣುವ ಮುಖ್ಯ ವಿಚಾರವೆಂದರೆ ಬಲಿಪಶುತನವನ್ನು ಆಧಾರವಾಗಿಟ್ಟುಕೊಂಡು ಮಹಿಳಾ ಶೋಷಣೆಯನ್ನು ಸಮಾಜದಲ್ಲಿ ವಿವರಿಸಿಕೊಳ್ಳಲಾಗಿದೆ. ಆದರೆ ಮಹಿಳೆಯ ಕರ್ತವ್ಯವನ್ನು ಹಾಗೂ ಆಕೆಯ ಕೊಡುಗೆಯನ್ನು ಅಪಹರಿಸಿರುವುದನ್ನು ಯಾರೂ ಸಹ ವಿಶ್ಲೇಷಣೆಗೆ ತೆಗೆದುಕೊಳ್ಳದಿರುವುದನ್ನು ಗಮನಿಸಬೇಕಾಗುತ್ತದೆ.

## 2.4 ವಸಾಹತುಶಾಹಿ ಸಂದರ್ಭ ಮತ್ತು ಸಾಮಾಜಿಕ ಬದಲಾವಣೆಗಳು

ಎಲ್ಲ ಮಿತಿಗಳೊಂದಿಗೆ ವಸಾಹತುಶಾಹಿ ಘಟ್ಟದ ಮೈಸೂರು ಕಂಡ ಪ್ರಗತಿಯನ್ನು ಸಂಪೂರ್ಣವಾಗಿ ತಿರಸ್ಕರಿಸಲು ಸಾಧ್ಯವಿಲ್ಲ. ವಸಾಹತುಶಾಹಿ ಮತ್ತು ಸ್ಥಳೀಯ ರಾಜಕೀಯ ಬೆಳವಣಿಗೆಗಳ ಸಂಕೀರ್ಣ ಸಂದರ್ಭದಲ್ಲಿಯೇ ಮೈಸೂರು ಆಡಳಿತದಲ್ಲಿ ಆದ ಕಲ್ಯಾಣಕಾರ್ಯಗಳನ್ನು, ಸಾಧನೆ ವೈಫಲ್ಯಗಳನ್ನು ವಿಶ್ಲೇಷಿಸುವುದು ಸರಿಯೆನ್ನಿಸುತ್ತದೆ. ಮೈಸೂರಿನ ಆಗುಹೋಗುಗಳಲ್ಲಿ ವಸಾಹತುಶಾಹಿ ವಹಿಸಿದ ನಿರ್ಣಾಯಕ ಪಾತ್ರವನ್ನು ಬೋರ್ನ್ ಹೆಟ್ನೆ ತಮ್ಮ ಕೃತಿಯಲ್ಲಿ ಸಮರ್ಥವಾಗಿಯೇ ಪರೀಕ್ಷಿಸಿದ್ದರೆ. ಆದರೆ ಹೆಟ್ನೆಯವರು ಸಂಸ್ಥಾನದಲ್ಲಾದ ಎಲ್ಲ ಬೆಳವಣಿಗೆಗಳೂ ವಸಾಹತುಶಾಹಿಯಿಂದಲೇ ಪ್ರೇರಿತವಾದವೆಂದು ಸಮರ್ಥಿಸಿಕೊಳ್ಳುವ ಉತ್ಸಾಹದಲ್ಲಿ ಸ್ಥಳೀಯವಾದ

ಎಲ್ಲ ಕಾರಣಗಳನ್ನೂ ಕ್ಷುಲ್ಲಕವಾಗಿ ಕಂಡಂತಿದೆ. ಉದಾಹರಣೆಗೆ ಎಲ್ಲ ಪ್ರಮುಖ ದಿವಾನರುಗಳ ನಿರ್ಗಮನದಲ್ಲೂ ಅವರು ವಸಾಹತುವಾದಿಗಳ ಕೈವಾಡವನ್ನೇ ಕಾಣುತ್ತಾ ಸ್ಥಳೀಯ ಆಗುಹೋಗುಗಳು ಬೀರಿದ ಪ್ರಭಾವದ ಬಗ್ಗೆ ಚಕಾರ ಎತ್ತುವುದಿಲ್ಲ.

'ದೇಶೀಯರು ಆಡಳಿತ ನಡೆಸಲು ಅಸಮರ್ಥರು, ಅಧ್ಯಕ್ಷರು ಅವರು ಬಹುಕಾಲ ಬ್ರಿಟಿಷರ ಕೈಕೆಳಗೆ ತಯಾರಿ ಪಡೆಯಬೇಕು' ಎಂದು ತಮ್ಮ ಹಿರಿಮೆಯನ್ನು ಸಮರ್ಥಿಸಿಕೊಳ್ಳುತ್ತಿದ್ದ ವಸಾಹತುವಾದಿಗಳಿಗೆ 'ದಕ್ಷ ಸಮರ್ಥ'ವಾಗಿದ್ದ ಮತ್ತು ಎಲ್ಲ ದೇಶೀಯರೇ ಆಳುತ್ತಿದ್ದ ಮೈಸೂರಿನಂಥ ಸಂಸ್ಥಾನವನ್ನು ದೇಶೀ ದಕ್ಷತೆ ತಮ್ಮ ಸಾಮರ್ಥ್ಯಗಳ ಮಾದರಿಯಾಗಿ ಕಾಂಗ್ರೆಸ್ಸು ತೋರಿಸಬೇಕಾಗಿತ್ತು. ಮಹಾರಾಜರು ಮತ್ತು ಅವರ ದಿವಾನರುಗಳೆಲ್ಲಾ ಉತ್ತಮ ಕಾರ್ಯಪಟುಗಳಾಗಿದ್ದರು. ಮೈಸೂರು ಆಳರಸರು ಒಂದು ಹಂತದಲ್ಲಿ ಕಾಂಗ್ರೆಸ್ಸಿಗೆ ದೇಣಿಗೆ ಕೊಟ್ಟು ಅವರ ಸಹಾನುಭೂತಿ ಪಡೆದುಕೊಂಡರೆ ಆನಂತರ ಸ್ವದೇಶಿ ಮತ್ತು ಅಸ್ಪೃಶ್ಯರ ಏಳ್ಗೆ, ಹೆಣ್ಣು ಮಕ್ಕಳ ಶಿಕ್ಷಣ ಮುಂತಾದ ರಚನಾತ್ಮಕ ಕಾರ್ಯಕ್ರಮಗಳನ್ನು ತಮ್ಮವನ್ನಾಗಿಸಿಕೊಂಡು ಅವನ್ನು ಅನುಷ್ಠಾನಗೊಳಿಸಿದರು. ಒಂದು ರೀತಿಯಲ್ಲಿ ಅದು ಪರಸ್ಪರ ಅವಲಂಬನೆ ಮತ್ತು ಮೆಚ್ಚುಗೆಯಾಗಿತ್ತು.

ಮೈಸೂರಿನ ವಿದ್ಯಮಾನಗಳಲ್ಲಿ ನಮ್ಮ ಗಮನಹರಿಯಬೇಕಾದ ಮತ್ತೊಂದು ವಿಷಯವೆಂದರೆ ಬ್ರಾಹ್ಮಣೇತರ ರಾಜಕೀಯ. ಆರಂಭಿಕ ಹಂತದಲ್ಲಿ ಈ ರಾಜಕೀಯ ಉದಾರವಾದಿ ಜನತಾಂತ್ರಿಕ ಆಶಯ ಹೊಂದಿದ್ದುದು ನಿಜ. ಆದರೆ ಅದು ತನ್ನ ಪ್ರಣಾಳಿಕೆಯನ್ನು ರೂಪಿಸಿಕೊಳ್ಳುವಲ್ಲಿ ಜನತಾಂತ್ರಿಕ ಮಾರ್ಗ ಅನುಸರಿಸಿತೇ? ಸಂಸ್ಥಾನದ ಶೇ.96 ರಷ್ಟು ಜನಸಂಖ್ಯೆಯ ಪ್ರತಿನಿಧಿ ತಾನೆಂದು ಅದು ಹೇಳಿಕೊಳ್ಳುತ್ತಿತ್ತು. ಆದರೆ ಎಷ್ಟು ಮಾತ್ರವೋ ಅದು ಬಹುಸಂಖ್ಯಾತರಾದ ಮಹಿಳೆಯರ, ದಲಿತರ ಮತ್ತಿತರ ಬಡವರ ಜನತಾಂತ್ರಿಕ ಆಶಯಗಳನ್ನು ತನ್ನದಾಗಿಸಿಕೊಂಡಿರಲಿಲ್ಲ. ಹಾಗೆ ನೋಡಿದರೆ ಎಲ್ಲ ಶಾಲಾ ಕಾಲೇಜುಗಳಿಗೆ ಅಸ್ಪೃಶ್ಯರ ಪ್ರವೇಶಕ್ಕೆ ಅನುಮತಿ ಕೊಡಲು ಪ್ರಯತ್ನಿಸಿದ ಸರ್ಕಾರದ ಕ್ರಮವನ್ನು ಇತರರೊಂದಿಗೆ ಹಲವಾರು ಬ್ರಾಹ್ಮಣೇತರ ರಾಜಕಾರಣಿಗಳೂ ವಿರೋಧಿಸಿದರು. ಮಹಿಳಾ ಅಧ್ಯಯನದ ವಿಷಯದಲ್ಲಂತೂ ಅವರು ದಿವ್ಯ ಮೌನ ತಾಳಿದ್ದರು. ಹಾಗಾದರೆ ಬ್ರಾಹ್ಮಣೇತರ ಚಳುವಳಿಯ ಸ್ವರೂಪ ಎಂಥದ್ದು?

ಮೈಸೂರಿನಲ್ಲಿ ಕಾಂಗ್ರೆಸ್ಸಿನ ಹುಟ್ಟು ನಿಗೂಢವಾಗಿದೆ. ಕಾಂಗ್ರೆಸ್ ಹೆಸರಿನಲ್ಲಿ ಒಂದಷ್ಟು ಚಟುಟಿಕೆ 1887 ರಷ್ಟು ಹಿಂದೆಯೇ ಪ್ರಾರಂಭವಾದಂತಿದೆ. ಆದರೆ ಅದಾದದ್ದು ಮಹಾರಾಜರ ಆಸಕ್ತಿಯಿಂದಾಗಿ. ತಿಲಕ್ ಬಣದ ಹೋಂರೂಲ್ ಚಟುವಟಿಕೆಯ ಬಗ್ಗೆ ಕೂಡಾ ಮಾಹಿತಿಯಿದೆ. ಆದರೆ ಡಿ.ವಿ.ಗುಂಡಪ್ಪನವರು ಪರೋಕ್ಷವಾಗಿ ಸೂಚಿಸಿರುವಂತೆ ಮೈಸೂರು ಕಾಂಗ್ರೆಸ್ ಘಟಕ ಸ್ಥಾಪಿತವಾದದ್ದರ ಹಿಂದೆ ಇರುವ ಆಶಯಗಳಲ್ಲಿ ಬ್ರಾಹ್ಮಣೇತರ ಪ್ರಜಾಮಿತ್ರ ಮಂಡಳಿಯ ಭರಾಟೆಯನ್ನು ತಡೆಯುವುದೂ ಒಂದಾಗಿತ್ತು.

ಹದಿನೈದು ವರ್ಷಗಳಷ್ಟು ದೀರ್ಘಕಾಲ ದಿವಾನರಾಗಿದ್ದು, ನಾಲ್ವಡಿ ಕೃಷ್ಣರಾಜರ ಕಣ್ಣು, ಕಿವಿ ಎಲ್ಲವೂ ಆಗಿದ್ದ ಆಡಳಿತಪಟು ದಿವಾನ್ ಮಿರ್ಜಾ ಇಸ್ಮಾಯಿಲ್. ಆದರೆ ಇತರ ಕೆಲವು ದಿವಾನರು ಸಂಶೋಧಕರ ಗಮನ ಸೆಳೆದಿರುವಷ್ಟು ಮಿರ್ಜಾ ಸೆಳೆದಿಲ್ಲ. ಮಿರ್ಜಾರನ್ನು ದಿವಾನರನ್ನಾಗಿ ನೇಮಿಸಿದ್ದಕ್ಕೆ ಬಂದ ಪ್ರತಿಕ್ರಿಯೆಗಳು ಹಾಗೂ ಮಿರ್ಜಾ ದಿವಾನರಾಗಿ ಹಲವು ರಾಜಕೀಯ ಗುಂಪು–ಹಿತಾಸಕ್ತಿಗಳಿಂದ ಎದುರಿಸಿದ ಸಮಸ್ಯೆಗಳ ಬಗ್ಗೆ ಆಳವಾಗಿ ವಿಚಾರ ಮಾಡಬೇಕಾಗಿದೆ.

ಬಲಪಂಥೀಯ ರಾಷ್ಟ್ರೀಯ ಕಾಂಗ್ರೆಸ್ ವರಿಷ್ಟರಿಗೆ ಮಿರ್ಜಾ ಅಚ್ಚುಮೆಚ್ಚಿನ ವ್ಯಕ್ತಿ. ಮಿರ್ಜಾ ವ್ಯಕ್ತಿತ್ವ ಎಂಥದ್ದೆಂದರೆ ಗಾಂಧೀಜಿ ತಮ್ಮೊಂದಿಗೆ ಅಭಿಪ್ರಾಯ ಭೇದವಿದ್ದ ಹಲವು ಜನ ರಾಷ್ಟ್ರೀಯ ನಾಯಕರೊಂದಿಗೆ ವ್ಯವಹರಿಸಲು ಮಿರ್ಜಾರನ್ನು ನಂಬಿ ಬಳಸಿಕೊಂಡಂತೆ ಕಾಣುತ್ತದೆ. ದುಂಡುಮೇಜಿನ ಸಮ್ಮೇಳನದಲ್ಲಂತೂ ಮಿರ್ಜಾ ಅವರು ಗಾಂಧಿ ಮತ್ತು ಅಂಬೇಡ್ಕರ್ ನಡುವೆ ರಾಜಿ ಮಾಡಿಸುವ ಕೆಲಸದಲ್ಲಿ ತೊಡಗಿದ್ದುದಕ್ಕೆ ಪುರಾವೆಗಳಿವೆ. ಭಾರತ ಒಕ್ಕೂಟ ---- ಮತ್ತು ರಾಜ್ಯಗಳ ಸ್ವಾಯತ್ತತೆಯ ಬಗ್ಗೆ ಮಿರ್ಜಾ ತಳೆದ ನಿಲುವು ಎಲ್ಲರನ್ನೂ ತಲೆತೂಗಿಸುವಂತಿತ್ತು. ಯಾವುದೇ ಸಾರ್ವಜನಿಕ ವಿಷಯದ ಬಗೆಗೂ ಆತ ಅಧಿಕೃತವಾಗಿ ಮಾತನಾಡಬಲ್ಲ ಮುತ್ಸದ್ಧಿಯಾಗಿದ್ದರು. ಸ್ವದೇಶಿ ತತ್ವಕ್ಕೆ ನಿಷರಾಗಿದ್ದ ಮಿರ್ಜಾ ಗಾಂಧೀಜಿಯ ಮಹಾ ಅಭಿಮಾನಿ, ಸ್ನೇಹಿತ. ಮಹಾರಾಜ ನಾಲ್ವಡಿ ಕೃಷ್ಣರಾಜರಿಗೆ ಪರಮ ನಿಷ್ಟ. ಆಡಳಿತದಲ್ಲಿ ಗುಣಗ್ರಾಹಿ ಯಾಗಿದ್ದ ಮಿರ್ಜಾ ರಾಜಕೀಯ ಭಿನ್ನಮತವನ್ನು ದಾಕ್ಷಿಣ್ಯವಿಲ್ಲದೆ ಬಗ್ಗು ಬಡಿದವರು. ಮಿರ್ಜಾ ಇಸ್ಮಾಯಿಲ್‌ರ ಆಡಳಿತವನ್ನು ವಿಶ್ಲೇಷಿಸಲು ಭಿನ್ನ ರೀತಿಯ ತಾತ್ವಿಕತೆಯೊಂದರ ಅವಶ್ಯಕತೆಯಿದೆ ಎನಿಸುತ್ತದೆ.

1938ರಲ್ಲಿ ಸ್ಥಾಪನೆಯಾದ ಮೈಸೂರು ಕಾಂಗ್ರೆಸ್ ಸಂಸ್ಥೆ, ಸಂಸ್ಥಾನದ ಬಹುತೇಕ ಮುಖ್ಯ ರಾಜಕೀಯ ಬಣಗಳನ್ನು ಒಳಗೊಂಡಿದ್ದ ಬಲಿಷ್ಟ ಸಂಸ್ಥೆ. ನಿರಂಕುಶ ಪ್ರಭುತ್ವಕ್ಕೆ ಸೆಡ್ಡು ಹೊಡೆಯಲು ಅದು ತಯಾರಿ ನಡೆಸಿತ್ತು. ನಿರಂಕುಶಾಧಿಕಾರವನ್ನು ಎದುರಿಸಲು ಏಕಮತ್ಯದಿಂದ ಮಾತ್ರ ಸಾಧ್ಯವೆನ್ನುವ ಅರಿವು ಅನೇಕರಲ್ಲಿ ಬಂದಿತ್ತು.

ದಲಿತರು, ಮಹಿಳೆಯರು ಮತ್ತು ಅಲ್ಪಸಂಖ್ಯಾತರು ರಾಜ್ಯದಲ್ಲಿ ಬಹುಸಂಖ್ಯಾತರು. ಆದರೆ ಈ ವರ್ಗಗಳನ್ನು ಕುರಿತ ಅಧ್ಯಯನಗಳು ನಡೆದೇ ಇಲ್ಲವೆಂದರೂ ಉತ್ಪ್ರೇಕ್ಷೆಯಲ್ಲ. ಸರ್ಕಾರ, ಕಾಂಗ್ರೆಸ್, ಬ್ರಾಹ್ಮಣೇತರ ಪಕ್ಷಗಳು ಈ ವಿಷಯದ ಬಗ್ಗೆ ತಳೆದಿದ್ದ ನಿಲುವೇನು? ಅದೇ ರೀತಿಯಲ್ಲಿ ಎಲ್ಲ ಪ್ರಜಾಸತ್ತಾತ್ಮಕ ಚಳುವಳಿಗಳ ಬೆನ್ನೆಲುಬಾಗಿದ್ದ ವಿದ್ಯಾರ್ಥಿಗಳು, ರೈತರು ಮತ್ತು ಕಾರ್ಮಿಕರ ಬಗ್ಗೆಯೂ ಹೆಚ್ಚಿನ ಗಮನಹರಿಸಿ ಈ ವರ್ಗಗಳಿಗೆ ಚಳುವಳಿಗಳು ಕೊಟ್ಟ ಪ್ರಾಮುಖ್ಯತೆ ಕುರಿತು ಚರ್ಚೆ ನಡೆಯಬೇಕಾಗಿದೆ. ಸಮಾಜವಾದಿ ಮತ್ತು ಕಮ್ಯುನಿಸ್ಟ್ ಸಿದ್ಧಾಂತಗಳು ಸಂಸ್ಥಾನವನ್ನು ಪ್ರಭಾವಿಸಿದ್ದವೇ? ಪ್ರಭಾವಿಸಿದ್ದರೆ ಯಾವ ರೀತಿ? ವಿವಿಧ ಸಾಮಾಜಿಕ ವರ್ಗಗಳನ್ನು ರಾಷ್ಟ್ರೀಯತೆ ಮತ್ತು ರಾಜಶಾಹಿ ಆಕರ್ಷಿಸಿದ, ವಿಕರ್ಷಿಸಿದ ಬಗೆ ಎಂತು?

ಈ ಮೇಲಿನ ವಾದ ಸರಣಿಯನ್ನು ಗಮನಿಸಿದಾಗ ವಸಾಹತುಶಾಹಿ ಬೇರೆಬೇರೆ ಎಡೆಗಳಲ್ಲಿ ಬೇರೆ ಬೇರೆ ರೀತಿಯ ಪರಿಣಾಮಗಳಿಗೆ ಎಡೆ ಮಾಡಿಕೊಟ್ಟಿತ್ತು. ಹಾಗೆಯೇ ಆಧುನಿಕತೆಯೊಡನೆ ಯುದ್ಧ, ಕ್ಷಾಮ, ಹಿಂಸೆ ಇವೂ ಸಹ ಅದೇ ಸನ್ನಿವೇಶದಲ್ಲಿ ತೀವ್ರವಾಗಿತ್ತು. ಹೀಗಿರುವಾಗಲೂ ಮೈಸೂರು ರಾಜಕೀಯದಲ್ಲಿ ಬ್ರಾಹ್ಮಣ ಸಮುದಾಯವೇ ಬೌದ್ಧಿಕ ವಲಯವನ್ನು ನಿಯಂತ್ರಿಸುತ್ತಿತ್ತು. ಇದರಿಂದಾಗಿ ಬ್ರಾಹ್ಮಣರಲ್ಲದವರಲ್ಲಿ ತೀವ್ರವಾದ ಅಸಮಾಧಾನವು ಉಂಟಾಗಿ ಬ್ರಾಹ್ಮಣರ ವಿರುದ್ಧ ಸಂಘರ್ಷಗಳು ಶುರುವಾಯಿತು.

ಉತ್ತರ ಕರ್ನಾಟಕವು ಸಹ ಹಲವಾರು ಪ್ರಾಂತ್ಯಗಳಲ್ಲಿ ಹಂಚಿಕೊಂಡಿದ್ದು ಕನ್ನಡ ಭಾಷೆಯ ಶಿಕ್ಷಿತ ಜನರು ಕರ್ನಾಟಕ ವಿದ್ಯಾವರ್ಧಕ ಸಂಘ ಹಾಗೂ ಇತರ ಸಂಘಟನೆಗಳ ಮೂಲಕ ಕನ್ನಡ ಭಾಷಾ ಪ್ರಾಂತ್ರಯಗಳ ಏಕೀಕರಣದ ಮಹತ್ವಾಕಾಂಕ್ಷೆಯನ್ನು ತೀವ್ರವಾಗಿ ವ್ಯಕ್ತಪಡಿಸುತ್ತಾರೆ. ಇಲ್ಲಿ ಕನ್ನಡ ಭಾಷೆಯನ್ನು ಪ್ರತಿನಿಧಿಸುವ, ಕರ್ನಾಟಕತ್ವದ ಹುಟುಕಾಟವು ಈ ವಿದ್ಯಾವಂತರ ಸಾಮಾಜಿಕ ಐಡೆಂಟಿಟಿಯ ಒಂದು ಭಾಗವಾಗಿಯೇ ಬಂದದ್ದು ಎಂಬುದನ್ನು ಗುರುತಿಸಬೇಕಾಗುತ್ತದೆ. ಈ

ಹುಟುಕಾಟವನ್ನು ಪ್ರೇರೇಪಿಸುತ್ತಿದ್ದವರಲ್ಲಿ ಕನ್ನಡ ಪತ್ರಿಕೆಗಳ ಪಾತ್ರವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಹಾಗೆಯೇ ಕನ್ನಡ ಕಾದಂಬರಿಗಳ ಹುಟ್ಟಿಗೂ ಸಹ ಇವು ಕಾರಣವಾಗುತ್ತವೆ. 19ನೇ ಶತಮಾನದ ಕೊನೆಯ ಹೊತ್ತಿಗೆ ಸುಮಾರು 25 ಪತ್ರಿಕೆಗಳು ವಿವಿಧ ಊರುಗಳಿಂದ ಪ್ರಕಟವಾಗುತ್ತಿದ್ದುದನ್ನು ನಾವು ಗಮನಿಸಬಹುದು. 19ನೇ ಶತಮಾನದ ಕೊನೆಯಲ್ಲಿ ಹುಟ್ಟಿದಂತಹ ಕನ್ನಡ ಬರವಣಿಗೆಗಳು ವಿದ್ಯಾವಂತ ವರ್ಗದ ಐಡಿಯಾಲಜಿಕಲ್ ಕಾಳಜಿಗಳನ್ನೇ ಪ್ರತಿನಿಧಿಸುತ್ತದೆ. ಆದ್ದರಿಂದ ಇಲ್ಲಿ ಬರವಣಿಗೆಯನ್ನು ಒಬ್ಬ ಲೇಖಕನ ಬರಹವೆಂದು ನೋಡದೆ ಅದೊಂದು ಸಾಮಾಜಿಕ ಗುಂಪಿನ ಜೀವನ ದರ್ಶನ ಎಂದು ನೊಡಿದಾಗ ಆ ಬರವಣಿಗೆಯ ಆಕೃತಿಯನ್ನು ನಾವು ಸ್ಪಷ್ಟವಾಗಿ ವಿವರಿಸಿಕೊಳ್ಳಬಹುದು. ಅಂದರೆ ವಸಾಹತುಶಾಹಿ ಆಡಳಿತದ ಸಂದರ್ಭದಲ್ಲಿ ಯಾವ ಗುಂಪು ಮೇಲ್ಮುಖ ಚಲನೆಯಲ್ಲಿ ತೊಡಗಿತ್ತು ಎನ್ನುವುದರೊಡನೆ ಕಾದಂಬರಿಯು ಆ ಸಾಮಾಜಿಕ ಗುಂಪಿನ ಕ್ರಿಯಾಚರಣೆಯಾಗಿಯೇ ಬರುತ್ತದೆ ಎಂಬುದನ್ನು ನಾವು ಗಮನಿಸಬೇಕಾಗುತ್ತದೆ. ಆದ್ದರಿಂದಲೇ ಟೆರಿ ಈಗಲ್ಟನ್ ಸಾಹಿತ್ಯವನ್ನು ಸಾಮಾಜಿಕ ಕ್ರಿಯಾಚರಣೆ ಎಂದು ಗುರುತಿಸುತ್ತನೆ. ಅಂದರೆ ಒಂದು ಸಾಹಿತ್ಯ ಕೃತಿಯು ಯಾವ ಸಮುದಯದ ಮನೋಸ್ಥಿತಿಯಿಂದ ಬಮದಿದೆಯೋ ಅದರ ತಾತ್ವಿಕತೆಯನ್ನು ತನ್ನ ಆಕೃತಿಯಲ್ಲಿ ಪ್ರತಿನಿಧಿಸುತ್ತಿರುತ್ತದೆ. ವಸಾಹತುಶಾಹಿ ಸಂದರ್ಭದಲ್ಲಿ ಎಲ್ಲ ಸಮುದಾಯಗಳಲ್ಲೂ ಒಂದು ರೀತಿಯ ಚಲನಶೀಲತೆ ಆರಂಭವಾಗುತ್ತದೆ. ಈ ಚಲನಶೀಲತೆಯನ್ನು ವಸಾಹತುಶಾಹಿ ಆಡಳಿತ ನಿರ್ಮಿಸಿಕೊಟ್ಟಂತಹ ಯಜಮಾನಿ ಮೌಲ್ಯಗಳು ಪ್ರಭಾವಿಸುತ್ತಿರುತ್ತವೆ. ಆದ್ದರಿಂದ ಇಂಥ ಚಲನೆಯಲ್ಲಿರುವ ಸಮುದಾಯಗಳ ಸಂಸ್ಕೃತಿಗಳು ಇಂಥ ಯಜಮಾನಿ ಮೌಲ್ಯಗಳೊಡನೆ ಮುಖಾಮುಖಿಯಾಗುವಾಗ ತನ್ನೊಳತೆ 'ಶೇಷ' ಮತ್ತು 'ಉದಯೋನ್ಮುಖ' ಸ್ಥಿತಿಯ ಮೌಲ್ಯಗಳನ್ನು ಪ್ರತಿಫಲನಗೊಳಿಸುತ್ತಿರುತ್ತವೆ. ಇದನ್ನು ರೇಮಂಡ್ ವಿಲ್ಲಿಯಮ್ಸ್ ಚರ್ಚಿಸುತ್ತಾನೆ. ಆತನ ಪ್ರಕಾರ ಶೇಷವೆಂದರೆ ಹಳೆಯ ಕಾಲದ್ದೇನು ಅಲ್ಲ. ವರ್ತಮಾನದ ಸಂದರ್ಭದಲ್ಲಿ ಒಂದು ಪರಂಪರೆಯ ಮುಂದುವರಿಕೆಯಾಗಿ ಕಾಣುವಂತಹ ಮೌಲ್ಯವೇ ಶೇಷ ಎಂದಾಗುತ್ತದೆ. ಈ ಮೌಲ್ಯದ ಮೂಲಕ ವರ್ತಮಾನದ ಚಲನಶೀಲತೆಯನ್ನು ಅಂತರಂಗೀಕರಿಸಿಕೊಳ್ಳಲು ಸಾಧ್ಯವಾಗುತ್ತದೆ. ಉದಯೋನ್ಮುಖ ಮೌಲ್ಯಗಳು ಅಂದರೆ ವರ್ತಮಾನದ ಸನ್ನಿವೇಶದಲ್ಲಿ ಯಜಮಾನಿ ಮೌಲ್ಯಗಳಿಗೆ ಮುಖಾಮುಖಿಯಾಗಿ ಸಮುದಯವೊಂದು ಭವಿಷ್ಯವನ್ನು ಕಟ್ಟಿಕೊಳ್ಳುವ ಮೌಲ್ಯವೆಂದು ಕರೆಯಬಹುದು. ಉದಾಹರಣೆಗೆ ಇಂದಿರಾಬಾಯಿ ಕಾದಂಬರಿಯ ಬಗ್ಗೆ ಡಾ॥ಶಿವರಾಮ ಪಡಿಕ್ಕಲ್‌ರ ಮಾತುಗಳು ಹೀಗಿವೆ, "ಇಂದಿರಾಬಾಯಿಯವರಲ್ಲಿ ಶ್ರೀ ವೆಂಕಟರಾಯರು ಚಿತ್ರಿಸಿದ ಸಮಾಜ ಅವರದೇ ಆದ ಸಾರಸ್ವತ ಬ್ರಾಹ್ಮಣ ಸಮಾಜ. ಅವರು ಪೋಲೀಸ್

ನೌಕರಿಯಲ್ಲಿದ್ದವರು. ಆ ಕಾಲದಲ್ಲಿ ನಡೆದ ಘಟನೆಗಳನ್ನು ವಸ್ತುವಾಗಿಟ್ಟು ಕೊಂಡು ಆಧುನಿಕ ಸಮಾಜ ಕ್ರಾಂತಿಗೆ ಗುರಿಯಾದ ಸಾರಸ್ವತ ಸಮಾಜದ ತಳಮಳವನ್ನು ಈ ಬರಹದಲ್ಲಿ ತೋರಿಸಿದ್ದಾರೆ."[12]

ಮೈಸೂರು ಪ್ರಾಂತ್ಯದಲ್ಲಿ ವಸಾಹತುಶಾಹಿ ಆಡಳಿತ ಮಹಾರಾಜರ ಮಧ್ಯವರ್ತಿತನದ ಮೂಲಕ ಅನುಭವಕ್ಕೆ ಬಂದು ಆಧುನಿಕತೆಯು ಆರಂಭವಾಗುತ್ತದೆ. ಅದೇ ವೇಳೆಯಲ್ಲಿ ಬ್ರಾಹ್ಮಣೇತರ ಜಾತಿಗಳು ತಮ್ಮ ಸಾಮುದಯಿಕ ಐಡೆಂಟಿಟಿ ಹಕ್ಕುಗಳನ್ನು ಸ್ಥಾಪಿಸಿಕೊಳ್ಳಲು ನಿಧಾನವಾಗಿ ಪ್ರಯತ್ನಿಸುತ್ತಿದ್ದವು. ಹಾಗೆಯೇ ಕೆಲವರು ಪ್ರಬಲವಾಗಿಯೂ ಬೆಳೆಯುತ್ತಿದ್ದರು. ದಲಿತರೂ ಸಹ ಆಡಳಿತದಲ್ಲಿ ತಮ್ಮ ಪಾಲನ್ನು ಕೇಳಲಾರಂಭಿಸಿದರು. ಈ ಮಧ್ಯೆ ಎಸ್.ಚಂದ್ರಶೇಖರ್ ಅವರು ಗುರುತಿಸುವಂತೆ ಮೈಸೂರು ಮತ್ತು ಮದ್ರಾಸ್ ಬ್ರಾಹ್ಮಣರ ನಡುವೆ ಪೈಪೋಟಿಯು ಆರಂಭವಾಗಿತ್ತು. ಇವೆಲ್ಲದರ ಮಧ್ಯೆ ಆಧುನಿಕ ಜೀವನ ಶೈಲಿಯೂ ಗಟ್ಟಿಯಾಗಿ ಸ್ಥಿರಗೊಳ್ಳುತ್ತಿತ್ತು. ಹೀಗಾಗಿ ಎಲ್ಲಾ ಸಮುದಾಯಗಳಲ್ಲೂ ಒಂದು ರೀತಿಯ ಆಧುನಿಕತೆ ಆರಂಭಗೊಂಡಿತ್ತು. ಹಾಗೆಯೇ ಶ್ರೇಣೀಕ್ರತ ಮೌಲ್ಯಗಳ ವಿರುದ್ಧ ಪ್ರತಿಭಟನೆಯೂ ಆರಂಭಗೊಂಡಿತ್ತು. ಇಂತಹ ಸನ್ನಿವೇಶವನ್ನು ತಿರಸ್ಕರಿಸುವ ಬದಲು ಪರಾಮರ್ಶೆಗೆ ತೆಗೆದುಕೊಳ್ಳುವಾಗ ಪುಟ್ಟಣ್ಣನವರೆಂದೂ ವ್ಯಕ್ತಿಗಳನ್ನು ಇಲ್ಲಿ ಮಾದರಿಯನ್ನಾಗಿ ನಿರೂಪಿಸದೆ ಸಮುದಾಯಗಳನ್ನೇ ಮಾದರಿಗಳಾಗಿ ನಿರೂಪಿಸುತ್ತಾರೆ. ಹಾಗಾಗಿ ಸೀತೆಯು ಆದರ್ಶವಾಗಿ ನಿರೂಪಿತವಾದರೂ ಕೊನೆಗೆ ಅದು ಒಂದು ಸಮುದಾಯದ ಚೌಕಟ್ಟಿನಲ್ಲೇ ಪೂರ್ಣತೆಯನ್ನು ಪಡೆದುಕೊಳ್ಳುತ್ತದೆ. ಒಟ್ಟಾರೆಯಾಗಿ ಏಕರೂಪಿ ರಾಮಾಯಣದ ನೈತಿಕ ನೆಲೆಯು ಕಾದಂಬರಿಯ ಆಕೃತಿಯನ್ನು ನಿಭಾಯಿಸುವಂತೆ ಭಾಸವಾಗುತ್ತದೆ. ಒಂದು ರೀತಿಯ ಸಾಂಪ್ರದಾಯಿಕತೆಯೊಳಗೆಯೇ ಬದಲಾವಣೆಯನ್ನು ಕಾದಂಬರಿಯು ಬಯಸುತ್ತದೆ.

ಪ್ರಾಯಶಃ ಸಾಮಾಜಿಕ, ರಾಜಕೀಯ ಕಾರಣಗಳಿಂದಾಗಿಯೋ ಏನೋ ಪಶ್ಚಿಮದ ಉದಾರವಾದ ಮೈಸೂರನ್ನು ತಲುಪಿದ್ದು ಬಹುತೇಕ ಉಳಿದೆಲ್ಲ ಪ್ರಾಂತ್ಯಗಳನ್ನು ತಲುಪಿದ ನಂತರವೇ ಈ ಸಾಲಿನಲ್ಲಿ ನಿಲ್ಲುವ ಕೊನೆಯ ಪ್ರಾಂತ್ಯವೆಂದರೆ ಹೈದರಾಬಾದು. ಆದರೆ ಬ್ರಿಟಿಷರ ನೇರಾಡಳಿತದ ಐವತ್ತು ವರ್ಷಗಳ (1831–1818) ಅವಧಿಯಲ್ಲಿ ರೂಪಿಸಿಕೊಂಡ ಆಡಳಿತ ವ್ಯವಸ್ಥೆಗ ಮೈಸೂರು ರಾಜ್ಯ ಉತ್ತರಾಧಿಕಾರಿಯಾಯಿತು. 1881ರ ಒಪ್ಪಂದದ ನಿರ್ದೇಶನದಿಂದಾಗಿ ಸ್ಥಳೀಯ ರಾಜರು ಈ

ವ್ಯವಸ್ಥೆಯನ್ನು ಬದಲಾಯಿಸುವಂತೆಯೂ ಇರಲಿಲ್ಲ. ಮದರಾಸು ವಿಶ್ವವಿದ್ಯಾಲಯದಲ್ಲಿ ತಯಾರಾದ ಬಹಳಷ್ಟು ಜನ ಈ ವ್ಯವಸ್ಥೆಯ ಆಯಕಟ್ಟಿನ ಜಾಗಕ್ಕೆ ಬಂದರು ಹಾಗೂ ಇವರೆಲ್ಲಾ ಭಾರತೀ ಉಪಖಂಡದ ಸುಧಾರಣಾವಾದಿ ಚಳುವಳಿಯಿಂದ ಪ್ರಭಾವಿತರಾದರು. ಬ್ರಿಟಿಷರು ಹಾಗೂ ಕ್ರಿಶ್ಚಿಯನ್ ಮಿಷನರಿಗಳ ಬೆಂಬಲ ಪಡೆದ ಇವರು ಸಾಮಾಜಿಕ ಹಾಗೂ ಧಾರ್ಮಿಕ ಸುಧಾರಣೆಗಳ ಮಾತನ್ನಾಡಲಾರಂಭಿಸಿದರು.

ಈ ಸುಧಾರಣೆಗಳು ಮಹಿಳೆಯರ ಸ್ಥಿತಿಗತಿಗಳ ಮೇಲೆ ಉಂಟು ಮಾಡಿದ ಪರಿಣಾಮಗಳನ್ನು ಮುಂದೆ ಈ ಸಂಶೋಧನೆ ಚರ್ಚಿಸುತ್ತದೆ. ಅಲ್ಲಿ ಮಹಿಳಾ ಶಿಕ್ಷಣ ಹಾಗೂ ವಿವಾಹಗಳ ಬಗೆಗೆ ಇಲ್ಲಿ ಹೆಚ್ಚು ಒತ್ತು ನೀಡಲಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ, ಮೈಸೂರಿಗರು ಸಂಪ್ರದಾಯವಾದಿಗಳಾಗಿದ್ದು ಹಾಗೂ ಈ ಕಾರಣದಿಂದ ಯಾವುದೇ ಬಗೆಯ ಸುಧಾಋಣೆಯ ವಿರೋಧಿಗಳಾಗಿದ್ದರು. ಆಗಿನ ಸುಶಿಕ್ಷಿತ ವರ್ಗ ಕೂಡ ಸಾಮಾಜಿಕ ಸುಧಾರಣೆಗಳ ಬಗ್ಗೆ ಚರ್ಚಿಸುವ ಒಲವನ್ನೂ ತೋರುತ್ತಿರಲಿಲ್ಲ. ತಮಗಿಂತ ಮೊದಲು ಸರ್ಕಾರದಲ್ಲಿದ್ದ ಬ್ರಿಟಿಷರಂತೆಯೇ 1881 ರಲ್ಲಿ ಅಧಿಕಾರಕ್ಕೆ ಬಂದ ಒಡೆಯರ್ ಅವರು ಕುಡ ಈ ಸುಧಾರಣೆಯ ಪ್ರಶ್ನೆಯನ್ನು ಅತಿ ಎಚ್ಚರಿಕೆಯಿಂದಲೇ ನೋಡಲೆತ್ನಿಸಿದರು. ಹೀಗಿದ್ದರೂ ಈ ಹಿಂದೆ ಸೂಚಿಸಿದಂತೆ ಸುಧಾರಣಾವಾದಿ ಚಟುವಟಿಕೆಗಳಿಂದ ಪ್ರಭಾವಿತರಾದ ಮೈಸೂರಿನ ಕೆಲ ವ್ಯಕ್ತಿಗಳು ಕೊನೆಯ ಪಕ್ಷ ಈ ಅಕಡೆಮಿಕ್ ಆಸಕ್ತಿಯನ್ನಾದರೂ ತೋರಿಸಿ ಮೂರು ಸಂಘಟನೆಗಳನ್ನು ಹುಟ್ಟು ಹಾಕಿದರು. ಅವೆಂದರೆ, 'ಬೆಂಗಳೂರು ಲಿಟರರಿ ಯೂನಿಯನ್', 'ರಾನಡ ಸೊಸೈಟಿ' ಮತ್ತು 'ವಿಧವಾ ವಿವಾಹ ಸಂಘ'.

1870ರಲ್ಲಿ ಆರಂಭಗೊಂಡ ಬೆಂಗಳೂರು ಲಿಟರರಿ ಯೂನಿಯನ್ನ ಸಮಾಜ ಸುಧಾರಣೆ ಕುರಿತಂತೆ ಪ್ರಮುಖ ಸುಧಾರಣಾವಾದಿಗಳಿಂದ ಭಾಷಣಗಳನ್ನು ಏರ್ಪಡಿಸಿತು. ಆದರೆ ಸಂಪ್ರದಾಯವಾದಿಗಳೇ ಪ್ರಧಾನವಾಗಿದ್ದ ಈ ಸಂಘ ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸುವುದನ್ನು ದಾಟಿ ಮುಂದೆ ಸಾಗಲಿಲ್ಲ. ಹಾಗೆಯೇ ಯೂರೋಪಿಯನ್ನನೊಬ್ಬನ ನಾಯಕತ್ವದಲ್ಲಿ ತನ್ನ ಆರಂಭಿಕ ಹಂತದಲ್ಲಿ ಚಟುವಟಿಕೆಯಿಂದಿದ್ದ ರಾನಡೆ ಸೊಸೈಟಿ ಕಾಲಕ್ರಮೇಣ ಸುಧಾರಣಾ ಚಟುವಟಿಕೆಗಳ

ಬಗ್ಗೆ ಆಸಕ್ತಿಯಿರದ ಸ್ಥಳೀಯ ಸಂಪ್ರದಾಯ ವಾದಿಗಳ ಕೈಗೆ ಸಿಕ್ಕಿ ಬಸವಳಿಯಿತು. ಅಷ್ಟೇ ಅಲ್ಲ, ಹಣ ದುರುಪಯೋಗದ ಸಮಸ್ಯೆಯಿಂದಾಗಿ ಸೊಸೈಟಿಯನ್ನು ಮುಚ್ಚಬೇಕಾಗಿಯೂ ಬಂತು.

ಇನ್ನುಳಿದ ಕೆಲವು ವ್ಯಕ್ತಿಗಳು ಸೇರಿ ಮಿಷನರಿಗಳು ಹಾಗೂ ಯೂರೋಪಿಯನ್ನರ ಸಹಾಯದಿಂದ ಬೆಂಗಳೂರು ಹಾಗೂ ಮೈಸೂರುಗಳಲ್ಲಿ ವಿಧವಾ ವಿವಾಹ ಸಂಘಗಳನ್ನು ಆರಂಭಿಸಿದರು. ಆದರೆ ಈ ಎರಡೂ ಸಂಘಗಳು ತಮ್ಮ ಮೊದಲ ಸಭೆಯ ನಂತರ ಮುಂದುವರಿಯಲಿಲ್ಲ. ವೈಯಕ್ತಿಕ ಭಿನ್ನಾಭಿಪ್ರಾಯಗಳ ಕಾರಣಗಳಿಂದಾಗಿ ಈ ಸಂಘಗಳು ಮುಂದುವರಿಯಲಿಲ್ಲವೆಂದೂ ಹೇಳಲಾಗಿದೆ. ಅಂತೂ ತಾವು ಕೈಗೊಂಡ ಕೆಲಸವನ್ನು ಮುಂದುವರಿಸಲು ಬೇಕಾದ ಬದ್ಧತೆ ಅವರಿಗಿರಲಿಲ್ಲ ಎಂಬುದು ಸ್ಪಷ್ಟ.

ಈ ಬಗೆಯ ಸನ್ನಿವೇಶದಲ್ಲಿ ತೀವ್ರ ಸುಧಾರಣೆಗಳನ್ನು ಪ್ರತಿಪಾದಿಸುವ ಚಳುವಳಿಗಳನ್ನು ಸಂಘಟಿಸುವುದು ಅತ್ಯಂತ ಪ್ರಯಾಸಕರ ಕೆಲಸವಾಗಿತ್ತು. ಹೀಗಿದ್ದಾಗಲೂ 1870ರ ಕೊನೆಯ ಹೊತ್ತಿಗೆ ಮಹಿಳಾ ಶಿಕ್ಷಣ ಕುರಿತಂತೆ ಕೆಲವರಾದರೂ ಆಸಕ್ತಿ ತೋರಲಾರಂಭಿಸಿದರು.

## 2.5 ಉಪಸಂಹಾರ

ಮೈಸೂರು ಪ್ರಾಂತ್ಯದಲ್ಲಿದ್ದ ದೊಡ್ಡನಗರಗಳು ಕೆಲವು ಮಾತ್ರ. 1915ರವರೆಗೆ ಕೈಗಾರಿಕಗಳೂ ದೊಡ್ಡದಾಗಿ ಬೆಳೆದಿರಲಿಲ್ಲ. 1915ರ ನಂತರವೇ ಈ ಪ್ರಕ್ರಿಯೆ ಪ್ರಾರಂಭವಾಗಿ ಕಾರ್ಮಿಕವರ್ಗ ಬೆಳೆಯಲಾರಂಭಿಸಿತು. ಆದರೆ ಈ ಮೈಸೂರಿನ ಕಾರ್ಮಿಕ ವರ್ಗ ಅದರ ವಿಭಿನ್ನ ಸಾಮಾಜಿಕ ಹಿನ್ನಲೆಯಿಂದಾಗಿ ಬಹಳ ಕಾಲ ವಿಚಿತ್ರ ರೀತಿಯಲ್ಲಿ ವರ್ತಿಸಿತು. ಆದರೆ ಅದು ಸಂಘಟಿತವಾದಾಗ ವಸಾಹತುಶಾಹಿ ಮತ್ತು ಸಂಸ್ಥಾನದ ನಿರಂಕುಶತೆಯ ವಿರುದ್ಧ ಪರಿಣಾಮಕಾರಿಯಾಗಿ ಪ್ರತಿಭಟಿಸಿತು. ಮೈಸೂರು ಪ್ರಾಂತ್ಯ ಭೂ ಆವೃತವಾಗಿದ್ದು ಸಮುದ್ರ ತೀರ ಪ್ರದೇಶವಿಲ್ಲದಿದ್ದುದರಿಂದ ಅಲ್ಲಿ ಪ್ರಭಾವ ಶಾಲಿಯಾದ ಒಂದು ಶ್ರೀಮಂತ ಕೈಗಾರಿಕಾ ಯಜಮಾನ ವರ್ಗವಾಗಲಿ ಬೆಳೆಯಲು ಸಾಧ್ಯವಿರಲಿಲ್ಲ. ಆದರೆ ದಕ್ಷಿಣ ಭಾರತ ವಿಶೇಷವಾಗಿ ಮೈಸೂರು, ಆಧುನಿಕ ಇಂಗ್ಲಿಷ್ ವಿದ್ಯಾಭ್ಯಾಸ ಪಡೆಯುವುದರಲ್ಲಿ ಭಾರತದಲ್ಲಿಯೇ ಮುಂದಿತ್ತು. ಅಷ್ಟೊಂದು ಶ್ರೀಮಂತಿಕೆ ಇಲ್ಲದಿದ್ದರೂ ಹತ್ತೊಂಭತ್ತನೇ ಶತಮಾನದಲ್ಲಿ ಪಟ್ಟಣಗಳಿಗೆ ಸ್ಥಳಾಂತರವಾದ ಬ್ರಾಹ್ಮಣ ಕುಟುಂಬಗಳ ಯುವಕರು ಆಗತಾನೇ ಪ್ರಾರಂಭವಾಗಿದ್ದ ಇಂಗ್ಲಿಷ್ ಶಾಲಾಕಾಲೇಜುಗಳನ್ನು ಸೇರಿ ಅವಕಾಶಗಳನ್ನು

ಬಳಸಿಕೊಂಡರು. ಅವರಲ್ಲಿ ಹಲವಾರು ಹಳ್ಳಿಗಳಲ್ಲಿದ್ದ ತಮ್ಮ ಆಸ್ತಿಗಳನ್ನು ಮಾರಿ ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸಿದರು. 1891ರ ವೇಳೆಗೆ ಮೈಸೂರಿನ ಬ್ರಾಹ್ಮಣ ಸಮುದಾಯದಲ್ಲಿ ಶೇಕಡ 63.8 ರಷ್ಟು ಇಂಗ್ಲಿಷ್ ಅಕ್ಷರಸ್ಥರಾದವರಿದ್ದರು. ಆಗ ಬ್ರಿಟಿಷ್ ಪ್ರಾಂತ್ಯಗಳೂ ಸೇರಿದಂತೆ ಮೈಸೂರು ಭಾರತದಲ್ಲೇ ಮೂರನೇ ಸ್ಥಾನದಲ್ಲಿತ್ತು. 1885ರ ನಂತರವಂತೂ ಮೈಸೂರು ಪ್ರಾಂತ್ಯಗಳಲ್ಲಿಲ್ಲದ ಪದವಿಗಳಿಗಾಗಿ ಮೈಸೂರಿನ ವಿದ್ಯಾರ್ಥಿಗಳು ನೆರೆಯ ಮದ್ರಾಸು ಪ್ರಾಂತ್ಯಕ್ಕೆ ಹೆಚ್ಚಾಗಿ ಹೋಗಲು ಆರಂಭಿಸಿದರು. ಈ ಪದವಿ ತರಗತಿಗಳ ವಿದ್ಯಾರ್ಥಿಗಳಲ್ಲಿ ಮೈಸೂರಿನವರೇ ಶೇಕಡ ಇಪ್ಪತ್ತರಷ್ಟು ಇರುತ್ತಿದ್ದರು. ಮೈಸೂರಿನ ಪಟ್ಟಣ ಪ್ರದೇಶದ ಜನ ಸಮುದಾಯದಲ್ಲಿ ಶೇಕಡ ನಲವತ್ತಕ್ಕೂ ಹೆಚ್ಚು ಬ್ರಾಹ್ಮಣರೇ ಇರುತ್ತಿದ್ದರು. ಮಧ್ಯಮವರ್ಗವೊಂದು ತಲೆಯೆತ್ತಿ ನಿಂತಾಗ ಸಹಜವಾಗಿಯೇ ಅದರಲ್ಲಿ ಬ್ರಾಹ್ಮಣ ಕೋಮಿನವರೇ ಹೆಚ್ಚಿದ್ದರು ಹಾಗೂ ಅದು ಸಂಘಟಿತವಾಗಿ ಪ್ರತಿಕ್ರಿಯಿಸತೊಡಗಿದಾಗ ಅವರ ಬೇಡಿಕೆಗಳು ಅವರ ಹಿತಾಸಕ್ತಿಗಳ ಪ್ರತಿಧ್ವನಿಯಂತಿದ್ದು ಸಾಮಾನ್ಯವಾಗಿತ್ತು. ಬ್ರಿಟಿಷ್ ಪ್ರಾಂತ್ಯದ ರಾಷ್ಟ್ರೀಯವಾದಿ ಸಾರ್ವಜನಿಕರು ಭಾರತೀಯರಿಗೆ ಯೂರೋಪಿಯನ್ನರಿಗಿಂತ ಹೆಚ್ಚಿನ ಆದ್ಯತೆ ಕೊಡಬೇಕೆಂದು ಕೇಳುತ್ತಿದ್ದರೆ ಮೈಸೂರು, ಕೊಚ್ಚಿನ್, ಟ್ರಾವಂಕೂರ್ ಮುಂತಾದ ದೇಶೀ ಸಂಸ್ಥಾನಗಳಲ್ಲಿ 'ವಿದೇಶೀ ಮದ್ರಾಸಿಗರಿಗಿಂತ ಸ್ಥಳೀಯರಿಗೆ ಆದ್ಯತೆ ಕೊಡಬೇಕೆಂದು ಬೇಡಿಕೆಗಳು ಕೇಳಿಬಂದವು. ಏಕೆಂದರೆ ಈ ಸಂಸ್ಥಾನಗಳ ಮುಖ್ಯ ಸರ್ಕಾರಿ ನೌಕರಿಗಳಲ್ಲಿ ಮದ್ರಾಸಿಗರೇ ತುಂಬಿರುತ್ತಿದ್ದರು. ಸ್ಥಳೀಯರು ಹೊಸದಾಗಿ ವಿದ್ಯಾರ್ಹತೆ ಹೊಂದಿ ನೌಕರಿಗಳಿಗೆ ಪ್ರಯತ್ನಿಸಿದಾಗ ಹೊರಗಿನ ಮದ್ರಾಸಿಗಳು, ಇವರನ್ನು ಕಡೆಗಣ್ಣಿನಿಂದ ನೋಡಿ 'ತಮ್ಮವರಿಗೆ' ಆದ್ಯತೆ ಕೊಡುತ್ತಿದ್ದರು. ಮೈಸೂರಿನಲ್ಲಿ ಈ ವಿವಾದ 1870 ರಿಂದ 1910 ರವರೆಗೆ ಮುಂದುವರೆಯಿತು.

1870ರಿಂದ 1900 ರವರೆಗೂ ಮೈಸೂರಿನ ಸಾರ್ವಜನಿಕ ಜೀವನದಲ್ಲಿ ಸಕ್ರಿಯವಾಗಿದ್ದವರೆಲ್ಲಾ ಮೈಸೂರಿನಲ್ಲಿ ಯಾವ ತಪ್ಪು ಕಂಡರೂ ಅದಕ್ಕೆಲ್ಲಾ ಮದ್ರಾಸಿಗರೆ ಹೊಣೆಯೆಂದು ಟೀಕಿಸುತ್ತಿದ್ದರು. ಮೊದಲಿಬ್ಬರು ದಿವಾನರಾದ ರಂಗಾಚಾರ್ಲು ಮತ್ತು ಶೇಷಾದ್ರಿ ಅಯ್ಯರ್ (1881–1901 ರವರೆಗೆ) ಮದ್ರಾಸಿಗರೇ ಆಗಿದ್ದು ಮದ್ರಾಸಿ ಮೂಲಕ ಅರ್ಹರಿಗೆ ನೌಕರಿಗಳಲ್ಲಿ ಆದ್ಯತೆ ಕೊಡುತ್ತಿದ್ದರೆಂಬ ದೂರಿತ್ತು. ಹಾಗೆಯೇ ಮೈಸೂರು ಸೇವೆಯಲ್ಲಿದ್ದ ಮದ್ರಾಸಿ ಮೂಲಕ ಹಿರಿಯ ಅಧಿಕಾರಿಗಳನ್ನು ಆಯಕಟ್ಟಿನ ಸ್ಥಾನಗಳಿಗೆ ನೇಮಿಸುತ್ತಿದ್ದರೆಂಬುದು ಮತ್ತೊಂದು ಪ್ರಮುಖ ದೂರಾಗಿತ್ತು. ಇವರೆಲ್ಲಾ ಸೇರಿ ಮೈಸೂರಿನ ಸಂಪನ್ಮೂಲಗಳನ್ನು ಬ್ರಿಟಿಷರೂ ಸೇರಿದಂತೆ ಹೊರಗಿನವರು ಕೊಳ್ಳೆ ಹೊಡೆಯಲು ಅನುವು ಮಾಡಿ ಕೊಡುತ್ತಿದ್ದರೆಂದು ಆಪಾದಿಸಲಾಗುತ್ತಿತ್ತು. ಮೈಸೂರಿಗರು ಕೇವಲ ಈ

ವಿಷಯಗಳ ಬಗ್ಗೆ ಮಾತ್ರ ಮಾತನಾಡುತ್ತಿದ್ದರೆಂದಲ್ಲ. ಯೂರೋಪಿಯನ್ನರು ಭಾರತೀಯರನ್ನು ಕೀಳಾಗಿ ಕಾಣುತ್ತಿದ್ದುದು, ಅನಿವಾಸಿ ಭಾರತೀಯರ ಕಷ್ಟಕಾರ್ಪಣ್ಯಗಳು ಕಾಂಗ್ರೆಸ್ ಸಂಸ್ಥೆ ಮುಂತಾದ ವಿಷಯಗಳ ಬಗ್ಗೆ ಅವರು ಇತರ ರಾಷ್ಟ್ರೀಯವಾದಿಗಳಂತೆಯೇ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದರು. ಆದರೆ ಅವರು ಬದುಕುತ್ತಿದ್ದ ಸಂದರ್ಭ ಮತ್ತು ಎದುರಿಸಬೇಕಿದ್ದ ಸಮಸ್ಯೆಗಳು ವಿಶಿಷ್ಟವಾಗಿದ್ದು, ಹಲವು ಬಾರಿ ಬ್ರಿಟಿಷ್ ಪ್ರಾಂತ್ಯದ ರಾಷ್ಟ್ರೀಯ ವಾದಿಗಳಿಗಿಂತ ತೀರಾ ಭಿನ್ನವಾದ ಕೆಲವೊಮ್ಮೆ ವಿರುದ್ಧವಾದ ನಿಲುವುಗಳನ್ನೂ ತಳೆಯುತ್ತಿದ್ದರು. ಉದಾಹರಣೆಗೆ ಬ್ರಿಟಿಷ್ ಪ್ರಾಂತ್ಯದವರು ಐ.ಸಿ.ಎಸ್. ಪರೀಕ್ಷೆಗಳನ್ನು ತಮ್ಮ ಪ್ರಾಂತ್ಯಗಳ ಅಭ್ಯರ್ಥಿಗಳಿಗೆ ಮಾತ್ರ ಸೀಮಿತಗೊಳಿಸಬೇಕು. ದೇಶೀ ಸಂಸ್ಥಾನದವರಿಗೆ ಕೂಡದು ಎನ್ನುತ್ತಿದ್ದರೆ ಮೈಸೂರಿನವರು ಮೈಸೂರಿನಲ್ಲಿ ಹೊರಗಿನವರಿಗೆ ಅವಕಾಶ ಕೊಡಕೂಡದೆನ್ನುತ್ತಿದ್ದರು. ಹಾಗೆಯೇ ಇಂಪೀರಿಯಲ್ ಲೆಜಿಸ್ಲೆಟಿವ್ ಕೌನ್ಸಿಲ್‌ನ ಸದಸ್ಯತ್ವದ ಬಗ್ಗೆಯೂ ವಿವಾದವಿತ್ತು. ಮೈಸೂರಿನವರು ಬಹುತೇಕ ಸರ್ಕಾರಿ ನೌಕರಿ ಅದನ್ನು ಸೇರಲು ಸಹಾಯಕವಾಗುವ ಶಿಕ್ಷಣ ಈ ಬಗ್ಗೆಯೇ ಹೆಚ್ಚು ಕಾತುರರಾಗಿದ್ದರು. ಕೃಷಿ ಮತ್ತು ಚುನಾಯಿತ ಸ್ಥಾನಗಳ ಬಗ್ಗೆ ಅವರಿಗೆ ಅಷ್ಟಾಗಿ ಆಸಕ್ತಿಯಿರಲಿಲ್ಲ. ಆದರೆ 19ನೇ ಶತಮಾನದ ವೇಳೆಗೆ ಮದ್ರಾಸಿಗರ ಪ್ರಾಬಲ್ಯದ ವಿರುದ್ಧ ಹೋರಾಡಲು ಕೃಷಿಕರ ಸಹಾಯಕ ಅವಶ್ಯಕತೆ ಮನಗಂಡು ಕ್ರಮೇಣ ಕೃಷಿ ಸಂಬಂಧಿ ವಿಷಯಗಳ ಬಗ್ಗೆ ಮಾತನಾಡತೊಡಗಿದರು. ಕೃಷಿಕರೆಲ್ಲಾ ಸಾಮಾನ್ಯವಾಗಿ ಶೂದ್ರ ವರ್ಗದವರು ಅದರಲ್ಲೂ ಒಕ್ಕಲಿಗ, ಲಿಂಗಾಯಿತರಾಗಿದ್ದರು. ಒಂದು ಹಂತದಲ್ಲಿ ಇವರು ಮದ್ರಾಸಿಗರ ವಿರುದ್ಧ ಸೆಣಸುತ್ತಿದ್ದ ಮೈಸೂರು ಬ್ರಾಹ್ಮಣರೊಡನೆ ಕೈಜೋಡಿಸಿದರು. ಆದರೆ ಇದು ಅಲ್ಪಕಾಲ ಮಾತ್ರ. ಬಹುಬೇಗನೇ ಇವರಿಗೆ ಮೈಸೂರು ಬ್ರಾಹ್ಮಣ ವರ್ಗದವರೇ ತಮ್ಮ ಆಧುನಿಕ ಪ್ರಗತಿಗೆ ಅಡ್ಡಿಯಾಗಿರುವ ಅರಿವಾಗಿ ತಮ್ಮ ಹಿತ ಕಾಯ್ದುಕೊಳ್ಳಲು ಬೇರೆ ರೀತಿಯ ಚಟುವಟಿಕೆಗಳಲ್ಲಿ ತೊಡಗಿದರು.

ಮೈಸೂರು ಅರಸೊತ್ತಿಗೆ ಈ ಬೆಳವಣಿಗೆಗೆ ತನ್ನದೇ ಆದ ಕೊಡುಗೆ ನೀಡಿತು. ಕ್ರಮೇಣ ಈ ಬೆಳಗಣಿಗೆಗಳು ಹೊಸ ವಿವಾದವೊಂದನ್ನು ಸೃಷ್ಟಿ ಮಾಡಿದರು. ಈ ವಿವಾದಕ್ಕೆ ಉದಾರವಾದಿ ಜನತಾಂತ್ರಿಕ ಆಯಾಮವೊಂದಿತ್ತು. ಏಕೆಂದರೆ ಶೂದ್ರ ಸಮುದಾಯದವರಿದ್ದ ಈ ಗುಂಪು ಅಧಿಕಾರ ಸ್ಥಾನಗಳು, ಶಿಕ್ಷಣ ಎಲ್ಲರಿಗೂ ದೊರೆಯಬೇಕೆಂಬ ಜನತಾಂತ್ರಿಕ ಬೇಡಿಕೆಯನ್ನಿಟ್ಟಿತು. ಒಂದು ಚಳುವಳಿಯಾಗಿ ಮಾರ್ಪಟ್ಟಿತು. ಈ ಚಳುವಳಿಯನ್ನು ಬ್ರಾಹ್ಮಣೇತರ ಚಳುಳಿ, ಹಿಂದುಳಿದ ವರ್ಗಗಳ ಚಳುವಳಿ, ಬ್ರಾಹ್ಮಣ ವಿರೋಧಿ ಚಳುವಳಿ ಹೀಗೆ ಹಲವಾರು ಹೆಸರುಗಳಿಂದ ಚರ್ಚಿಸಲಾಗುತ್ತಿದೆ.

ಮೈಸೂರಿನ ಈ ಚಳುಳಿ 1915–1930ರ ಅವಧಿಯಲ್ಲಿ ಸಂಸ್ಥಾನದ ಆಡಳಿತ ಮತ್ತು ರಾಜಕೀಯದ ಮೇಲೆ ತೀವ್ರತರ ಪ್ರಭಾವ ಬೀರಿತು. ಈ ಚಳವಳಿಯ ಒಂದು ಸಾಧನೆಯೆಂದರೆ ಶಿಕ್ಷಣ ಮತ್ತು ಸರ್ಕಾರಿ ಸೇವೆಯ ಮೇಲೆ ಬ್ರಾಹ್ಮಣ ಕೋಮು ಹೊಂದಿದ್ದ ಏಕಸ್ವಾಮ್ಯವನ್ನು ಕೊನೆಗಾಣಿಸಿದ್ದು. ಎಲ್ಲಿಯವರೆಗೆ ಈ ಚಳುವಳಿ ತಮ್ಮ ಅಧಿಕಾರವನ್ನು ಗಂಭೀರವಾಗಿ ಪ್ರಶ್ನಿಸಲಿಲ್ಲವೋ ಅಲ್ಲಿಯವರೆಗೆ ಮೈಸೂರು ಸರ್ಕಾರ ಅದರ ಬೇಡಿಕೆಗಳ ಬಗೆ ಸಹಾನುಭೂತಿ ತೋರಿ ಹಲವು ಬೇಡಿಕೆಗಳನ್ನು ಈಡೇರಿಸಿತು. ಕಾಂಗ್ರೆಸ್ಸಿನ ನಾಗಪುರ ಅಧಿವೇಶನದ ತರುವಾಯ ಮೈಸೂರಿನಲ್ಲಿ ಕಾಂಗ್ರೆಸ್ ಸಮಿತಿಯೊಂದು ಅಸ್ತಿತ್ವಕ್ಕೆ ಬಂತು. ಆದರೆ ಈ ಸಮಿತಿ ಬಹುಸಂಖ್ಯಾತ ಬ್ರಾಹ್ಮಣೇತರ ಬೇಡಿಕೆಗಳ ಬಗ್ಗೆ ಉದಾಸೀನವಾಗಿತ್ತು. ಆಗಾಗ ಅವರಲ್ಲಿ ಯಾರಾದರೂ ಮಾತನಾಡಿದರೆ ಅದು ಶೂದ್ರರ ಬೇಡಿಕೆಗಳ ವಿರುದ್ಧವಾಗಿಯೇ ಇತ್ತು. ಆದ್ದರಿಂದ ಬ್ರಾಹ್ಮಣೇತರರು ಮೈಸೂರಿನ ಕಾಂಗ್ರೆಸ್ ಸಂಸ್ಥೆಯ ಬಗ್ಗೆ ತಿರಸ್ಕಾರ ಮನೋಭಾವ ತಾಳಿದರು. ಕೆಲವು ನಿವೃತ್ತ ಬ್ರಾಹ್ಮಣ ಅಧಿಕಾರಿಗಳು ಮತ್ತು ಹತ್ತಾರು ಜನ ಬ್ರಾಹ್ಮಣ ಯುವಕರು ಮಾತ್ರ ಅಲ್ಲಿದ್ದರು. ರಾಷ್ಟ್ರೀಯ ಕಾಂಗ್ರೆಸ್, ಸಂಸ್ಥಾನಿ ಕಾಂಗ್ರೆಸ್ ತನ್ನ ಸರ್ಕಾರದ ವಿರುದ್ಧ ಯಾವುದೇ ಚಳುವಳಿ ಮಾಡಕೂಡದೆಂದು ತೀರ್ಮಾನಿಸಿದ್ದು ಮೈಸೂರು ಕಾಂಗ್ರೆಸ್ಸಿಗರಿಗೆ ವರದಾನವೇ ಆಯಿತು. ಯಾಕೆಂದರೆ ಅಲ್ಲಿ ಸದಸ್ಯರಾಗಲಿ, ಸಂಪನ್ಮೂಲವಾಗಲಿ ಲಭ್ಯವಾಗುವುದು ದುಸ್ತರವಾಗಿತ್ತು.

ತಿಲಕ್‌ಯುಗ ಮುಗಿದು ಗಾಂಧೀಯುಗ ಆರಂಬವಾದ ನಂತರವೂ ಮೈಸೂರಿನಲ್ಲಿ ಕಾಂಗ್ರೆಸ್ ಜನಪ್ರಿಯವಾಗಲಿಲ್ಲ. ಹಾಗೆಂದು ಮೈಸೂರಿಗರು ಕಾಂಗ್ರೆಸ್ ವಿರೋಧಿಗಳಾಗಿದ್ದರೆಂದಲ್ಲ. ಮೈಸೂರಿನ ಕಾಂಗ್ರೆಸ್ ಮುಂದಾಳುಗಳು ಮತ್ತು ಹೋಂರೂಲ್ ಚಳುವಳಿಗಳ ಬಗ್ಗೆ ಸಕ್ರಿಯ ರಾಜಕಾರಣಿಗಳೆಲ್ಲಾ ಉತ್ಸುಕರಾಗಿದ್ದರು. ಆ ಬಗ್ಗೆ ವಿಸ್ತಾರವಾಗಿ ತಮ್ಮ ಪತ್ರಿಕೆಗಳಲ್ಲಿ ಚರ್ಚಿಸಿ, ಪ್ರಚಾರ ಮಾಡುತ್ತಿದ್ದರು. ಗಾಂಧೀಜಿಯ ರಚನಾತ್ಮಕ ಕಾರ್ಯಕ್ರಮವನ್ನು ತಮ್ಮದಾಗಿಸಿಕೊಂಡಿದ್ದರು. ಅದೆಂದರೆ ಬ್ರಾಹ್ಮಣೇತರರಿಗೆ ಕಾಂಗ್ರೆಸ್ ಬೇಕು, ಗಾಂಧೀಜಿಯ ಕಾರ್ಯಕ್ರಮಗಳೂ ಬೇಕು. ಅಂದರೆ ಮೈಸೂರಿನಲ್ಲಿ ಕಾಂಗ್ರೆಸ್ ಮುಂದಾಳುಗಳಾಗಿದ್ದವರು ಮತ್ತು ಅವರ ನಾಯಕತ್ವ ಮಾತ್ರ ಬೇಡವಾಗಿತ್ತು. ಸ್ಥಳೀಯವಾಗಿ ಅಂದಿನ ಸಂದರ್ಭದಲ್ಲಿ ಈ ನಿಲುವು ಅನಿವಾರ್ಯವಾಗಿದ್ದಂತೆ ತೋರುತ್ತದೆ.

ಮೈಸೂರಿನ ರಾಜಕಾರಣಿಗಳು ಆರಂಭಿಕ ಹಂತದಲ್ಲಿ ಗಾಂಧೀ ಪ್ರಣೀತ ರಾಷ್ಟ್ರೀಯ ಆಂದೋಲನದಲ್ಲಿ ನೇರವಾಗಿ ಭಾಗವಹಿಸಿದ್ದು ಕಡಿಮೆ. ಇದ್ದ ಕೆಲವೇ ಕಾಂಗ್ರೆಸ್ಸಿಗರಿಗೆ ಇದು

ಸಾಧ್ಯವಿರಲಿಲ್ಲ. ಬಹುಸಂಖ್ಯಾತ ಶೂದ್ರಾದಿಗಳು, ಬ್ರಾಹ್ಮಣ ಕಾಂಗ್ರೆಸ್ಸಿನ ನಾಯಕತ್ವ ಒಪ್ಪಿಕೊಳ್ಳಲು ತಯಾರಿರಲಿಲ್ಲ. ಪರಿಸ್ಥಿತಿ 1930 ರವರೆಗೆ ಹೀಗೆ ಮುಂದುವರಿಯಿತು. ಈ ಸಂದರ್ಭದ ಪ್ರಯೋಜನ ಪಡೆದದ್ದು ಮೈಸೂರು ಸರ್ಕಾರ ಗಾಂಧೀಜಿಯ ರಚನಾತ್ಮಕ ಕಾರ್ಯಕ್ರಮವನ್ನು ಇಡಿಯಾಗಿ ತನ್ನದಾಗಿಸಿಕೊಂಡ ಮೈಸೂರು ಸರ್ಕಾರ ಕಾಂಗ್ರೆಸ್ಸಿಗರ ಅಸೂಯೆಗೆ ಪಾತ್ರವಾಯಿತು. ರಾಜಕೀಯ ಭಿನ್ನಮತವನ್ನು ನಿರ್ದಯವಾಗಿ ಹತ್ತಿಕ್ಕಿದ ಸರ್ಕಾರ, ಆರ್ಥಿಕವಾಗಿ ರಾಜ್ಯಕ್ಕೆ ಉಪಯೋಗವಾಗುತ್ತಿದ್ದ ಕಾಂಗ್ರೆಸ್ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸ ಲಾರಂಭಿಸಿತು. ರಾಷ್ಟ್ರೀಯ ಕಾಂಗ್ರೆಸ್ ನಾಯಕತ್ವ ಮೈಸೂರು ಸರ್ಕಾರಕ್ಕೆ ಶಹಬಾಸ್‌ಗಿರಿ ಕೊಟ್ಟಿತು. 1918ರಲ್ಲಿ ಬ್ರಾಹ್ಮಣೇತರರು 'ಪ್ರಜಾಮಿತ್ರ ಮಂಡಳಿ'ಯೆಂಬ ಪಕ್ಷವನ್ನು ಸ್ಥಾಪಿಸಿದ್ದರು. ಈ ಪಕ್ಷ ಕೆಲವು ಬೇಡಿಕೆಗಳನ್ನು ಈಡೇರಿಸಿಕೊಂಡಿತಾದರೂ ಸರ್ಕಾರ ನಿಜವಾಗಿಯೂ ಜನ ಪ್ರತಿನಿಧಿಗಳೊಂದಿಗೆ ಅಧಿಕಾರ ಹಂಚಿಕೊಳ್ಳಲು ತಯಾರಿಲ್ಲವೆಂದು ಮನಗಂಡಿತು. ಇಡೀ ಭಾರತವೇ ಸ್ವಾತಂತ್ರ್ಯಕ್ಕಾಗಿ ಜನತಂತ್ರಕ್ಕಾಗಿ ಹೋರಾಡುತ್ತಿತ್ತು. ಬ್ರಿಟಿಷ್ ಪ್ರಾಂತ್ಯದವರಿಗೆ ದಕ್ಕಿದಷ್ಟು ಹಕ್ಕುಗಳೂ, ಅಧಿಕಾರವೂ ದೇಶೀ ಸಂಸ್ಥಾನದವರಿಗೆ ದಕ್ಕಿರಲಿಲ್ಲ. ರಾಜ್ಯಾಧಿಕಾರದಲ್ಲಿ ಅಧಿಕಾರ ದೊರೆಯದೆ ತಮ್ಮ ಯಾವ ಸಮಸ್ಯೆಗಳಿಗೂ ಪರಿಹಾರ ಸಾಧ್ಯವಿರಲಿಲ್ಲ. ಈ ಅಧಿಕಾರ ಪ್ರಾಪ್ತವಾಗಬೇಕಾದರೆ ಸರ್ವಾಧಿಕಾರಿಯಾಗಿದ್ದ ರಾಜ್ಯಪ್ರಭುತ್ವವನ್ನು ಮಣಿಸಬೇಕು. ಜನಾಂದೋಲನ ನಡೆಯಬೇಕಾದರೆ ಜನಬೆಂಬಲ ಅನಿವಾರ್ಯ. ಜನ ಬೆಂಬಲ ಧಕ್ಕಬೇಕಾದರೆ ಜರನ್ನು ಸಂಘಟಿಸಬೇಕು. ಆರೂ ಸುಮ್ಮನೆ ತಮ್ಮ ನಾಯಕತ್ವ ಒಪ್ಪಿ ಸಂಘಟಿತವಾಗಲು ಒಪ್ಪುವುದು ಸಾಧ್ಯವಿರಲಿಲ್ಲ.

ಆ ಸಮುದಾಯದ ಆಶೋತ್ತರಗಳನ್ನು ಪ್ರತಿಬಿಂಬಿಸುವ ಪ್ರಣಾಳಿಕೆ ತಮ್ಮ ಪಕ್ಷದ್ದಾಗಿದ್ದರೆ ಜನ ತಮ್ಮ ಹಿಂದೆ ಬರುತ್ತಾರೆಂದು ಈ ನಾಯಕತ್ವ ಅರಿತು ಆ ದಿಸೆಯಲ್ಲಿ ಕಾರ್ಯಕ್ರಮ ರೂಪಿಸತೊಡಗಿತು.

ಇದೇ ಸಂದರ್ಭದಲ್ಲಿ ಎಡಪಂಥೀಯ ಒಲವಿದ್ದ ಜವಹರಲಾಲ್ ನೆಹರೂ ಕಾಂಗ್ರೆಸ್ ಅಧ್ಯಕ್ಷರಾದರು. ದೇಶೀ ಸಂಸ್ಥಾನಗಳು ನಿರಂಕುಶ ಪ್ರಭುತ್ವದ ಆಳ್ವಿಕೆಯಲ್ಲಿರಲು ಸಾಧ್ಯವಿಲ್ಲ. ಅವೂ ಭಾರತದ ಇತರ ಪ್ರಾಂತ್ಯಗಳಂತೆ ಜನತಾಂತ್ರಿಕ ಮಾರ್ಗದಲ್ಲಿ ಮುನ್ನಡೆಯಬೇಕು, ಅನ್ಯಮಾರ್ಗವಿಲ್ಲ. ಸಂಸ್ಥಾನಗಳ ಭವಿಷ್ಯವನ್ನು ನಿರ್ಧರಿಸಬೇಕಾದವರು ಅಲ್ಲಿಯ ಜನಸಮುದಯವೇ ಹೊರತು ಬೇರಾರೂ ಅಲ್ಲವೆಂದು ಲಾಹೋರ್ ಅಧಿವೇಶನದ ತಮ್ಮ ಅಧ್ಯಕ್ಷ ಭಾಷಣದಲ್ಲಿ ನೆಹರೂ

ಘೋಷಿಸಿದರು. ಮೈಸೂರಿನ ರಾಜಕಾರಣಿಗಳಿಗೆ ವಿಶೇಷವಾಗಿ ಬಹುಸಂಖ್ಯಾತ ಸಮುದಾಯದ ಕ್ರಿಯಾಶೀಲರಿಗೆ ಇದರಿಂದ ಆನೆಬಲ ಬಂದಂತಾಯಿತು. ಮಹಾತ್ಮಗಾಂಧಿ ಅಧ್ಯಕ್ಷತೆ ವಹಿಸಿದ್ದ 1924ರಲ್ಲಿ ಕರ್ನಾಟಕದಲ್ಲೇ ನಡೆದ ಬೆಳಗಾಂ ಕಾಂಗ್ರೆಸ್ ಅಧಿವೇಶನ, ಉತ್ತರ ಕನ್ನಡ ಜಿಲ್ಲೆಯಲ್ಲಿ ನಡೆದ ಕರ ನಿರಾಕರಣಾ ಚಳವಳಿ, ಉಪ್ಪಿನ ಸತ್ಯಾಗ್ರಹ ಮುಂತಾದವು ಮೈಸೂರಿಗರಿಗೆ ಸ್ಫೂರ್ತಿ ನೀಡಿದವು. ನಿಧಾನವಾಗಿಯಾದರೂ ಗ್ರಾಮಾಂತರ ಪ್ರದೇಶಗಳು ಎಚ್ಚೆತ್ತವು. ಪಟ್ಟಣಗಳಲ್ಲಿ ಓದು ಮುಗಿಸಿಕೊಂಡು ಆಗಾಗ ಹಳ್ಳಿಗಳಿಗೆ ಹಿಂದಿರುಗುತ್ತಿದ್ದ ಯುವಕರು ರಾಷ್ಟ್ರ, ಅದರ ಸಮಸ್ಯೆಗಳು, ರಾಷ್ಟ್ರೀಯತೆ, ಗಾಂಧೀಜಿ, ಕಾಂಗ್ರೆಸ್, ಬ್ರಿಟಿಷರ ದಬ್ಬಾಳಿಕೆ ಹೀಗೆ ಹಲವಾರು ವಿಷಯಗಳ ಬಗ್ಗೆ ಜನರನ್ನು ಎಚ್ಚರಿಸುತ್ತಾ ಹುರಿದುಂಬಿಸುತ್ತಾ ಅವರಲ್ಲಿ ರಾಷ್ಟ್ರೀಯ ಪ್ರಜ್ಞೆ ಮೊಳೆಯುವಂತೆ ಮಾಡಿದರು.

ಜಗತ್ತನ್ನೇ ಅಲುಗಾಡಿಸಿದ 1929–1931ರ ಅವಧಿಯ ಆರ್ಥಿಕ ಮುಗ್ಗಟ್ಟು ರೈತರನ್ನೂ ಕಾರ್ಮಿಕರನ್ನೂ ಕಾಡಿತು. ತಮ್ಮನ್ನು ರಕ್ಷಿಸಬೇಕಾದ ಸರ್ಕಾರ ಬೇಜವಾಬ್ದಾರಿಯಿಂದ ವರ್ತಿಸಿದ್ದು ಅವರನ್ನು ರೊಚ್ಚಿಗೆಬ್ಬಿಸಿತು. ಅಂಥಾ ಸರ್ಕಾರದ ಜಾಗದಲ್ಲಿ ತಮ್ಮದೇ ಜನಪ್ರತಿನಿಧಿಗಳ ಸರ್ಕಾರಗಳಿದ್ದರೆ ತಮ್ಮ ಮೊರೆ ಕೇಳಿಸುತ್ತಿತ್ತೆಂದು ಅವರು ಭಾವಿಸಿದ್ದು ಸಹಜವಾಗಿತ್ತು. ಅಲ್ಲಲ್ಲಿ ನಡೆದ ಮುಷ್ಕರ, ಪ್ರತಿಭಟನೆಗಳನ್ನು ಸರ್ಕಾರ ಕಡೆಗಣಿಸಿತು ಅಥವಾ ಹಿಂಸಾತ್ಮಕವಾಗಿ ಹತ್ತಿಕ್ಕಿತು. ಮೈಸೂರಿಗಿದ್ದ 'ಮಾದರಿ ರಾಜ್ಯ'ವೆಂಬ ಬಿರುದು ಟೊಳ್ಳು ಎಂದು ಜನರಿಗೆ ಅನ್ನಿಸತೊಡಗಿತು. ರಾಜಶಾಹಿಯ ವಿರುದ್ಧ ಜನಾಭಿಪ್ರಾಯ ರೂಪಿತವಾದಂತೆ ದಮನವೂ ಹೆಚ್ಚಾಯಿತು. ದಿವಾನ್ ಮಿರ್ಜಾ ಇಸ್ಮಾಯಿಲ್ಲರು 1932 ತರುವಾಯ ರಾಜ್ಯಾಧಿಕಾರವನ್ನು ಪ್ರಶ್ನಿಸುವಂಥ ಎಲ್ಲ ರಾಜಕೀಯ ಚಟುವಟಿಕೆಗಳನ್ನೂ ದ್ವೇಷಿಸಿ, ಹತ್ತಿಕ್ಕಿದರು. ಸರ್ಕಾರದ ಈ ಜನತಂತ್ರ ವಿರೋಧಿ ನೀತಿಯೇ ಪರಸ್ಪರ ಸಂದೇಹಿಸುತ್ತಿದ್ದವರನ್ನು ಒಟ್ಟುಗೂಡಿಸಲು ಸಹಾಯಕವಾಯಿತು. ಮೈಸೂರು ಸರ್ಕಾರ ರಾಜಕೀಯ ಭಿನ್ನಮತವನ್ನು ಹತ್ತಿಕ್ಕಿದ ರೀತಿ ಅದರ ಅಭಿಮಾನಿಗಳನ್ನೂ ಬೆಚ್ಚಿಸಿತು. ವಿ.ವಿ.ಗಿರಿಯಂಥ ಸೌಮ್ಯವಾದಿ ಕಾರ್ಮಿಕ ನಾಯಕನನ್ನು ಮೈಸೂರು ರಾಜ್ಯ ಪ್ರವೇಶಿಸದಂತೆ ಪ್ರತಿಬಂಧಕಾಜ್ಞೆ ಹೊರಡಿಸಲಾಯಿತು. ನಾರಿಮನ್, ಕಮಲಾದೇವಿ ಮುಂತಾದವರಿಗೂ ಇದೇ ಶಾಸ್ತಿಯಾಯಿತು.

ಈ ಮಧ್ಯೆ ಭಾರತ ಸರ್ಕಾರ 1935ರ ಕಾಯ್ದೆಯನ್ನು ಪ್ರಕಟಿಸಿತು. ಪ್ರಾಂತೀಯ ಮಟ್ಟದಲ್ಲಿ ಜವಾಬ್ದಾರಿ ಸರ್ಕಾರಗಳಿಗೆ ಅಧಿಕಾರ ವರ್ಗಾವಣೆಯಾಗಲಿತ್ತು. ಉದ್ದೇಶಿತ ಒಕ್ಕೂಟದ ಸದಸ್ಯತ್ವದಲ್ಲಿ 1/3 ಭಾಗ ದೇಶೀ ಸಂಸ್ಥಾನಗಳಿಂದ ಇರಬೇಕು. ಈ ಸದಸ್ಯರನ್ನು ಅಲ್ಲಿಯ ಸರ್ಕಾರಗಳೇ ನಾಮಕರಣ ಮಾಡುತ್ತವೆ. ಆದ್ದರಿಂದ ಆಯ್ಕೆಯಾಗಬೇಕಾಗಿಲ್ಲ. ಸಂಸ್ಥಾನಗಳಲ್ಲಿನ ಸರ್ಕಾರದ ಸ್ವರೂಪದ ಬಗ್ಗೆ ಅಲ್ಲಿ ಯಾವುದೇ ಪ್ರಸ್ತಾಪವಿರಲಿಲ್ಲ. ಈ ಸಂಗತಿಗಳು ಸಂಸ್ಥಾನಿಗರೆಲ್ಲರಿಗೂ ಗಾಬರಿಯುಂಟು ಮಾಡಿದವು. ರಾಷ್ಟ್ರೀಯ ಚಳುವಳಿಯ ಮುಂದಾಳುಗಳೂ ಸಂಸ್ಥಾನೀ ಭಾರತದ ಭವಿಷ್ಯ ಮತ್ತು ಅದು ಇಡೀ ವಸಾಹತು ವಿರೋಧಿ ಚಳುವಳಿಯ ಮೇಲೆ ಮಾಡಬಲ್ಲ ದುಷ್ಪರಿಣಾಮದ ಬಗ್ಗೆ ಚಿಂತಿತರಾದರು. ಭಾರತ ಒಕ್ಕೂಟದ ಸಂಸತ್ತಿನಲ್ಲಿ ದೇಶೀ ಸಂಸ್ಥಾನಗಳಿಂದ ಬರುವ ನಾಮಕರಣಗೊಂಡ ಸದಸ್ಯರುಗಳು ಬ್ರಿಟಿಷರ ಪರವೇ ಇರುವುದು ಖಚಿತವಾಗಿದ್ದುದರಿಂದ ಸಂಸತ್ತು ಬ್ರಿಟಿಷರ ಅಡಿಯಾಳಾಗಿರುವುದು ಗ್ಯಾರಂಟಿ. ಅದನ್ನು ತಪ್ಪಿಸ ಬೇಕಾದರೆ ಸಂಸ್ಥಾನಗಳ ಸದಸ್ಯರೂ ಜನರಿಂದ ಆಯ್ಕೆಯಾದವರಾಗಬೇಕು. ಅಂದಿನ ಪರಿಸ್ಥಿತಿಯಲ್ಲಿ ಅದು ಅಸಾಧ್ಯವಾಗಿತ್ತು. ಸಂಸ್ಥಾನಿಗರೇ ಆ ಬಗ್ಗೆ ಆಸಕ್ತಿವಹಿಸಿ, ತೀವ್ರ ಹೋರಾಟ ನಡೆಸಿದರೆ ಮಾತ್ರ ಬದಲಾವಣೆ ಯಾಗಬಹುದೆಂದು ಅವರು ತರ್ಕಿಸಿದರು. ಆ ಹಿನ್ನಲೆಯಲ್ಲೇ ದೇಶೀ ಸಂಸ್ಥಾನಗಳ ರಾಷ್ಟ್ರೀಯವಾದಿಗಳು ಜನ ಸಂಘಟನೆ ಮಾಡುವುದು ಅವಶ್ಯವೂ, ಅನಿವಾರ್ಯವೂ ಆಗಿತ್ತು. ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥಾನಳಿಂದ 'ದೂರವಿರುವ' ತನ್ನ ಎಂದಿನ ನೀತಿಯನ್ನು ಬದಲಾಯಿಸುವುದು ಅನಿವಾರ್ಯವಾಯಿತು.

1937ರಲ್ಲಿ ಬ್ರಿಟಿಷ್ ಪ್ರಾಂತಗಳ ಪ್ರತಿನಿಧಿ ಸಭೆಗಳಿಗೆ ಚುನಾವಣೆ ನಡೆದು ಜನಪ್ರತಿನಿಧಿಗಳ ಸರ್ಕಾರ ಅಸ್ಥಿತ್ವಕ್ಕೆ ಬಂದು ಭಾರತೀಯರೇ ಅಧಿಕಾರ ವಹಿಸಿಕೊಂಡರು. ಕಾಂಗ್ರಸ್ಸಿನ ಬೆರಳೆಣಿಕೆಯಷ್ಟು ಮಂದಿಗೂ ಬಹುಸಂಖ್ಯಾತ ಬ್ರಾಹ್ಮಣೇತರ ಪಕ್ಷದವರಿಗೂ ಇದು ಒಂದು ದೊಡ್ಡ ಪಾಠವನ್ನೂ ಕಲಿಸಿತು. ಬ್ರಿಟಿಷ್ ಭಾರತದಲ್ಲಿ ಅದು ಸಾಧ್ಯವಾದದ್ದು ಅಲ್ಲಿಯ ನಾಯಕರು ಕಾಂಗ್ರೆಸ್ ನೇತೃತ್ವದಲ್ಲಿ ಜನರನ್ನು ಸಂಘಟಿಸಿ ಹೋರಾಟ ನಡೆಸಿದ್ದರಿಂದ. ಜನ ಸಂಘಟನೆ, ಹೋರಾಟಗಳಿಂದ ಮಾತ್ರವೇ ಸರ್ವಾಧಿಕಾರವನ್ನು ಮಣಿಸಿ ಜವಾಬ್ದಾರಿ ಸರ್ಕಾರ ಸ್ಥಾಪಿಸಲು ಸಾಧ್ಯವೆಂದು ಅವರಿಗೆ ಮತ್ತೊಮ್ಮೆ ಮನದಟ್ಟಾಯಿತು.

ಮೈಸೂರು ಒಂದು ದೇಶೀ ಸಂಸ್ಥಾನವಾಗಿದ್ದರೂ ಬ್ರಿಟಿಷ್ ಪ್ರಾಂತ್ಯಗಳಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಅಳವಡಿಸಿಕೊಂಡ ಹೋರಾಟದ ಮಾದರಿಗಳು ಅಲ್ಲಿಯೂ ಯಶಸ್ವಿಯಾಗಿ ಸಲ್ಲಬಲ್ಲವಾಗಿದ್ದವೆಂಬುದಕ್ಕೆ ಇದು ಒಂದು ನಿದರ್ಶನವಾಗಿದೆ. ಅಧಿಕಾರ ತಾತ್ವಿಕವಾಗಿ ಮಹಾರಾಜರಲ್ಲೇ ಕೇಂದ್ರೀಕೃತವಾಗಿದ್ದರೂ ಅದು ಕಾರ್ಯರೂಪದಲ್ಲೂ ಅಷ್ಟಾಗಿ ಆಚರಣೆಯಲ್ಲಿ ಇರದಿದ್ದರಿಂದ ಈ ಯಶಸ್ಸು ಸಾಧ್ಯವಾಯಿತು. 1923ರ ನಂತರವಂತೂ ಸಂಸ್ಥಾನಿ ಸರ್ಕಾರ ತಾತ್ವಿಕವಾಗಿ ಜವಾಬ್ದಾರಿ ಸರ್ಕಾರವಾಗಿ ಇರಬೇಕಾಗಿರಲಿಲ್ಲವಾದರೂ ಅದು ಪೂರ್ಣವಾಗಿ ಬೇಜವಾಬ್ದಾರಿಯಾಗಿರಲಿಲ್ಲವೆನ್ನುವುದು ಸತ್ಯ. ಸಾಮಾನ್ಯ ಜನರ ಸಮಸ್ಯೆಗೆ ಅದು ಸ್ಪಂದಿಸುತ್ತಿತ್ತು. ಅಧಿಕಾರ ಹಂಚಿಕೊಳ್ಳುವುದಕ್ಕೆ ಮತ್ತು ಕಾಂಗ್ರೆಸ್ ಚಳುವಳಿಗೆ ವಿರುದ್ದವಾಗಿದ್ದರೂ ಮೈಸೂರು ಸರ್ಕಾರ ಪೂರ್ಣ ಜನವಿರೋಧಿ ನಿರಂಕುಶ ಸರ್ಕಾರವಾಗಿರಲಿಲ್ಲ. ಹಾಗೆ ನೋಡಿದರೆ ಒಡೆಯರ್ ಮನೆತನದ ಜನಪ್ರಿಯತೆ ಮತ್ತು ಜನರ 'ಸಮಸ್ಯೆಗೆ ಸರ್ಕಾರದ ಸ್ಪಂದನ, ರಾಷ್ಟ್ರೀಯವಾದಿಗಳಿಗೆ ನುಂಗಲಾಗದ ತುತ್ತಾಗಿತ್ತು. ಆದರೆ ರಾಜ್ಯದ ಸ್ಪಂದನವಾಗಲಿ, ಕಾಂಗ್ರೆಸ್ಸಿನ ಸಮಸ್ಯೆಗಳಾಗಲಿ ಸಾರ್ವಕಾಲಿಕವಾದದಲ್ಲ. ರಾಜ್ಯದ ಆಡಳಿತ ಸ್ಪಂದಿಸುವುದಕ್ಕೆ ಒಂದು ಮಿತಿಯಿತ್ತು. ತನ್ನ ಅಸ್ತಿತ್ವವನ್ನೇ ಕಳೆದುಕೊಂಡು ಶರಣಾಗತವಾಗದಿರಲು ಅದು ಕೊನೆಯವರೆಗೂ ಹೆಣಗಾಡಿತು. ಆದ್ದರಿಂದಲೇ ತೀವ್ರ ದಮನಕಾರಿ ನೀತಿ ಅನುಸರಿಸಿತು. ಒಮ್ಮೆ ಜನತೆಗೆ ಸರ್ಕಾರದ ಈ ಮುಖದ ದರ್ಶನವಾದ ಕೂಡಲೇ ಅವರ ಪ್ರತಿಕ್ರಿಯೆ ಬದಲಾಯಿತು ಮತ್ತು ಸರ್ಕಾರಿ ವಿರೋಧಿ ಭಾವನೆ ಸಾರ್ವತ್ರಿಕವಾಯಿತು. ಹೀಗಾಗಿ ಮೈಸೂರು ಒಡೆಯರ ಆಳ್ವಿಕೆ ಕೊನೆಗೊಂಡಿತು.

# ಅಡಿಟಿಪ್ಪಣಿಗಳು

1) Agarwal, 1996; Elson, 1998). Page No.79
2) ವಿವರಗಳಿಗೆ ನೋಡಿ, ಡಾ.ಡೊಮಿನಿಕ್, ಕರ್ನಾಟಕದ ಜಾತಿಗಳ ಸಾಂಸ್ಕೃತಿಕ ಪ್ರತಿನಿಧೀಕರಣ ಮತ್ತು ವಸಾಹತುಶಾಹಿ ಅನುಭವ, 2005, ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಪಿ.ಎಚ್‌ಡಿ ಮಹಾಪ್ರಬಂಧ, ಪು.88-89.
3) ಜೇಮ್ಸ್ ಮಿಲ್, ದಿ ಹಿಸ್ಟರಿ ಆಫ್ ಬ್ರಿಟಿಷ್ ಇಂಡಿಯಾ, ಅಸೋಷಿಯೇಟೆಡ್ ಪಬ್ಲಿಷಿಂಗ್ ಹೌಸ್, ದೆಹಲಿ, 1817, ಪು.279-281.
4) ವಿವರಗಳಿಗೆ ನೋಡಿ, ಡಾ.ಎಸ್.ಚಂದ್ರಶೇಖರ್, ಆಧುನಿಕ ಕರ್ನಾಟಕದ ಆಂದೋಲನಗಳು, ನಮ್ಮ ಪ್ರಕಾಶನ, ತಿಪಟೂರು, ತುಮಕೂರು ಜಿಲ್ಲೆ, 2002, ಪು.56-57.
5) ಅದೇ ನೋಡಿ, ಪು.57.
6) ವಿವರಗಳಿಗೆ ನೋಡಿ, ಡಾ.ಎಸ್.ಚಂದ್ರಶೇಖರ್, ಆಧುನಿಕ ಕರ್ನಾಟಕದ ಆಂದೋಲನಗಳು, ನಮ್ಮ ಪ್ರಕಾಶನ, ತಿಪಟೂರು, ತುಮಕೂರು ಜಿಲ್ಲೆ, 2002, ಪು.58.
7) ವಿವರಗಳಿಗೆ ನೋಡಿ, ಕೃಷ್ಣ ಅಯ್ಯರ್ ಎ.ಕೆ. ಮೈಸೂರು ಟ್ರೈಬ್ಸ್ ಅಂಡ್ ಕಾಸ್ಟ್ಸ್, ನಂ.1, ಪು.12
8) ವಿವರಗಳಿಗೆ ನೋಡಿ, ಜೇಮ್ಸ್ ಮಿಲ್, ದಿ ಹಿಸ್ಟರಿ ಆಫ್ ಬ್ರಿಟಿಷ್ ಇಂಡಿಯಾ, ಅಸೋಸಿಯೇಷನ್ ಪಬ್ಲಿಷಿಂಗ್ ಹೌಸ್, ದೆಹಲಿ, 1817, ಪು.27.
9) ವಿವರಗಳಿಗೆ ನೋಡಿ, ಜೇಮ್ಸ್ ಮಿಲ್, ದಿ ಹಿಸ್ಟರಿ ಆಫ್ ಬ್ರಿಟಿಷ್ ಇಂಡಿಯಾ, ಅಸೋಸಿಯೇಟೆಡ್ ಪಬ್ಲಿಷಿಂಗ್ ಹೌಸ್, ದೆಹಲಿ, 1817, ಪು.36.
10) ಸ್ತ್ರೀಯರ ಸ್ಥಾನಮಾನದ ಬಗ್ಗೆ ಸಮಾಜಶಾಸ್ತ್ರೀಯವಾಗಿ ಸ್ಪಷ್ಟತೆ ಇದೆ ಎಂದು ಕಾಣಿಸುವುದಿಲ್ಲ. ಚಿಂಗಾಮಣಿಯವರು ಇದನ್ನು ಅಸ್ಪಷ್ಟವಾದ ಸಾಮಾಜಿಕ ವಿದ್ಯಮಾನವಾಗಿದೆ ಎಂದು ಕರೆಯುತ್ತಾರೆ. ವಿವರಗಳಿಗೆ ನೋಡಿ, ಚಿಂಗಾಮಣಿ, ಭಾರತೀಯ ಸಮಾಜದ ಸಮಾಜಶಾಸ್ತ್ರ, ಅರ್ಪನಾ ಬುಕ್ ಹೌಸ್, ಪು.153.
11) ಉದೃತ, ನೋಡಿ, ಚಿಂಗಾಮಣಿ, ಭಾರತೀಯ ಸಮಾಜದ ಸಮಾಜಶಾಸ್ತ್ರ, ಅರ್ಪನಾ ಬುಕ್ ಹೌಸ್, ಪು.133.
12) ಶಿವರಾಮ್ ಪಡಿಕ್ಕಲ್, ನಾಡು ನುಡಿಯ ರೂಪಕ, ಮಂಗಳೂರು ವಿಶ್ವವಿದ್ಯಾಲಯ, ದ.ಕ., 2001, ಪು.90.

# ಅಧ್ಯಾಯ–3

# ಸ್ತ್ರೀಯರ ಶಿಕ್ಷಣಾಭಿವೃದ್ಧಿ: ಹಿಂದುಳಿದ ಹೆಣ್ಣುಮಕ್ಕಳ ಶಿಕ್ಷಣ ಹಾಗೂ ನಿಮ್ನ ವರ್ಗದ ಹೆಣ್ಣು ಮಕ್ಕಳ ಶಿಕ್ಷಣ

3.1 ಪೀಠಿಕೆ

3.2 ಮೈಸೂರು ಸಂಸ್ಥಾನದಲ್ಲಿ ವಸಾಹತುಶಾಹಿ ಪೂರ್ವದಲ್ಲಿ ಸ್ತ್ರೀಯರ ಶಿಕ್ಷಣದ ಸ್ವರೂಪ

3.3 ಆಧುನಿಕ ಮೈಸೂರು ಸಂಸ್ಥಾನದಲ್ಲಿ ಸ್ತ್ರೀಯರ ಶಿಕ್ಷಣದ ಸ್ವರೂಪ

3.4 ಉಪಸಂಹಾರ

### 3.1 ಪೀಠಿಕೆ

ಯಾವ ಸಮಾಜವೇ ಆಗಲಿ, ರಾಜ್ಯವೇ ಆಗಲಿ, ಸುಖೀ ರಾಜ್ಯವಾಗಲು ಅದರ ಪ್ರಜೆಗಳಿಗೆ ಶಿಕ್ಷಣ ಅಗತ್ಯವಾಗಿ ಬೇಕು. ಪ್ರಜೆಗಳಲ್ಲಿ ಅರ್ಧಪಾಲಿರುವ ಸ್ತ್ರೀಯರಿಗೆ ಶಿಕ್ಷಣವನ್ನು ಕೊಡದೇ ಹೋದರೆ ಅಷ್ಟು ಭಾಗ ಹಿಂದುಳಿಯಲು ಎಡೆಮಾಡಿಕೊಟ್ಟಂತೆಯೇ ಸರಿ. ಯಾರನ್ನೇ ಆಗಲಿ ಶಿಕ್ಷಣದಿಂದ ವಂಚಿಸುವುದು ಎಂದರೆ ಗುಲಾಮಗಿರಿಗೆ ದೂಡುವುದು, ಪರಾವಲಂಬಿತನಕ್ಕೆ ಈಡು ಮಾಡುವುದು, ಶೋಷಣೆಗೆ ಗುರಿಪಡಿಸುವುದು ಇವೇ ಮೊದಲಾದವುಗಳಿಗೆ ಪ್ರೇರೇಪಿಸುವುದು ಎಂದರ್ಥವಾಗುತ್ತದೆ. ಶಿಕ್ಷಣದಿಂದ ದೂರವಿಟ್ಟಲ್ಲಿ ಅದರ ದುಷ್ಪರಿಣಾಮಗಳು ಶತಮಾನಗಳ ತನಕ ಸಾಗುತ್ತದೆ. ಸ್ತ್ರೀ ಸಮುದಾಯಕ್ಕೆ ಸಂಬಂಧ ಪಟ್ಟಂತೆ ಇಂದಿಗೂ ನಾವು ಭಾರತದಲ್ಲಿ ಇದನ್ನೇ ಕಾಣುತ್ತಿದ್ದೇವೆ.

ಸಾಂಪ್ರದಾಯಿಕ ಹಿಂದೂ ಸಮಾಜದಲ್ಲಿ ಸ್ತ್ರೀಯರಿಗೆ ಶಿಕ್ಷಣವನ್ನು ಪಡೆಯುವ ಸಂಪೂರ್ಣ ಹಕ್ಕಿರಲಿಲ್ಲ. ಬಹುತೇಕ ಸ್ತ್ರೀಯರು ಅನಕ್ಷರಸ್ತರಾಗಿಯೇ ಉಳಿದಿದ್ದು ಶಿಕ್ಷಣ ಎನ್ನುವುದು ಗಗನ ಕುಸುಮ ವಾಗಿಯೇ ಇತ್ತು ಎಂದರೆ ತಪ್ಪಾಗಲಾರದು. ಅವರಿಗೆ ಓದು ಬರಹ ಎನ್ನುವುದು ಈ ಹಿಂದೆ ಮರೀಚಿಕೆಯಾಗಿತ್ತು. ಹೂವಿಗೆ ಸುಗಂಧ ಹೇಗೋ ಹಾಗೆಯೇ ಬಾಳಗಂಧವಾದ ವಿದ್ಯೆಯನ್ನು ಅವರು ಪಡೆಯಲು ಅವಕಾಶವಿರಲಿಲ್ಲ. ಸ್ತ್ರೀಯರು ತಮ್ಮ ಅನಕ್ಷರತೆಯಿಂದಾಗಿ ಅಪಾರ ಹಿಂದುಳಿದವರೆಂದು[1] ಅನೇಕರು ಹೇಳಿದ್ದಾರೆ. ಸ್ತ್ರೀಯರ ಮಾನಸಿಕ ಮತ್ತು ಬೌದ್ಧಿಕ ಶಕ್ತಿ ಸಾಮರ್ಥ್ಯಗಳ ವಿಕಾಸಕ್ಕೆ ಶಿಕ್ಷಣ ಬಹುಮುಖ್ಯ.

ಹಿಂದಿನ ಕಾಲದ ಮೈಸೂರು ಸಂಸ್ಥಾನದ ಚರಿತ್ರೆಯಲ್ಲಿ ಸ್ತ್ರೀಯರ ವಿದ್ಯಾಭ್ಯಾಸ ಹೇಗಿತ್ತು ಎನ್ನುವ ಪ್ರಶ್ನೆ ಬಹಳ ಕುತೂಹಲಕಾರಿಯಾದುದು ಮತ್ತು ಆಸಕ್ತಿಯಿಂದ ಕೂಡಿರುವಂಥದ್ದು ಆಗಿದೆ. ಈ ಪ್ರಶ್ನೆಗೆ ಉತ್ತರವನ್ನು ಹುಡುಕುವಾಗ ಕ್ರಿ.ಪೂ. ಮೂರನೇ ಶತಮಾನಕ್ಕೆ ನಮ್ಮನ್ನು ಆ ಪ್ರಶ್ನೆ ಕೊಂಡೊಯ್ಯುತ್ತದೆ. ಈಗಿನ ಕಾಲದಲ್ಲಿದ್ದಂತೆ ಓದು ಬರಹ ಎನ್ನುವುದು ಅಂದಿನ ಸಂದರ್ಭದಲ್ಲಿ ಮೌಖಿಕವಾಗಿಯೇ ಇತ್ತು ಎಂಬುದನ್ನು ಗಮನಿಸಬೇಕಾಗುತ್ತದೆ. ಆದರೆ ಬೌದ್ಧಧರ್ಮದ ಹೊತ್ತಿಗೆ ಬ್ರಾಹ್ಮಿಲಿಪಿ ಆವಿಷ್ಕಾರಗೊಂಡು, ಆ ಲಿಪಿಯ ಮೂಲಕ ಸಂಸ್ಕೃತ, ಪಾಲಿ, ಪ್ರಾಕೃತ ಮುಂತಾದ ಭಾಷೆಗಳು ವಿಕಾಸಗೊಂಡಿದ್ದವು. ಅಲ್ಲದೆ, ಸಾಕಷ್ಟು ಬರವಣಿಗೆಗಳು ಈ ಭಾಷೆಗಳಲ್ಲಿ ಕಾಣಿಸಿಕೊಂಡಿದ್ದವು. ಈ ಬರವಣಿಗೆಗಳು ಆಗ ತಾಳೆಗರಿ, ಓಲೆಗರಿಗಳ ಮೇಲೆ ದಾಖಲಾದವು.

ಹೀಗೆ ಶಿಕ್ಷಣ ಎನ್ನುವುದು ಅಂದಿನ ಕಾಲದಲ್ಲಿ ಧಾಮಿಕ ವಲಯಗಳಲ್ಲೇ ನಡೆಯುತ್ತಿದ್ದವು. ಈ ಪರಿಸರದಲ್ಲಿ ಬೌದ್ಧಧರ್ಮ ಸಾಕಷ್ಟು ಉದಾರವಾದಿಯಾಗಿ ಸ್ತ್ರೀಯರಿಗೂ ಸಹ ಪ್ರತ್ಯೇಕ ಶಿಕ್ಷಣದ ಅವಕಾಶಗಳನ್ನು ಕಲ್ಪಿಸಿತ್ತು ಎನ್ನುವುದನ್ನು ಚರಿತ್ರೆಯಲ್ಲಿ ಕಾಣುತ್ತೇವೆ. ಆದರೆ ಈ ಕಾಲದ ಶಿಕ್ಷಣವೆಲ್ಲಾ ಆಧ್ಯಾತ್ಮಿಕ ಸ್ವರೂಪದಲ್ಲಿದ್ದು ಮಹಿಳೆಯನ್ನು ಕಡೆಗಣಿಸಿದ್ದವೆಂದೇ ಹೇಳಬೇಕಾಗುತ್ತದೆ.

## 3.2 ಮೈಸೂರು ಸಂಸ್ಥಾನದಲ್ಲಿ ವಸಾಹತುಶಾಹಿ ಪೂರ್ವದಲ್ಲಿ ಸ್ತ್ರೀಯರ ಶಿಕ್ಷಣದ ಸ್ವರೂಪ

ನಮಗೆ ಸಿಗುವ ಆಧಾರಗಳಿಂದ ಮೈಸೂರು ಸಂಸ್ಥಾನದ ಚರಿತ್ರೆಯನ್ನು ಕಟ್ಟುವಾಗ ಸ್ತ್ರೀಯರ ವಿದ್ಯಾಭ್ಯಾಸ ಎನ್ನುವುದು ವೇದಕಾಲ. ತದನಂತರ ಬೌದ್ಧರ ಕಾಲ ಮತ್ತು ಜೈನರ ಕಾಲಘಟ್ಟಗಳಲ್ಲಿ ನೋಡಬೇಕಾಗುತ್ತದೆ. ಆದರೆ ಇದು ಅಷ್ಟು ಸುಲಭದ ಕೆಲಸವೇನೂ ಅಲ್ಲ. ಕಾರಣ ಚರಿತ್ರೆಯನ್ನು ಬರವಣಿಗೆಯ ಮೂಲಕ ಅದರಲ್ಲೂ ಸ್ತ್ರೀಯರ ಬಗ್ಗೆ ಚರಿತ್ರೆಯಲ್ಲಿ ದೊರೆಯುವ ಸಾಕ್ಷ್ಯಾಧಾರಗಳು ಬಹಳ ಕಮ್ಮಿ. ಇಲ್ಲಿಯವರೆಗೆ ನಮಗೆ ದೊರೆಯುವ ಪ್ರಾಕ್ತನಾಧಾರಗಳು, ಶಿಲ್ಪಗಳು, ವಿದೇಶಿ ಪ್ರವಾಸಿಗರ ಕಥನಗಳು ಮತ್ತು ಧಾರ್ಮಿಕ ಬರವಣಿಗೆಗಳಲ್ಲಿ ಚರಿತ್ರೆ ಎನ್ನುವುದು ಇದೆಯಾದರೂ ಅವುಗಳಲ್ಲಿ ಮಹಿಳೆಯರಿಗೆ ಸಂಬಂಧಿಸಿದಂತೆ ಸಕಾರಾತ್ಮಕವಾದ ನಿಲುವುಗಳು ಸಿಗುವುದು ಅಪರೂಪವೇ ಸರಿ. ಈ ಅಪರೂಪ ಎನ್ನುವ ಬರವಣಿಗೆಗಳಲ್ಲಿ ಮಹಿಳೆಯರ ಸಾಕ್ಷರತೆ ಎನ್ನುವುದು ಅಂದಿನ ಸಾರ್ವತ್ರಿಕ ವಿದ್ಯಮಾನವೇನೂ ಆಗಿರಲಿಲ್ಲ ಎಂಬುದನ್ನು ಗಮನಿಸಬಹುದು. ಏಕೆಂದರೆ ಸಾಕ್ಷರತೆ ಎನ್ನುವುದೇ ಆಧುನಿಕ ಪರಿಭಾಷೆಯಾಗಿದೆ. ಆದರೂ ಆಗಿನ ಕಾಲದ ಸ್ತ್ರೀ ವಿದ್ಯಾಭ್ಯಾಸದ ಬಗ್ಗೆ ನಮಗೆ ದೊರೆಯುವ ಮಾಹಿತಿಗಳನ್ನು ಈ ಕೆಳಗಿನಂತೆ ಕ್ರೋಢೀಕರಿಸಬಹುದು. ವೇದಾಧ್ಯಯನವನ್ನು ಮಾಡುತ್ತಿದ್ದ ಸ್ತ್ರೀಯರ ಬಗ್ಗೆ ಅಲ್ಪಸ್ವಲ್ಪ ಮಾಹಿತಿ ದೊರೆಯುತ್ತದೆ. ಇಲ್ಲಿ ಶಿಕ್ಷಣದ ಸ್ವರೂಪ ಎಂದರೆ ಶಿಸ್ತುಪಾಲನೆ, ಧ್ಯಾನ, ಗುರುಕುಲದಲ್ಲಿ ಗುರುವಿನ ಸೇವೆಯ ಮೂಲಕ ಪಡೆಯುತ್ತಿದ್ದ ಪಾರಮಾರ್ಥಿಕ ಜ್ಞಾನ ಇಷ್ಟೇ ಆಗಿದ್ದವು. ಅಲ್ಲದೆ ತರಗತಿ ಎನ್ನುವುದು ವೈಯಕ್ತಿಕ ನೆಲೆಯಲ್ಲಿ ಗುರುವಿನೊಡನೆ ನಡೆಯುತ್ತಿದ್ದ ಸಂವಾದವಷ್ಟೆ. ಆದರೆ ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿಯೆಂದರೆ, "ವೈದಿಕ ಕೃತಿಗಳು ಮತ್ತು ಪ್ರಾಚೀನ ಭಾರತವನ್ನು ಆಧರಿಸಿದ ಚರ್ಚೆಗಳಲ್ಲಿ ಆರ್ಯನ್ ಪುರುಷನನ್ನು ಭಾರತೀಯ ನಾಗರಿಕತೆಯ ಕೇಂದ್ರ ವಸ್ತುವನ್ನಾಗಿ ನಿರ್ಮಿಸಿದ್ದು, ಚರಿತ್ರೆಯನ್ನು ನಿರಾಕರಿಸುವಷ್ಟೆ ಮಹತ್ವದ ಸಂಗತಿ"ಯಾಗಿತ್ತು.[2] ಅಗ್ರಹಾರಗಳು ಮತ್ತು ದೇವಾಲಯಗಳು ಶಿಕ್ಷಣದ ಪ್ರಮುಖ ಕೇಂದ್ರಗಳಾಗಿ ಕೇವಲ ವೈದಿಕ ಜನರಿಗೆ ಮಾತ್ರ ಅಲ್ಲಿನ ಶಿಕ್ಷಣ ಸೀಮಿತವಾಗಿತ್ತು.

ಈ ವೈದಿಕ ಪ್ರಾಬಲ್ಯವನ್ನು ಪ್ರಶ್ನಿಸಿದಂಥ ಪರಿಣಾಮಕಾರಿ ಐತಿಹಾಸಿಕ ಚಳುವಳಿಗಳ ಸಂದರ್ಭದಲ್ಲಿ ಹಲವೊಮ್ಮೆ ಸಾಹಿತ್ಯ ಸೃಷ್ಟಿಯಲ್ಲಿ ಪಾಲ್ಗೊಳ್ಳಲು ಸ್ತ್ರೀಯರಿಗೆ ಅವಕಾಶಗಳಿದ್ದವು ಹಾಗೂ ಪ್ರತಿಸ್ಪರ್ಧಿ ರಾಜಕೀಯ ಗುಂಪುಗಳ ಅಥವಾ ಆಗಷ್ಟೇ ಬೆಳಕಿಗೆ ಬರುತ್ತಿದ್ದ ಸಾಮಾಜಿಕ ವರ್ಗಗಳ ಹಕ್ಕುಗಳನ್ನು ಅವರು ಪ್ರತಿನಿಧಿಸುತ್ತಿದ್ದರು.[3]

ಈ ವೇದಕಾಲದ ನಂತರದಲ್ಲಿ ಬೌದ್ಧಧರ್ಮ ಮತ್ತು ಜೈನಧರ್ಮಗಳು ಮೈಸೂರು ಸಂಸ್ಥಾನದಲ್ಲಿ ಕ್ರಿ.ಪೂ. ಮೂರನೇ ಶತಮಾನದ ಹೊತ್ತಿಗೆ ಅಸ್ತಿತ್ವದಲ್ಲಿದ್ದವು ಎಂಬುದು ತಿಳಿದುಬರುತ್ತದೆ. ಅಶೋಕನ ಶಾಸನಗಳು ಇದಕ್ಕೆ ಸಾಕಷ್ಟು ಆಧಾರಗಳನ್ನು ಒದಗಿಸುತ್ತವೆ. ಅಲ್ಲದೆ, ಜೈನ ಚಕ್ರವರ್ತಿಯಾದ ಚಂದ್ರಗುಪ್ತ ಮೌರ್ಯ ಶ್ರವಣಬೆಳಗೊಳದಲ್ಲಿ ಬಂದು ನೆಲೆಸಿದ್ದ ಎಂಬುದಕ್ಕೂ ಸಾಕಷ್ಟು ಮಾಹಿತಿ ನಮಗೆ ದೊರೆಯುತ್ತದೆ. ಹೀಗೆ ಆ ಕಾಲದಲ್ಲಿ ಬಸದಿಗಳು ಮತ್ತು ಘಟಿಕಾ ಕೇಂದ್ರಗಳು ಶಿಕ್ಷಣವನ್ನು ನೀಡುತ್ತಿದ್ದವು ಎಂಬುದನ್ನು ಗಮನಿಸುತ್ತೇವೆ. ಅಲ್ಲದೆ ಇವುಗಳಿಗೆಲ್ಲಾ ಶಿಖರಪ್ರಾಯ ಎಂಬಂತೆ ಬೌದ್ಧರ ನಳಂದ ವಿಶ್ವವಿದ್ಯಾಲಯ ಮತ್ತು ನಾಗಾರ್ಜುನನ ತಾರ್ಕಿಕ ವಿಧಾನಗಳನ್ನು ಯಾರು ಸಹ ಮರೆಯುವಂತಿಲ್ಲ.

ಆದರೆ ಮಧ್ಯಯುಗೀನ ಕಾಲದಲ್ಲಿ ಭಕ್ತಿ ಚಳುವಳಿಗಳು ಸಾಕಷ್ಟು ಮಂದಿ ಸಾಮಾನ್ಯ ಮಹಿಳೆಯರನ್ನು ತನ್ನತ್ತ ಆಕರ್ಷಿಸಿ ಅವರಿಗೂ ಶಿಕ್ಷಣದ ಬಾಗಿಲನ್ನು ತೆರೆದಿದ್ದವು ಎಂಬುದನ್ನು ಕಾಣುತ್ತೇವೆ. ಇದಕ್ಕೆ ಸ್ಪಷ್ಟ ನಿದರ್ಶನ ಎಂದರೆ ವಚನ ಚಳುವಳಿ. ಅಕ್ಕಮಹಾದೇವಿ, ಕಾಳವ್ವೆ, ಸಂಕವ್ವ ಮುಂತಾದವರ ಹೆಸರುಗಳು ಕನ್ನಡ ಸಾಹಿತ್ಯದಲ್ಲಿ ಇಂದಿಗೂ ಉಳಿದಿರುವುದನ್ನು ಗಮನಿಸಬಹುದು. ಹೀಗಿದ್ದರೂ ಸ್ತ್ರೀ ಶಿಕ್ಷಣ ಎನ್ನುವುದು ಕುಲೀನ ಸ್ತ್ರೀಯರಿಗೆ ಮತ್ತು ಮೇಲ್ಜಾತಿ ಮಹಿಳೆಯರಿಗೆ ಮಾತ್ರ ಸೀಮಿತವಾಗಿತ್ತು ಎಂಬುದನ್ನು ಮರೆಯುವಂತಿಲ್ಲ. ಲಾರ್ಡ್ ಮೆಕಾಲೆಯ ಭಾರತದಲ್ಲಿ ಆಧುನಿಕ ಶಿಕ್ಷಣವನ್ನು ಪ್ರತಿಪಾದಿಸುವ ಮುನ್ನ ಈ ನಾಡಿನಲ್ಲಿ ಎರಡು ರೀತಿಯ ಶಿಕ್ಷಣ ಕ್ರಮಗಳಿದ್ದವು. ಅವನ್ನೆ ದೇಶಿ ಪದ್ಧತಿಗಳು ಎಂದು ಕರೆಯುವುದು. ಆ ಪದ್ಧತಿಗಳ ವಿಷಯವೆಂದರೆ ಹಿಂದೂ/ಮುಸ್ಲಿಂ ದೈವಶಾಸ್ತ್ರವಾಗಿತ್ತು. ಅಲ್ಲದೆ, ಅದರ ಕಲಿಕಾ ಮಾಧ್ಯಮ ಸಂಸ್ಕೃತ/ಅರೇಬಿಕ್/ಪರ್ಶಿಯನ್ ಭಾಷೆಗಳಲ್ಲಿತ್ತು.

### ೩.೩. ಆಧುನಿಕ ಮೈಸೂರು ಸಂಸ್ಥಾನದಲ್ಲಿ ಸ್ತ್ರೀಯರ ಶಿಕ್ಷಣದ ಸ್ವರೂಪ

ಸ್ತ್ರೀ ಶಿಕ್ಷಣಕ್ಕೆ ಸಂಬಂಧಿಸಿದಂತೆ ಒಂದು ಸಾರ್ವತ್ರಿಕ ಸ್ವರೂಪ ನಮಗೆ ದೊರೆಯುವುದು ಪಾಶ್ಚಾತ್ಯರು ಈ ನಾಡಿಗೆ ಪ್ರವೇಶಿಸಿದಾಗಲೇ. ಈ ಕಾಲಘಟ್ಟವನ್ನು ನಾವು ಆಧುನಿಕ ಕಾಲಘಟ್ಟ ಎಂದು ಕರೆಯುತ್ತೇವೆ. ಈ ಕಾಲಘಟ್ಟದಲ್ಲೇ ಶಿಕ್ಷಣ ಸಾರ್ವತ್ರಿಕವಾಗಿ ಸಮಾಜದ ತಳಮಟ್ಟದಲ್ಲಿ ಜೀವಿಸುತ್ತಿದ್ದವರಿಗೂ ಶಿಕ್ಷಣದ ಅವಕಾಶಗಳು ತೆರೆದದ್ದು. ಇದಕ್ಕೆ ಸ್ಪಷ್ಟವಾದ ಕಾರಣಗಳು ನಮಗೆ ಸಿಗುವುದು ಭಾರತದಲ್ಲಿ ಬ್ರಿಟಿಷ್ ಚರಿತ್ರೆಗೆ ಕಾರಣೀಭೂತನಾದ ಜೇಮ್ಸ್‌ಮಿಲ್‌ನಿಂದ. ಆತನ ಕೃತಿ ನಮಗೆ ಬಹಳಷ್ಟು ಮುಖ್ಯವಾಗುತ್ತದೆ. ಆತನ ಪ್ರಕಾರ ಹಿಂದೂ ನಾಗರಿಕತೆಯು ಪ್ರಾರಂಭದಿಂದಲೂ ಅಸಂಸ್ಕೃತವಾಗಿತ್ತು. ಒಂದು ನಾಗರೀಕತೆಯ ಹಂತವನ್ನು ಗುರುತಿಸಲು ಆತ ಬಳಸಿದ ನಿರ್ಧಾರಾಂಶಗಳಲ್ಲಿ ಅದು ಸ್ತ್ರೀಯರಿಗೆ ನೀಡಿದ್ದ ಸ್ಥಾನಮಾನವೂ ಒಂದಾಗಿತ್ತು. ಮಿಲ್‌ನ ಪ್ರಕಾರ ಹಿಂದೂ ಸ್ತ್ರೀಯರು ಅವಮಾನಕರವಾದ ಅವಲಂಬನೆಯ ಪರಿಸ್ಥಿತಿಯಲ್ಲಿದ್ದಾರೆ. ಅವರನ್ನು ಅತ್ಯಂತ ಕೀಳುಮಟ್ಟದಲ್ಲಿ ಇಡಲಾಗಿದೆ. ಅವರು ಶಿಕ್ಷಣ ಮತ್ತು ಆಸ್ತಿ ಹಕ್ಕಿನಿಂದ ವಂಚಿತರಾಗಿದ್ದಾರೆ. ಒಬ್ಬ ಪತ್ನಿಯು ತನ್ನ ಪತಿಯೊಡನೆ ಸಮನಾಗಿ ಆಹಾರ ಸೇವಿಸಲೂ ಅರ್ಹಳಲ್ಲವೆಂದು ಗಮನಾರ್ಹವಾದ ಅನಾಗರಿಕತೆಯು ಹಿಂದೂಗಳಲ್ಲಿ ಪ್ರಚಲಿತವಾಗಿದೆ. ಇದಕ್ಕೆ ಹಿಂದೂ ಸಮಾಜದ ಒಟ್ಟು ದೃಷ್ಟಿಯ ಪರಿಣಾಮವೇ ಆಗಿತ್ತು.

ಈ ಟೀಕೆಗಳಿಗೆ ಪ್ರತ್ಯುತ್ತರಿಸಲು ಪ್ರಯತ್ನಿಸಿದ ಬ್ರಿಟಿಷ್ ಶಿಕ್ಷಣ ಪಡೆದ ಗಂಡಸರು ಸಹ ಭಾರತೀಯ ಸ್ತ್ರೀಯರ ಸಮಕಾಲೀನ ಸ್ಥಾನಮಾನವು ತೃಪ್ತಿಕರವಾಗಿಲ್ಲ ಎಂಬುದನ್ನು ಒಪ್ಪಬೇಕಿತ್ತು. ಅವರು ವೇದಗಳ ಕಾಲದಲ್ಲಿ ಸ್ತ್ರೀಯರ ಸ್ಥಾನವು ಉತ್ತಮವಾಗಿತ್ತು ಎಂಬ ವಾದವನ್ನು ಮುಂದಿಟ್ಟರೂ ಸಹ ವರ್ತಮಾನದ ದುಃಸ್ಥಿತಿಯನ್ನು ಒಪ್ಪಿ ಸುಧಾರಣೆಗಳಿಗೆ ಮುಂದಾದರು.

ಹೀಗೆ ಸ್ತ್ರೀಯರ ಮತ್ತು ದಲಿತ ಜಾತಿ ಸಮುದಾಯಗಳ ಸಮಾಜ ಸುಧಾರಣಾ ಚಳುವಳಿಗಳು, ಸರ್ಕಾರದಿಂದ ಜಾರಿಗೆ ತರಲ್ಪಟ್ಟ ಶಾಸನಾತ್ಮಕ ಕ್ರಮಗಳು, ಶಿಕ್ಷಣದ ಸೌಲಭ್ಯ, ಉದ್ಯೋಗಾವಕಾಶಗಳು, ರಾಷ್ಟ್ರೀಯ ಚಳುವಳಿಗಳಲ್ಲಿ ಸೇರಿದ್ದರಿಂದ ಉಂಟಾದ ರಾಜಕೀಯ ಅನುಭಗಳು ಮುಂತಾದವು ಮೈಸೂರು ಸಂಸ್ಥಾನದಲ್ಲಿ ಸ್ತ್ರೀಯರ ಸ್ಥಾನಮಾನದಲ್ಲಿ ಮಹತ್ತರ ಬದಲಾವಣೆಗಳಿಗೆ ಕಾರಣವಾದವು. ಯೂರೋಪಿನ ವಾಸ್ಕೋಡಿಗಾಮ ಯಾವಾಗ ಭಾರತಕ್ಕೆ

ಜಲಮಾರ್ಗವನ್ನು ಕಂಡುಹಿಡಿದನೋ ಆಗಲೇ ಭಾರತದಲ್ಲಿ ವಸಾಹತುಶಾಹಿ ಆಧುನಿಕತೆ ತನ್ನ ನಾಗರೀಕತೆಯ ಸವಾಲನ್ನು ಇಲ್ಲಿನ ಸಂಪ್ರದಾಯಸ್ಥರಿಗೆ ಒಡ್ಡುತ್ತದೆ.

ಅಲ್ಲದೆ, ಬ್ರಿಟಿಷ್ ಆಡಳಿತ ಇಲ್ಲಿ ರೈಲ್ವೆ, ಅಂಚೆ ಮತ್ತು ತಂತಿ, ಜಿಲ್ಲಾ ಪ್ರಾಂತ್ಯಗಳನ್ನು ನ್ಯಾಯಾಂಗ ಮತ್ತು ಪೋಲೀಸ್ ವ್ಯವಸ್ಥೆ ಮತ್ತು ಸೈನ್ಯವನ್ನು ಸ್ಥಾಪಿಸಿ ಅನೇಕ ಬದಲಾವಣೆಗಳಿಗೆ ಕಾರಣೀಭೂತ ವಾಗುತ್ತದೆ. ಈ ಎಲ್ಲಾ ಬದಲಾವಣೆಗಳಿಗೆ ಬಹಳಷ್ಟು ಕೊಡುಗೆ ನೀಡಿದವನು ಲಾರ್ಡ್ ಮೆಕಾಲೆ ಎಂದರೆ ಅಚ್ಚರಿಯಾದೀತು. ಆದರೆ ಇಲ್ಲೊಂದು ಸ್ವಾರಸ್ಯವಿದೆ. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ವ್ಯಾಪಾರಕ್ಕಾಗಿ ಮತ್ತು ಲಾಭಕ್ಕಾಗಿ ಬಂತು. ಯಾವಾಗ ಅವರು ಲಾಭವನ್ನು ಕಂಡುಕೊಂಡರೋ ಭಾರತವೂ ಸಹ ಇತ್ತ ನಾಗರಿಕತೆಯನ್ನು ಪಡೆದುಕೊಂಡಿತು. ಈ ಪ್ರಕ್ರಿಯೆಯಲ್ಲಿ ನಾಗರಿಕಗೊಳ್ಳುತ್ತಿರುವ ಭಾರತೀಯ ಪ್ರಮುಖ ಗಮನವೆಲ್ಲಾ ವೈಜ್ಞನಿಕ ಮನೋಧರ್ಮವನ್ನು ಬಿತ್ತಲು ತಾರ್ಕಿಕ ಆಲೋಚನೆ, ಕೈಗಾರೀಕರಣ ಮುಂತಾದವುಗಳತ್ತ ಹರಡಿತು. ಆಧುನಿಕ ರಾಷ್ಟ್ರ ವ್ಯವಸ್ಥೆಯಿಲ್ಲದೆ ಲಿಬರಲ್ ಪ್ರಜಾಸತ್ತಾತ್ಮಕ ವ್ಯವಸ್ಥೆಗೆ ಭಾರತವು ಪ್ರವೇಶವನ್ನು ಬ್ರಿಟಿಷರಿಂದಲೇ ಪಡೆಯುತ್ತದೆ. ಆಗಸ್ಟ್ 8, 1853ರಲ್ಲಿ ನ್ಯೂಯಾರ್ಕ್ ಡೈಲಿ ಟ್ರಿಬ್ಯೂನ್‌ನ ಲೇಖನವೊಂದರಲ್ಲಿ ಕಾರ್ಲ್‌ಮಾರ್ಕ್ಸ್ ಈ ರೀತಿ ವಾದಿಸಿದ್ದ. ಪ್ರಶ್ನೆಯೇನೆಂದರೆ ಭಾರತವನ್ನು ಆಕ್ರಮಿಸಲು ಬ್ರಿಟಿಷರಿಗೆ ಹಕ್ಕಿತ್ತೋ ಇಲ್ಲವೋ ಎನ್ನುವುದಾಗಿರದೆ ಟರ್ಕಿಯವರಿಂದ, ಪರ್ಶಿಯನ್ನರಿಂದ ರಷ್ಯಾದವರಿಂದ ಭಾರತ ಆಕ್ರಮಣಕ್ಕೊಳಗಾಗುವುದನ್ನು ನಾವು ಒಪ್ಪಬಹುದೇ ಎಂದು. ಭಾರತವು ಆಕ್ರಮಣ ಕ್ಕೊಳಗಾಗುವ ಹಣೆಬರಹವನ್ನು ಜಾತಿ ವ್ಯವಸ್ಥೆಯಿಂದಾಗಿ ನಿರ್ಧಾರವಾಗಿತ್ತೆಂದು ಮಾರ್ಕ್ಸ್ ಹೇಳುತ್ತಾನೆ. ಭಾರತವನ್ನು ನಾಗರಿಕಗೊಳಿಸುವ ಪ್ರಕ್ರಿಯೆಯಲ್ಲಿ ಮತ್ತು ಆಧುನಿಕತೆಯ ಬೀಜ ಬಿತ್ತುವ ಮೂಲಕ ಬ್ರಿಟಿಷರು ಒಂದು ಸಾಮಾಜಿಕ ಕ್ರಾಂತಿಗೆ ನಾಂದಿ ಹಾಡಿದರೆಂದೇ ಹೇಳಬೇಕಾಗುತ್ತದೆ.

1791ರಲ್ಲಿ ಹೌಸ್ ಆಫ್ ಕಾಮನ್ಸ್‌ನಲ್ಲಿ ಗುಲಾಮರ ವ್ಯಾಪಾರದ ವಿರುದ್ಧ ಮೊದಲ ಬಾರಿ ಬಿಲ್‌ನ್ನು ಪ್ರತಿಪಾದಿಸಿದ ವಿಲಿಯಂ ವಿಲ್ಬರ್‌ಫೋರ್ಸ್ ಭಾರತಕ್ಕೆ ಇಂಗ್ಲಿಷ್, ವಿಜ್ಞಾನ ಮತ್ತು ಕ್ರೈಸ್ತಮತ ಬೇಕೆನ್ನುತ್ತಾನೆ. ಅಂಥ ವಿಚಾರಗಳಿಗೆ ಭಾರತದಲ್ಲಿ ವಾಸ್ತವರೂಪ ನೀಡಿದವನು ಮೆಕಾಲೆ.[4] 1830ರಲ್ಲಿ ಬ್ರಿಟಿಷ್ ಪಾರ್ಲಿಮೆಂಟನ್ನು ಮೆಕಾಲೆ ಪ್ರವೇಶಿಸಿದ್ದ. ಈ ದಶಕದಲ್ಲಿ ಆತನ ಯುಗ ಪ್ರವರ್ತನಾ ನೀತಿಗಳಿಂದ ಬ್ರಿಟಿಷ್ ಪಾರ್ಲಿಮೆಂಟ್‌ನ ಘನತೆಯನ್ನು ಹೆಚ್ಚಿಸಿದ್ದ. ಆತನು ಗುಲಾಮಗಿರಿಯ ವಿರುದ್ಧ ಆಂದೋಲನದಲ್ಲಿ ತೊಡಗಿದ್ದ. ಕೆಲವೇ ಜನ ಅನುಕೂಲಸ್ಥರ ಹಕ್ಕಾಗಿದ್ದ

ನ್ನು ಎಲ್ಲಾ ಮಧ್ಯಮ ವರ್ಗಗಳಿಗೆ ನೀಡಲು ಹೋರಾಟ ಮಾಡಿದ್ದ. ಮಹಿಳೆಯರು ಆಸ್ತಿಯ ಹಕ್ಕನ್ನು ಹೊಂದಲು ಪ್ರಚಾರ ನಡೆಸಿದ್ದ. ಅಲ್ಲದೆ, ಯಹೂದಿ ಜನರ ವಿರುದ್ಧವಿದ್ದ ಕಾನೂನು ತೆಗೆಯಲು ವಾದಿಸಿದ್ದ. ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಎತ್ತಿಹಿಡಿದಿದ್ದನಲ್ಲದೆ ಇಂಡಿಯಾ ಆ್ಯಕ್ಟ್‌ನ್ನು ಸಮರ್ಥಿಸಿಕೊಂಡು ಬಂಡವಾಳಶಾಹಿಗಳನ್ನು ವಿರೋಧಿಸಿದ್ದ. 1832ರ ಈಸ್ಟ ಇಂಡಿಯಾ ಆ್ಯಕ್ಟ್ ಮೊದಲ ವಸಾಹತು ಕಾನೂನು ಸಮಿತಿಯನ್ನು ಭಾರತದಲ್ಲಿ ಸ್ಥಾಪಿಸಲು ಪ್ರಯತ್ನಿಸಿತ್ತು. ಯಾವ ಕಾನೂನು ಭಾರತದ ಜನರನ್ನು ಕಾಯುತ್ತಿತ್ತೋ, ಅದೇ ಕಾನೂನಿನಡಿ ಬ್ರಿಟಿಷ್ ಅಧಿಕಾರಿಗಳನ್ನು ತರಲು ಮೆಕಾಲೆ ವಾದಿಸಿದ್ದ. ಆದರೂ ಆತನನ್ನು ಶತ್ರು ಎಂಬಂತೆ ಚಿತ್ರಿಸಿರುವುದನ್ನು ನಾವು ಕಾಣುತ್ತೇವೆ. ಕೈಗಾರಿಕಾ ಕ್ರಾಂತಿಯನ್ನು ಮೆಕಾಲೆ ಎತ್ತಿಹಿಡಿದಿದ್ದ. ಹಿಂದೂಧರ್ಮ, ಬ್ರಾಹ್ಮಣರು ಮತ್ತು ಜಾತಿಪದ್ಧತಿಯನ್ನು ವಿರೋಧಿಸಿದ್ದವರಲ್ಲಿ ಈತ ಮೊದಲ ಬ್ರಿಟಿಷ್‌ನವನಾಗಿದ್ದ. ಅಲ್ಲದೆ ಅಸ್ಪೃಶ್ಯ/ಕೆಳಜಾತಿಯವರು ಭಾರತದಲ್ಲಿ ಉನ್ನತ ಹುದ್ದೆಗಳನ್ನು ಹೊಂದಬಹುದೆಂದು ಮಾತನಾಡಿದವರಲ್ಲೂ ಈತನೇ ಮೊದಲಿಗನೆಂದು ಹೇಳಬಹುದು. ಇವತ್ತಿನ ಆಫ್ಘಾನಿಸ್ತಾನ ಮತ್ತು ನೇಪಾಳ ದೇಶದಂತೆ ಭಾರತ ಆಗಲು ತಡೆದ ಮೆಕಾಲ ಎಅಂದು ಭಾರತದ ಸ್ವಾತಂತ್ರ್ಯ ಮತ್ತು ವೈಜ್ಞಾನಿಕ ಶಿಕ್ಷಣ ಸೈದ್ಧಾಂತಿಕ ತಳಹದಿಯನ್ನು ಹಾಕಿದ್ದ.[5] ಆತನಂತೆ, ಭಾರತೀಯ ಸಮಾಜದ ಎಲ್ಲಾ ಆಗುಹೋಗುಗಳಲ್ಲಿ ಥಾಮಸ್ ಮನ್ರೋ ಮತ್ತು ಎಲ್ಫಿನ್‌ಸ್ಟನ್ ಭಾಗಿಯಾಗುತ್ತಾರೆ.

1813ರಲ್ಲಿ ಬ್ರಿಟಿಷ್ ಪಾರ್ಲಿಮೆಂಟು ದೇಶಿ ಜನರ ಶಿಕ್ಷಣಕ್ಕಾಗಿ ಒಂದು ಲಕ್ಷ ರೂ. ಮೀಸಲಿಡುವಂತೆ ಆದೇಶ ನೀಡಿತು. ಈ ನಿರ್ದೇಶನದ ಮೇರೆಗೆ ಕಂಪನಿಯು ಅನೇಕ ದಾರಿಗಳನ್ನು ಹುಡುಕಲಾರಂಭಿಸಿತು. ಅದರ ಮೊದಲ ಹೆಜ್ಜೆಯೆಂದರೆ ದೇಶಿ ಶಿಕ್ಷಣ ಪದ್ಧತಿಯನ್ನು ಅರ್ಥೈಸುವುದೇ ಆಗಿತ್ತು. ಅದಕ್ಕಾಗಿ ಅನೇಕ ಸಮೀಕ್ಷೆಗಳನ್ನು ಕೈಗೊಳ್ಳಲಾಯಿತು. ದಲಿತರ ಮತ್ತು ಸ್ತ್ರೀಯರ ವಿದ್ಯಾಭ್ಯಾಸದ ದೃಷ್ಟಿಯಲ್ಲಿ ಕಮ್ಮಿಯೆಂದರೂ ಮೂರು ವರದಿಗಳನ್ನು ಗಮನಿಸಲೇಬೇಕಾಗುತ್ತದೆ. ಮದ್ರಾಸ್ಸಿನ ಗೌರ್ನರ್ ಆಗಿದ್ದ ಸರ್ ಥಾಮಸ್ ಮನ್ರೋ ತನ್ನ ಪ್ರಾಂತ್ಯದಲ್ಲಿ ಬೃಹತ್ ರೀತಿಯಲ್ಲಿ ಸಮೀಕ್ಷೆಯನ್ನು ಕೈಗೊಂಡಿದ್ದ. 1822ರ ಜೂನ್ ನಲ್ಲಿ ಅದರ ಫಲಿತಾಂಶವನ್ನು ಪ್ರಕಟಿಸಲಾಯಿತು. ಅದರ ಅನೇಕ ಸಂಗತಿಗಳಲ್ಲಿ ಮುಖ್ಯವಾದುದೆಂದರೆ ಒಬ್ಬನೆ ಒಬ್ಬ ದಲಿತ/ಆದಿವಾಸಿಯೂ ಸಹ ದೇಶಿ ಶಿಕ್ಷಣದಲ್ಲಿ ಪ್ರವೇಶ ಪಡೆದಿರಲಿಲ್ಲ. 1825ರಲ್ಲಿ ಇಂಥದ್ದೇ ಸಮೀಕ್ಷೆಯನ್ನು ಬಾಂಬೆಯ ಗೌರ್ನರ್ ಮೌರಿಟ್ ಸ್ಟುವರ್ಟ್ ಎಲ್ಫಿನ್‌ಸ್ಟನ್ ಕೈಗೊಂಡ. ಅಲ್ಲಿಯೂ ಸಹ ದೇಶಿ ಶಿಕ್ಷಣದಲ್ಲಿ ದಲಿತ/ಆದಿವ್ಯಾಸಿಗಳ್ಯಾರೂ ಪ್ರವೇಶ ಪಡೆದಿರಲಿಲ್ಲ. ಹಾಗೆಯೇ ಗೌರ್ನರ್‌ನ

ಅಪ್ಪಣೆ ಪಡೆದು ಒಬ್ಬ ಮಿಶನರಿ ಬಂಗಾಳ ಮತ್ತು ಬಿಹಾರ್‌ಗಳಲ್ಲೂ ಸಮೀಕ್ಷೆ ನಡೆಸುತ್ತಾನೆ. ಅಲ್ಲಿ ಆತ ಕೆಲವು ಅಸ್ಪೃಶ್ಯ ವಿದ್ಯಾರ್ಥಿಗಳು ಮತ್ತು ಕೆಲವು ಉಪಾಧ್ಯಾಯರನ್ನು ಕಂಡಿದ್ದನಷ್ಟೆ. ಬಾಂಬೆ ಪ್ರಾಂತ್ಯದ ದಕ್ಷಿಣ ಕೊಂಕಣ ಜಿಲ್ಲೆಯಲ್ಲಿ ಒಟ್ಟು 86 ಶಾಲೆಗಳಿದ್ದವು. ಅವುಗಳಲ್ಲಿ 25 ಶಾಲೆಗಳನ್ನು ದೇವಸ್ಥಾನಗಳಲ್ಲಿ ಮತ್ತು ಉಪಾಧ್ಯಾಯರ ಮನೆಗಳಲ್ಲಿ ನಡೆಸಲಾಗುತ್ತಿತ್ತು. ಅವರೆಲ್ಲಾ ಬ್ರಾಹ್ಮಣರೇ ಆಗಿದ್ದರು. 1854ರಲ್ಲಿ ಇಂಗ್ಲಿಷ್ ಶಿಕ್ಷಣ ಪದ್ಧತಿಯನ್ನು ಆರಂಭಿಸಲಾಗುತ್ತದೆ. ಕೇವಲ ನಾಲ್ಕು ದಶಕಗಳಲ್ಲಿ ಮದ್ರಾಸ್ ಪ್ರಾಂತ್ಯವೊಂದರಲ್ಲೇ 24,168 ಮಂದಿ ಅಸ್ಪೃಶ್ಯರು ಹಾಗೂ 815 ಮಂದಿ ಆದಿವಾಸಿ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದರು. ಬ್ರಿಟಿಷರು ಭಾರತವನ್ನು ಬಿಡುವ ವೇಳೆಗೆ 17.4 ಲಕ್ಷ ಅಸ್ಪೃಶ್ಯರು/ಆದಿವಾಸಿಗಳು ಶಿಕ್ಷಣವನ್ನು ಪಡೆಯುತ್ತಿದ್ದರು. ಇದಕ್ಕೆ ಕಾರಣನಾದವನು ಲಾರ್ಡ್ ಮೆಕಾಲೆ.

ಲಾರ್ಡ್ ವಿಲಿಯಂ ಬೆಂಟಿಂಕ್ ತನ್ನ ಗೌರ್ನರ್ ಜನರಲ್ ಹುದ್ದೆಯಲ್ಲಿರುವಾಗ ಒಂದು ಸಂದರ್ಭವನ್ನು ಸೃಷ್ಟಿಸಿ ಮಾರ್ಚ್ 7, 1835ರಲ್ಲಿ ಮೆಕಾಲೆಯು ಪ್ರತಿಪಾದಿಸಿದ ಇಂಗ್ಲಿಷ್, ವಿಜ್ಞಾನ ಮತ್ತು ತಾಂತ್ರಿಕ ಶಿಕ್ಷಣಕ್ಕೆ ಅನುಮೋದನೆಯನ್ನು ನೀಡುತ್ತಾನೆ. ಭಾರತೀಯರು ಆತನನ್ನು ಪ್ರತಿಪಾದಿಸಿರುವಂತೆ ಆತ ಎಂದೂ ಇಂಗ್ಲಿಷ್ ರಾಷ್ಟ್ರವಾದಿಯಾಗಿರಲಿಲ್ಲ. ಆಹಾರ ಪದಾರ್ಥಗಳ ಆಮದಿನ ಮೇಲೆ ಅಧಿಕ ಸುಂಕ ವಿಧಿಸುತ್ತಿದ್ದ 'ಕಾರ್ನ್‌ಲಾ'ವನ್ನು ತೆಗೆದುಹಾಕಲು ಮೆಕಾಲೆ ಒತ್ತಾಯಿಸಿದ್ದರಲ್ಲೇ ಆತ ತಾನು ರಾಷ್ಟ್ರೀಯ ವಾದಿಯಾಗಿರಲಿಲ್ಲ ಎಂದು ತಿಳಿಯುತ್ತದೆ. ಜನಸಾಮಾನ್ಯರು ರೊಟ್ಟಿಗಾಗಿ ಅಧಿಕ ಬೆಲೆ ತೆರಬೇಕಾಗಿತ್ತು. ಮೆಕಾಲೆಯ ಬೆಂಬಲ ದಿಂದಾಗಿ 'ಕಾರ್ನ್‌ಲಾ' ನಿಷೇಧಗೊಂಡು ಅಮೇರಿಕಾದಿಂದ ಗೋಧಿಯನ್ನು ಆಮದು ಮಾಡಿಕೊಳ್ಳು ವಂತಾಯ್ತು. 1845 ಡಿಸೆಂಬರ್ 2 ರಂದು ಆತ ಗುಡುಗಿದ. 'ಬಂಡವಾಳಶಾಹಿಗರ ಕೃಷಿಗೆ ರಕ್ಷಣೆ ನೀಡುವುದು ಯಾವಾಗಲೂ ವಿಷಚಕ್ರವಿದ್ದಂತೆ.' ಇಂಗ್ಲಿಷ್ ಭೂಮಾಲೀಕರು ಮೆಕಾಲೆ ವಿರುದ್ಧ ಕೆಂಡ ಕಾರಿದರು. ಆದರೂ ಮೆಕಾಲೆ ಬಂಡವಾಳಶಾಹಿಗಳ ವಿರುದ್ಧ ಮಾತನಾಡಿ, 'ಸಾವಿರಾರು ಜನ ಮೂಲಭೂತ ಅಗತ್ಯಗಳಿಂದ ವಂಚಿತರಾಗಿರುವಾಗ ಕೆಲವರೇಕೆ ಬೀಯರ್ ಕುಡಿದು ಕುದುರೆ ಗಾಡಿಗಳಲ್ಲಿ ಸಾಗಬೇಕು?' (ಜಿಮ್ ಪಾವೆಲ್ ತನ್ನ ಪ್ರಸಿದ್ಧ ಲೇಖನ: ಬಿ.ಡಿ.ಮೆಕಾಲೆ: ಸ್ವಾತಂತ್ರ್ಯಕ್ಕಾಗಿ ಉಲ್ಲೇಖ) ಎಂದು ವಾದಿಸಿದ್ದನು. ಆದ್ದರಿಂದ ಈತನನ್ನು ಭಾರತದಲ್ಲಿ ಆಧುನಿಕ ಶಿಕ್ಷಣದ ರೂವಾರಿ ಎಂದು ಹೇಳಲೇಬೇಕಾಗುತ್ತದೆ.

1800ರಲ್ಲಿ ಲಾರ್ಡ್ ವೆಲ್ಲೆಸ್ಲಿ ಒಬ್ಬ ದಾರ್ಶನಿಕನಂತೆ ಬ್ರಿಟಿಷ್ ಸರ್ಕಾರದಲ್ಲಿ ಶೈಕ್ಷಣಿಕ ಯೋಜನೆಯನ್ನು ಜಾರಿಗೊಳಿಸುತ್ತಾನೆ. ಆತ ಮೊದಮೊದಲು ಆಡಳಿತಕ್ಕಾಗಿ 'ಸಿವಿಲ್ ಸರ್ವಿಸ್' ಅಧಿಕಾರಿಗಳಿಗಾಗಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ತಾವು ಮಾರ್ವಾಡಿ ಉದ್ದೇಶದಿಂದ ವಸಾಹತನ್ನು ಸ್ಥಾಪಿಸಲಿಲ್ಲ, ಬದಲು ಆಧುನಿಕ ನಾಗರಿಕತೆಯನ್ನು ಕಟ್ಟಿಕೊಡಲು ಬಂದಿದ್ದೇವೆಂದು ನಂಬಿಸುತ್ತಾನೆ. ಅನಂತರದಲ್ಲಿ ಇಲ್ಲಿನ ಸ್ಥಳೀಯರು ಸಹ ಈ ಶೈಕ್ಷಣಿಕ ತರಬೇತಿ ಪಡೆದು 'ಸಿವಿಲ್ ಸರ್ವೆಂಟ್ಸ್' ಆಗಬಹುದೆಂಬ ಹುಚ್ಚುಭ್ರಮೆಯನ್ನು ಕಟ್ಟಿ ಕೊಡುತ್ತಾನೆ. ಇಂತಹ ಪ್ರಕ್ರಿಯೆಯಲ್ಲಿ ತೊಡಗಿದವರೆಂದರೆ ಬ್ರಿಟಿಷರೊಡನೆ ಮಿಷನರಿಗಳು ಮತ್ತು ಓರಿಯಂಟಲಿಸ್ಟ್ ವಿದ್ವಾಂಸರು. ಈ ಅಂಶವನ್ನು ಈಗಾಗಲೇ ಗಮನಿಸಿದ್ದೇವೆ.

ಈ ಮೇಲಿನ ರೀತಿಯಲ್ಲೇ 'ಕನ್ನಡ ಭಾಷಾ' ಕ್ಷೇತ್ರದಲ್ಲೂ ನಡೆಯುತ್ತದೆ. 'ನಾಡಿನ ಆಡಳಿತ ವಹಿಸಿಕೊಂಡ ಬ್ರಿಟಿಷರ ದೃಷ್ಟಿಯಲ್ಲಿ ಆಗಿನ ದೇಶೀಯ ಶಿಕ್ಷಣ ಪದ್ಧತಿಯಲ್ಲಿದ್ದ ಮುಖ್ಯ ದೋಷಗಳೆಂದರೆ ಶಿಕ್ಷಣವು ಹೆಚ್ಚು ವ್ಯಾಪಕವಾಗಿರದೆ ಕೆಲವೇ ಜನ ಅದರ ಪ್ರಯೋಜನ ಪಡೆಯುತ್ತಿದ್ದಾರೆಂಬುದು ಒಂದು. ಇನ್ನು ಪ್ರಾಥಮಿಕ ಮಟ್ಟದ ಅಕ್ಷರ ಮತ್ತು ಗಣಿತದ ತಿಳುವಳಿಕೆ ಇಲ್ಲವೆ, ಕೆಲವೇ ಕಾವ್ಯಶಾಸ್ತ್ರ ಗ್ರಂಥಗಳ ಪಠಣ ಇಷ್ಟನ್ನು ಬಿಟ್ಟರೆ ಪ್ರಪಂಚದ ಅನೇಕ ಆಗುಹೋಗುಗಳ ಉಪಯುಕ್ತ ವಿಷಯಗಳ ಪರಿಜ್ಞಾನವು ಇಲ್ಲದೆ ಹೋದದ್ದು ಎರಡನೆಯ ಕೊರತೆಯಾಗಿ ಕಂಡಿತು' ಎಂದು ಡಾ.ಶ್ರೀನಿವಾಸ್ ಹಾವನೂರು ಹೇಳುವುದನ್ನು ಗಮನಿಸಬೇಕು.[6]

ಈ ಕೊರತೆಗಳನ್ನು ನೀಗಿಸುವ ಸಲುವಾಗಿ ಕನ್ನಡ ಪ್ರದೇಶಗಳಲ್ಲಿ ಕಾರ್ಯಪ್ರವೃತ್ತರಾದ ಮೊದಲಿಗ ರೆಂದರೆ ಮದ್ರಾಸಿನ ಮನ್ರೋ ಹಾಗೂ ಮುಂಬಾಯಿಯ ಎಲ್ಫಿನ್‌ಸ್ಟನ್. ಇವರಿಬ್ಬರು ಕ್ರಮವಾಗಿ 'ನೇಟಿವ್ ಸ್ಕೂಲ್ ಆ್ಯಂಡ್ ಬುಕ್ ಸೊಸೈಟಿ' ಮತ್ತು 'ಬಾಂಬೆ ಎಜ್ಯುಕೇಷನಲ್ ಸೊಸೈಟಿ'ಗಳನ್ನು ಆರಂಭಿಸುತ್ತಾರೆ. ಆದರೆ ಸುಮಾರು ಹತ್ತು ವರ್ಷಗಳ ನಂತರ (1826ರಲ್ಲಿ) ಧಾರವಾಡದಲ್ಲಿ ಒಂದು ಮರಾಠಿ ಶಾಲೆ ಆರಂಭವಾದಾಗ, ಧಾರವಾಡ ವಿಭಾಗಕ್ಕೆ ಅಸಿಸ್ಟೆಂಟ್ ಕಲೆಕ್ಟರ್‌ನಾದ ವಾಲ್ಟರ್ ಎಲಿಯೆಟ್ ಆಗಸ್ಟೆ ನೇಮಕಗೊಳ್ಳುತ್ತಾನೆ. ಈ ಮರಾಠಿ ಶಾಲೆಯನ್ನು ಗಮನಿಸಿದ ಆತ ಹೇಳುತ್ತಾನೆ, 'ಅದು ತಪ್ಪು, ಇಲ್ಲಿನ ಜನರ ಭಾಷೆ ಕನ್ನಡ. ಮಾತೃಭಾಷೆಯಲ್ಲಿಯೇ ಶಿಕ್ಷಣ ನಡೆಯಬೇಕಾದದ್ದು ನ್ಯಾಯವಾದ್ದದ್ದು' ಎಂದು ವರದಿ ಮಾಡಿದ್ದಲ್ಲದೆ ಒಂದು ಕನ್ನಡ ಶಾಲೆಯನ್ನು ಆರಂಭಿಸಿ ಮೂರು ವರ್ಷಕಾಲ ತಾನೇ ಅದರ

ವೆಚ್ಚವನ್ನು ವಹಿಸುತ್ತಾನೆ.[7] ಮುಂದೆ ಆತನ ನೇತೃತ್ವದಲ್ಲಿ ಕನ್ನಡ ಪಠ್ಯಪುಸ್ತಕಗಳು ರಚನೆಗೊಳ್ಳುತ್ತವೆ. 'ಈಸೋಪನ ನೀತಿ ಕಥೆಗಳು' 'ಗಣಿತ ಪುಸ್ತಕ-ಪೂರ್ಣಾಂಕ' ಮತ್ತು 'ಶಾಲಾಪದ್ಧತಿ' ಎಂಬ ಪುಸ್ತಕಗಳು ಬಳ್ಳಾರಿಯ ಮಿಷನ್ ಪ್ರೆಸ್‌ನಲ್ಲಿ ಮುದ್ರಣಗೊಳ್ಳುತ್ತವೆ. 'ಶಾಲಾಪದ್ಧತಿ' ಬ್ರಿಟಿಷ್ ಶಿಕ್ಷಣ ವಿಧಾನವನ್ನು ಪರಿಚಯಿಸುವ ಕೈಪಿಡಿಯಾಗಿ ಮರಾಠಿ, ಗುಜರಾತಿ ಬಾಷೆಗಳಿಗೂ ಅನುವಾದಗೊಳ್ಳುತ್ತದೆ. ಅಂದರೆ ವಸಾಹತುಶಾಹಿ ಶಿಕ್ಷಣ ಹೇಗೆ ತನ್ನ ಕಲಿಕಾ ಬೋಧೆಯನ್ನು ಚಲಾವಣೆಗೆ ತಂದಿತ್ತೆಂದು ತಿಳಿಯಬಹುದಾಗಿದೆ.

ಮುಂದೆ 1835ರಲ್ಲಿ ಮುಂಬೈ ಸರ್ಕಾರವು 'ಸದರ್ನ್ ಮರಾಠಾ' ಪ್ರದೇಶದ ಜನರ ಭಾಷೆ ಕನ್ನಡವಾದ್ದರಿಂದ ಕನ್ನಡದಲ್ಲಿಯೇ ಆಡಳಿತ ಮತ್ತು ಶಿಕ್ಷಣ ಕಾರ್ಯ ನಡೆಯಬೇಕು ಎಂಬ ನಿರ್ಣಯವನ್ನು ಸ್ವೀಕರಿಸುತ್ತದೆ. ಈ ಕಾರಣದಿಂದಲೇ 'ಕನ್ನಡಭಾಷೆ' ಎನ್ನುವುದು ಸಂಘಟನೆಗೊಳ್ಳುವುದು. (ಈ ಹಿಂದೆ ಈ ಅಂಶವನ್ನು ಗಮನಿಸಿದ್ದೇವೆ). ಇದು ಅವರ ಕಂದಾಯ ಮತ್ತು ಸಂಪನ್ಮೂಲಗಳ ಕ್ರೋಡೀಕರಣಕ್ಕೆ ಅತ್ಯವಶ್ಯವಾಗಿ ಬೇಕಿತ್ತಲ್ಲದೆ, ಕನ್ನಡ ಭಾಷೆ ಮಾತನಾಡುವವರು ಕಂದಾಯವನ್ನು ತಪ್ಪದೆ ಕಂಪನಿಗೆ ನೀಡುವುದನ್ನು ರೂಢಿಸಿಕೊಳ್ಳಬೇಕಿತ್ತು. ಈ ಭೂ ಕರದ ವಿರುದ್ಧ ನಡೆದಿರುವ ಪ್ರತಿಭಟನೆಗಳನ್ನು ಇಲ್ಲಿ ನೆನೆಯಬಹುದು. ಇದನ್ನು ಹೊರತುಪಡಿಸಿ ಕನ್ನಡ ಉದ್ಧಾರವಾಗಬೇಕೆಂಬ ಉದ್ದೇಶ ಅವರಿಗೇನೂ ಇರಲಿಲ್ಲ. ಇದೇ ಸಂದರ್ಭದಲ್ಲಿ ಮೈಸೂರಿನಲ್ಲಿ 1833ರಲ್ಲಿ ಇಂಗ್ಲಿಷ್ ಶಾಲೆಯೊಂದನ್ನು ಆರಂಭಿಸಲಾಗುತ್ತದೆ.

ಇದಲ್ಲದೆ ಮಿಷನರಿಗಳು ಬೆಂಗಳೂರಿನಲ್ಲಿ ತಮ್ಮ ಮತ ಪ್ರಚಾರಕ್ಕಾಗಿ ಒಂದು ಸೆಮಿನರಿಯನ್ನು ಆರಂಭಿಸುತ್ತಾರೆ. ಅಲ್ಲದೆ, 1834ರಲ್ಲಿ ಬೆಂಗಳೂರಿನ ಕಂಟೋನ್‌ಮೆಂಟ್‌ನಲ್ಲಿ ಥಾಮಸ್ ಹಡ್ಸನ್ ಎಂಬ ವೆಸ್ಲಿಯನ್ ಮಿಷನರಿ ಒಂದು ಇಂಗ್ಲಿಷ್ ಶಾಲೆಯನ್ನು ಆರಂಭಿಸುತ್ತಾನೆ. ವರ್ಷಾಂತ್ಯದಲ್ಲಿ ಕಮಿಷನರ್ ಕಬ್ಬನ್‌ನ ಅಧ್ಯಕ್ಷತೆಯಲ್ಲಿ 'ಪಬ್ಲಿಕ್' ಪರೀಕ್ಷೆ ನಡೆಯುತ್ತದೆ. ಆಗ "ವಿದ್ಯಾರ್ಥಿಗಳ ಪ್ರಗತಿಯನ್ನು ಕಂಡು 500 ರೂಪಾಯಿಗಳನ್ನಿತ್ತನಲ್ಲದೆ, ಕಾರ್ಯನಿಮಿತ್ತ ನಗರಕ್ಕೆ ಬಂದಿದ್ದ ಗೌರ್ನರ್ ಜನರಲ್ ಬೆಂಟಿಂಕ್‌ನಿಂದ 300 ರೂ.ಗಳ ದೇಣಿಗೆಯನ್ನು ಕೊಡಿಸುತ್ತಾನೆ. ಹಾಗೆಯೇ ಬಾಸೆಲ್ ಮಿಷನ್ನಿನವರು 1834ರಲ್ಲಿ ಮಂಗಳೂರು, 1837ರಲ್ಲಿ ಧಾರವಾಡಗಳಲ್ಲಿ ಶಾಲೆಗಳನ್ನು ಆರಂಭಿಸುತ್ತಾರೆ. ಹೀಗೆ ಪ್ರಾಥಮಿಕ ಶಾಲೆಗಳು 19ನೇ ಶತಮಾನದ ಮಧ್ಯಭಾಗದ

ಹೊತ್ತಿಗೆ ಉದಯವಾಗಿ ಅಲ್ಲಿ ಕನ್ನಡ ಅಕ್ಷರಗಳನ್ನು ಪ್ರಧಾನ ನಗರ ಪಟ್ಟಣಗಳಲ್ಲಿ ಸಾರ್ವತ್ರಿಕವಾಗಿ ಕಲಿಸಿಕೊಡಲಾಗುತ್ತದೆ.

ಇನ್ನು ವಸಾಹತುಶಾಹಿ ಶಿಕ್ಷಣದ ದ್ವಿತೀಯ ಘಟ್ಟವನ್ನು ಗಮನಿಸುವಾಗ 1854–55ರಲ್ಲಿ ಏಕರೂಪದ ಶಿಕ್ಷಣ ನೀತಿ ಸಿದ್ಧವಾಗಿ ಅದಕ್ಕೆ ಪ್ರತ್ಯೇಕ ಇಲಾಖೆ ಅಸ್ತಿತ್ವಕ್ಕೆ ಬರುತ್ತದೆ. ಆ ಮೂಲಕ ಸರ್ಕಾರ ಅನುದಾನವನ್ನು ನೀಡತೊಡಗುತ್ತದೆ. ಆದರೆ ಹೀಗೆ ಆರಂಭವಾದ ಶಿಕ್ದಣ ನೀತಿಗೆ ಪ್ರತಿರೋಧವಿರಲಿಲ್ಲವೆಂದು ಭಾವಿಸಬೇಕಿಲ್ಲ. 19ನೇ ಶತಮಾನದ ಬ್ರಿಟಿಷ್ ಇಂಡಿಯಾ ಅನೇಕ ರೀತಿಯ ಚಳುವಳಿ ಹೋರಾಟಗಳನ್ನು ಕಾಣುತ್ತದೆ. 1857ರಲ್ಲಿ ಆ ಎಲ್ಲಾ ಚಳುವಳಿಗಳು ಒಂದಾದಂತೆ ಮೊದಲ ಸ್ವಾತಂತ್ರ್ಯ ಹೋರಾಟವನ್ನು ದೊಡ್ಡದಾಗಿ ಬಿಂಬಿಸಲಾಗಿದೆ. ಅಲ್ಲದೆ ಈ ಹೋರಾಟವನ್ನೂ ಸಹ ಹತ್ತಿಕ್ಕಿದ ವಸಾಹತುಶಾಹಿ ಅದೇ ವರ್ಷ ಕಲ್ಕತ್ತಾ, ಮದ್ರಾಸ್, ಮುಂಬಯಿಗಳಲ್ಲಿ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಿ ಶೈಕ್ಷಣಿಕ ಕೆಲಸವನ್ನು ತೀವ್ರಗೊಳಿಸುತ್ತದೆ. 1861ರ ವೇಳೆಗೆ ಮೈಸೂರು ಸಂಸ್ಥಾನದಲ್ಲಿ ಮೊಟ್ಟ ಮೊದಲ ಶಿಕ್ಷಕ ತರಬೇತಿ ಕೇಂದ್ರ ಆರಂಭವಾಗುತ್ತದೆ.

'ಮೈಸೂರು ಶಿಕ್ಷಣಾಭಿವೃದ್ಧಿಯ ಕಾರ್ಯದಲ್ಲಿ ನಡೆದ ಇನ್ನೆರಡು ಮಹತ್ವದ ಘಟನೆಗಳೆಂದರೆ ಕ್ರಿ.ಶ.1887ರಲ್ಲಿ ಓರಿಯಂಟಲ್ ಲೈಬ್ರಿ ಮತ್ತು ಕ್ರಿ.ಶ.1884ರಲ್ಲಿ ಪ್ರಾಚ್ಯವಸ್ತು ಸಂಶೋಧನಾ ಕಾರ್ಯಾಲಯ ಇವುಗಳ ಸ್ಥಾಪನೆ. ಓರಿಯಂಟಲ್ ಲೈಬ್ರಿಯು ತನ್ನ ಆರಂಭದ ಏಳೂ ವರ್ಷಗಳಲ್ಲಿಯೇ 1358 ಹಸ್ತಪ್ರತಿಗಳನ್ನು ಮತ್ತು 1653 ಮುದ್ರಿತ ಕನ್ನಡ, ಸಂಸ್ಕೃತ ಕೃತಿಗಳನ್ನು ಕಲೆ ಹಾಕಿದುದಿದೆ. ಪ್ರಾಚ್ಯ ವಾಂಙ್ಮಯದ ನಿಕ್ಷೇಪದಂತಿದ್ದ ಈ ಲೈಬ್ರಿಯು ಕ್ರಿ.ಶ.1891ರಿಂದ ಕೊಳ್ಳುವ ಸೌಕರ್ಯವಿದ್ದುದರಿಂದ ವಾಂಙ್ಮಯದ ಕುರಿತಾದ ಸಂಶೋಧನೆಗೆ ನೆರವು ಸಂದಿತು"[8] ಎಂದು ಶ್ರೀನಿವಾಸ್ ಹಾವನೂರು ಹೇಳುತ್ತಾರೆ. ಕ್ರಿ.ಶ.1864–65ರಲ್ಲಿ ಇವುಗಳ ಮಾರಾಟ ಸಂಖ್ಯೆಯು 5200 ಪ್ರತಿಗಳದ್ದಾದರೆ, ಎರಡೇ ವರ್ಷಗಳ ಅಂತರದಲ್ಲಿ ಎಂದರೆ ಕ್ರಿ.ಶ.1867–68ರಲ್ಲಿ ಸುಮಾರು 27 ಸಾವಿರ ಕನ್ನಡ ಪಠ್ಯಗಳು ವಿಕ್ರಯವಾದು ವೆಂಬುದನ್ನು ಗಮನಿಸಿದರೆ, ಶಿಕ್ಷಣ ಪ್ರಸಾರ ಅದೆಷ್ಟು ಭರದಿಂದ ಸಾಗಿದ್ದಿತೆಂಬುದನ್ನು ಕಂಡುಕೊಳ್ಳಬಾರದು"[9] ಎನ್ನುವ ಶ್ರೀನಿವಾಸ್ ಹಾವನೂರವರು ಒಂದೇ ಉಸಿರಿಗೆ 'ಇಂತು ನವೋದಯ ಕಾಲದಲ್ಲಿ ಶಿಕ್ಷಣವು ವ್ಯಾಪಕವಾಗುತ್ತ ನಡೆದಂತೆಲ್ಲ, ಸಾಹಿತ್ಯ ಕೃಷಿಯೂ ಹೆಚ್ಚಾಯಿತು. ಕನ್ನಡ ಅಧ್ಯಯನದ ಮೂಲಕ ಕನ್ನಡ ನುಡಿ, ನಾಡುಗಳ ಬಗ್ಗೆ

ಅಭಿಮಾನವು ಬೆಳೆದು ಇಪ್ಪತ್ತನೆಯ ಶತಮಾನದಲ್ಲಿ ಕಂಡುಬರುವ ವಿಕಾಸಕ್ಕೆ ಮಾರ್ಗವನ್ನು ಸಿದ್ಧಗೊಳಿಸಿತು' ಎನ್ನುತ್ತಾರೆ.

ಹೀಗೆ ಪಾಶ್ಚಿಮಾತ್ಯ ಶಿಕ್ಷಣ ಕ್ರಮವು ವಸಾಹತುಗೊಳಪಟ್ಟವರಲ್ಲಿ ರೋಮಾಂಚನ ಮನೋಭಾವವನ್ನು ಹುಟ್ಟಿಸುತ್ತದೆ. ಹೊಸ ವೈಚಾರಿಕ ಶಕ್ತಿಯು ಸುಧಾರಣಾವಾದಿ ಮನೋಧರ್ಮವನ್ನು ಎಲ್ಲರಲ್ಲೂ ಪಳಗಿಸುತ್ತದೆ. ಇದರ ಪರಿಣಾಮವಾಗಿ ಶಿಕ್ಷಿತ ಮನಸ್ಸು ರಾಷ್ಟ್ರೀಯ ಹೋರಾಟದ ಚುಕ್ಕಾಣಿಯನ್ನು ಹಿಡಿಯುತ್ತದೆ. ಅಂದರೆ ಏಕಕಾಲಕ್ಕೆ ವಸಾಹತುಶಾಹಿ ಆಡಳಿತದಿಂದ ಆಧುನಿಕವಾಗುತ್ತ ವಸಾಹತೀಕರಣದ ವಿರುದ್ಧ ಹೋರಾಡಬೇಕಾದ ತಾರ್ಕಿಕ ಜವಾಬ್ದಾರಿಯನ್ನು ಇವರು ಹೊರುತ್ತಾರೆ. ಹಾಗಾಗಿ ಪರಂಪರೆ ಮತ್ತು ಆಧುನಿಕತೆಯ ಮಧ್ಯೆ ಒಂದು ರೀತಿಯ ಸಾಮರಸ್ಯವನ್ನು ಇವರು ಅಳವಡಿಸಿಕೊಳ್ಳುತ್ತಾರೆ.

ಫ್ರಾಂಕ್‌ಕೊಲನ್ ಗುರುತಿಸುವಂತೆ ಕುಲೀನ ವರ್ಗಗಳ ಹಿಂದೂಗಳೇ ಶೈಕ್ಷಣಿಕ ಪ್ರಯೋಜನವನ್ನು ಪಡೆದುಕೊಂಡಿದ್ದರು. ಇದರಿಂದಾಗಿ ಇಂಗ್ಲೀಷ್ ವಿದ್ಯಾಭ್ಯಾಸವನ್ನು ಪಡೆದ ಅವರು ಸರ್ಕಾರಿ ಉದ್ಯೋಗಕ್ಕೆ ಮಾರ್ಗವನ್ನು ಕಂಡುಕೊಳ್ಳುತ್ತಾರೆ. ಇವರಲ್ಲಿ ದಕ್ಷಿಣ ಕನ್ನಡದ ಸಾರಸ್ವತ ಬ್ರಾಹ್ಮಣರು ಮುಖ್ಯರಾದವರು. ಇವರು "ರೋಮಾಂತಕದಿಂದ ತಡವಾಗಿ ಬಂದ ಕೊಂಕಣಸ್ಥರಲ್ಲಿ ಕೆಳದಿ ಅರಸರ ಕೈಕೆಳಗೆ ಕರಣಿಕ, ಶಾನುಭೋಗ ವೃತ್ತಿಯನ್ನು ನಡೆಸುತ್ತಿದ್ದ ಒಂದು ವರ್ಗ ತನ್ನ ಉನ್ನತಿಕೆಯಿಮದ ಉಳಿದ ಕೊಂಕಣಸ್ಥರಿಂದ ಬೇರೆಯಾಗಿ ಪ್ರತ್ಯೇಕ ಮಠ ಸ್ಥಾಪಿಸಿ ಚಿತ್ರಾಪುರ ಮಠಕ್ಕೆ ಸೇರಿದ ಸಾರಸ್ವತ ಬ್ರಾಹ್ಮಣರೆಂದು ತಾವೆಂದು ಕೊಂಡರೆಂದು ಇವರನ್ನು ಕುರಿತು ಕೊಂಕಣಿ ದೃಷ್ಟಿಕೋನದಿಂದ ಬರೆಯಲಾದ ಸಾರಸ್ವತ ಸಮಾಜವೆಂಬ ಪುಸ್ತಕದಲ್ಲಿ ಹೇಳಲಾಗಿದೆ."[10] ಹೀಗೆ ಈ ಜಾತಿ ಸಮುದಾಯವು ಪ್ರಗತಿಗಾಮಿ ಧೋರಣೆಯನ್ನು ತಮ್ಮ ಸಮುದಾಯಕ್ಕೆ ಅನ್ವಯಿಸಿಕೊಂಡರಲ್ಲದೆ ಇತರ ಸಮುದಾಯಗಳಿಗೆ ಅವರು ವರ್ಣಾಶ್ರಮ ಧಾರ್ಮಿಕ ನಂಬಿಕೆಗಳನ್ನೇ ಅನುಸರಿಸಲು ಕರೆ ಕೊಡುತ್ತಾರೆ. ಆದರೆ ತಮ್ಮ ವಲಸೆಯ ಅನುಭವದಿಂದಾಗಿ ಅವರು ಬ್ರಿಟಿಷ್ ಸರ್ಕಾರದ ಒಟ್ಟಿಗೆ ಅಂತಹ ಸಂಘರ್ಷಕ್ಕೇನು ಇಳಿಯದೆ ತಮ್ಮ ಜಾತಿಯನ್ನು ಬದಲಾದ ಸನ್ನಿವೇಶಕ್ಕೆ ತಕ್ಕ ಹಾಗೆಯೇ ಸಂಘಟಿಸಿಕೊಳ್ಳುತ್ತಾರೆ. ಅದರಿಂದಾಗಿಯೇ 1870ರಲ್ಲಿ ಬ್ರಹ್ಮಸಮಾಜದ ಸ್ಥಾಪನೆಯನ್ನು ಕೈಗೊಳ್ಳುತ್ತಾರೆ. ಇಲ್ಲಿ ವ್ಯಕ್ತಿವಾದಿ ಸಿದ್ಧಾಂತವನ್ನು ತಮ್ಮ ಸಾಮುದಾಯಿಕ ನೈತಿಕತೆಯನ್ನು ಕಟ್ಟಿಕೊಳ್ಳಲು ಉಪಯೋಗಿಸುತ್ತಾರೆ. ಹೀಗೆ ವಸಾಹತುಶಾಹಿ ಆಡಳಿತದ

ಪರಿಣಾಮಗಳನ್ನು ಇವರು ಮೊತ್ತಮೊದಲು ಅನುಭವಿಸಿದ ಕಾರಣ ಆಧುನಿಕ ಕನ್ನಡ ಸಾಹಿತ್ಯದ ಕಾದಂಬರಿಗಳು ಸಹ ಇವರ ಸುಧಾರಣಾವಾದಿ ಮನೋಭಾವದಿಂದಲೇ ಹುಟ್ಟುತ್ತವೆ. ಗುಲ್ವಾಡಿ ವೆಂಕಟರಾಯರು ಈ ಪಂಥಕ್ಕೆ ಸೇರಿದವರೇ ಆಗಿದ್ದರು.

### 3.3.2 ಮಹಿಳಾ ಶಿಕ್ಷಣ

ಸ್ತ್ರೀಯರ ಆಧುನಿಕ ವಿದ್ಯಾಭ್ಯಾಸದ ಚರಿತ್ರೆಯನ್ನು ತೆಗೆದುಕೊಂಡರೆ 19ನೇ ಶತಮಾನದ ಆದಿಭಾಗವು ಭಾರತೀಯ ಸ್ತ್ರೀಯರನ್ನು ಕಠಿಣವಾಗಿ ಕಾಣುವುದಿತುತ. 1813ರ ಚಾರ್ಟರ್ ಆಕ್ಟ್ ಪ್ರಕಾರ ಈಸ್ಟ್ ಇಂಡಿಯಾ ಕಂಪನಿಯು ಭಾರತೀಯರನ್ನು ವಿದ್ಯಾವಂತರನ್ನಾಗಿ ಮಾಡುವ ಜವಾಬ್ದಾರಿಯನ್ನು ವಹಿಸಿಕೊಂಡಿತು. ಆದರೆ ಇದನ್ನು ಕಾರ್ಯರೂಪಕ್ಕೆ ತರುವಾಗ ಕಂಪನಿಯು ಪ್ರಾಚೀನ ಮಾರ್ಗಾನುಸಾರಿಗಳಾದ ಸದಸ್ಯರು ಕೇವಲ ಗಂಡಸರು ಮಾತ್ರ ವಿದ್ಯೆ ಕಲಿಯುವಂತೆ ನಿಯಂತ್ರಿಸಿದರು. ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಯಾಔ ನೇರ ಕ್ರಮವನ್ನೂ ಅನುಸರಿಸಲು ನಿರಾಕರಿಸಿದರು. ಬಾಲಕಿಯರಿಗೆ ಪ್ರತ್ಯೇಕವಾಗಿ ಸ್ಥಾಪಿಸಲ್ಪಟ್ಟ ಖಾಸಗಿ ಶಾಲೆಗಳಿಗೆ ಆರ್ಥಿಕ ಸಹಾಯವನ್ನು ನೀಡಲು ನಿರಾಕರಿಸಿದರು.

ಹೀಗಿರುವಲ್ಲಿ ಆಧುನಿಕ ಶಿಕ್ಷಣ ಪ್ರಚಾರಗೊಳ್ಳುತ್ತಿದ್ದಂತೆ ಹಲವಾರು ಮಂದಿ ಸ್ಥಳೀಯರು ಅದರ ಮಹತ್ವವನ್ನು ಮನಗಂಡು ನರಸಿಂಹ ಅಯ್ಯಂಗಾರ್ ಎಂಬುವರು ಈ ಮಹಿಳಾ ಶಿಕ್ಷಣದ ಮುಂಚೂಣಿಯಲ್ಲಿ ನಿಂತು ಕೆಲ ಹಿಂದೂಗಳ ಸಭೆ ಕರೆದು ಮೇಲ್ಜಾತಿ ಹುಡುಗಿಯರಿಗಾಗಿ ಶಾಲೆಯೊಂದನ್ನು ತೆರೆಯುವ ಬಗೆಗೆ ಹಾಗೂ ಸಾರ್ವಜನಿಕರಿಂದ ದೇಣಿಗೆ ಪಡೆದು ಅದನ್ನು ನಡೆಸುವ ಬಗೆಗೆ ಚರ್ಚಿಸಿದರು.

ಹೆಚ್ಚಿನ ಸಾರ್ವಜನಿಕ ಬೆಂಬಲವಾಗಲಿ, ಸಹಾನುಭೂತಿಯಾಗಲಿ ಇರದ ಈ ಶಾಲೆ 1818ರಲ್ಲಿ ಮೈಸೂರಿನಲ್ಲಿ ಅಸ್ತಿತ್ವಕ್ಕೆ ಬಂದಾಗ ಅದರಲ್ಲಿ 28 ಜನ ವಿದ್ಯಾರ್ಥಿನಿಯರಿದ್ದರು. ಈ ಶಾಲೆಗೆ ಇರಬಹುದಾದ ವಿರೋಧದ ಬಗ್ಗೆ ಶಾಲಾ ಆಡಳಿತವರ್ಗ ಎಷ್ಟು ಭಯಭೀತವಾಗಿತ್ತೆಂದರೆ ದೇಶೀ ಪದ್ಧತಿಗಳಿಗೆ ವಿರುದ್ಧವಾದ ಹಾಗೂ ದೇಶೀ ಭಾವನೆಳಿಗೆ ಸಮ್ಮತವಾಗದ ಯಾವುದೇ ವಿಷಯವೂ ಈ ಶಾಲೆಯಲ್ಲಿ ಸುಳಿಯುವಂತಿರಲಿಲ್ಲ. ಈ ಶಾಲೆಯ ಧ್ಯೇಯವೆಂದರೆ 'ಹುಡುಗಿಯರನ್ನು ನಿಷ್ಠಾವಂತಿಕೆಯ ಸಮರ್ಪಣಾ ಮನೋಭಾವದವರನ್ನಾಗಿ ಪ್ರೇಮಮಯಿಯಾದ ಮಡದಿಯರನ್ನಾಗಿ

ಅಕ್ಕರೆಯ ತಾಯಂದಿರಾಗಿ ಬೆಳೆಯುವಂತೆ ಮಾಡುವಲ್ಲಿ ಯಶಸ್ವಿಯಾಗುವುದು'. ಪ್ರಾಥಮಿಕ ತರಗತಿಗಳಲ್ಲಿ ಕೇವಲ ಕನ್ನಡವನ್ನಷ್ಟೇ ಹೇಳಿಕೊಡಲಾಗುತ್ತಿತ್ತು. ಇದಕ್ಕೆ ಕಾರಣ, ಪಶ್ಚಿಮದ ಶಿಕ್ಷಣ ದೇಶೀ ಸಂಪ್ರದಾಯವನ್ನು ಕದಲಿಸಬಲ್ಲ ವಿಷಯಗಳನ್ನೊಳಗೊಂಡಿರುತ್ತದೆ ಎಂಬ ಬಿಲುವು. ಹೀಗಿದ್ದರೂ, ಕೇವಲ ಬಡ ಬ್ರಾಹ್ಮಣರು ಮಾತ್ರ ತಮ್ಮ ಹೆಣ್ಣು ಮಕ್ಕಳನ್ನು ಶಾಲೆ ಬಿಡಿಸಲಾರಂಭಿಸಿದ್ದು ಹೊಸ ಸಮಸ್ಯೆಯನ್ನು ತಂದೊಡ್ಡಿತು. ಇದು ಶಾಲೆಯ ಬೆಳವಣಿಗೆ ಹಾಗೂ ಹೆಣ್ಣುಮಕ್ಕಳ ಪ್ರೌಢಶಾಲಾ ಹಾಗೂ ಅನಂತರದ ವಿದ್ಯಾಭ್ಯಾಸಕ್ಕೂ ತಡೆಯಾಯಿತು.

ಆದರೆ ನರಸಿಂಹ ಅಯ್ಯಂಗಾರ್ ಪಟ್ಟುಬಿಡದೆ ಮನೆಯಲ್ಲೇ ಪಾಠ ಹೇಳಿಕೊಡಲು ಪಂಡಿತರನ್ನು ನೇಮಿಸಿದ್ದರು. ಕ್ರಮೇಣವಾಗಿ ಶಾಲೆಯ ಬಗ್ಗೆ ಸಾರ್ವಜನಿಕ ಅಭಿಪ್ರಾಯ ಬದಲಾಗತೊಡಗಿತು. ತರುವಾಯ ಶಾಲೆಯ ವಿದ್ಯಾರ್ಥಿನಿಯರ ಸಂಖ್ಯೆಯೂ ಹೆಚ್ಚತೊಡಗಿತು. 1885 ಹಾಗೂ 1888 ರಲ್ಲಿ ಕ್ರಮವಾಗಿ ಮೇಲುಕೋಟೆ ಹಾಗೂ ನಂಜನಗೂಡುಗಳಲ್ಲೂ ಒಂದೊಂದು ಶಾಲೆಗಳು ಆರಂಭವಾದವು. ಈ ಶಾಲೆಗಳು ಬ್ರಾಹ್ಮಣ ಹುಡುಗಿಯರಿಗಷ್ಟೇ ಮೀಸಲಾಗಿದ್ದವು ಹಾಗೂ ಮೇಲ್ವರ್ಗಗಳಲ್ಲಿ ಶಾಲಾ ಆಡಳಿತ ವರ್ಗಕ್ಕೆ ಸೇರಿದವರ ಹೆಣ್ಣುಮಕ್ಕಳು ಮತ್ತು ಸಂಬಂಧಿಕರು ಮಾತ್ರ ಈ ಶಾಲೆಗಳಿಗೆ ಸೇರಬಹುದಾಗಿತ್ತು. ಇವರನ್ನು ಬಿಟ್ಟರೆ ಉಳಿದವರಿಗೆ ಇಲ್ಲಿ ಶಿಕ್ಷಣದ ಅವಕಾಶವಿರಲಿಲ್ಲ. 1887ರಲ್ಲಿ ಮಹಿಳಾ ಬೋಧಕರನ್ನು ರೂಪಿಸುವ ಸಲುವಾಗಿ ಶಿಕ್ಷಕ ತರಬೇತಿ ತರಗತಿಯೊಂದು ಆರಂಭಗೊಂಡಿತು. 1891ರಲ್ಲಿ ಸರ್ಕಾರ ಈ ಶಾಲೆಯನ್ನು ವಹಿಸಿಕೊಂಡಿತು. ಈ ಶಾಲೆಯಲ್ಲಿ ಎಲ್ಲಾ ಹಿಂದುಗಳಿಗೂ ಪ್ರವೇಶವಿತ್ತಾದರೂ ಅಸ್ಪೃಶ್ಯರಿಗೆ ಮಾತ್ರ ಪ್ರವೇಶದ ಅವಕಾಶವಿರಲಿಲ್ಲ.

ಆದರೆ, ಮೈಸೂರು ನಗರದಿಂದಾಚೆಗಿನ ಜನರಿಗೆ ಈ ಶಾಲೆಯ ಬಗೆಗೆ ಗೊತ್ತೇ ಇರಲಿಲ್ಲ. ಆದರೆ ಮೈಸೂರಿನಲ್ಲಿ ಈ ಶಾಲೆ ಕುರಿತಂತೆ ಹಲವುಬಗೆಯ ಪ್ರತಿರೋಧಗಳಿದ್ದವು. ರಾಜಕೀಯ ಹಾಗೂ ಆಡಲಿತಾತ್ಮಕ ವಿಷಯಗಳಲ್ಲಿ ಉದಾರವಾದಿಯಾಗಿದ್ದ ದಿವಾನ್ ರಂಗಾಚಾರ್ಯ ಸಾಮಾಜಿಕ ವಿಷಯಗಳಲ್ಲಿ ಸಂಪ್ರದಾಯ ವಾದಿಯಾಗಿದ್ದಂತೆ ತೋರುತ್ತದೆ. ಶಾಲೆಗಳಲ್ಲಿ ಸಂಗೀತ ಕಲಿಸುವುದನ್ನು ಮಹಿಳೆಯರು ಒಪ್ಪುತ್ತಿಲ್ಲವೆಂಬ ಸಂಗತಿಯನ್ನು ತಮ್ಮ ಪತ್ನಿಯಿಂದ ಕೇಳಿ ತಿಳಿದ ದಿವಾನರು ಶಾಲೆಗೆ ಭೇಟಿಕೊಟ್ಟು ಸಂಗೀತ ಬೋಧಕರನ್ನೇ ಶಾಲೆಯಿಂದ ವಜಾ ಮಾಡುವಂತೆ ಆಜ್ಞೆ ಮಾಡಿದರು. ಈ ಸಂಗೀತ ಕಲಿಕೆಯ ಮಹತ್ವವನ್ನು ದಿವಾನರಿಗೆ ವಿವರಿಸಲು ನರಸಿಂಹ

ಅಯ್ಯಂಗಾರ್ ಬಹು ಕಷ್ಟಪಟ್ಟರು. ಕೊನೆಗೆ ದಿವಾನರ ಪತ್ನಿಗೆ ಈ ಕುರಿತು ಅರ್ಥವಾದ ನಂತರವೇ ದಿವಾನರೂ ಒಲ್ಲದ ಮನಸ್ಸಿನಿಂದ ಸುಮ್ಮನಾದದ್ದು.

ಈ ಶಾಲೆಗೆ ಅನುದಾನ ಕೊಡುವಷ್ಟು ಉದಾರವಾಗಿದ್ದ ಮಹಾರಾಜರು ಶಾಲೆಯ ಬಗ್ಗೆ ಹೆಚ್ಚಿನ ಆಸಕ್ತಿಯನ್ನೇನೂ ತೋರಲಿಲ್ಲ. ತೀರಾ ಸಂಪ್ರದಾಯವಾದಿಯಾಗಿದ್ದ ಅವರು ಯೂರೋಪಿನ ಪ್ರವಾಸ ಕೈಗೊಳ್ಳುವ ತಮ್ಮ ಬಯಕೆಯನ್ನೇ ಹತ್ತಿಕ್ಕಿಕೊಂಡು ಆ ಪ್ರವಾಸವನ್ನೇ ರದ್ದು ಮಾಡಿದ್ದರು. ಸಮುದ್ರ ಪ್ರಯಾಣ ಮಾಡಿದವರಿಗೆ ಆ ಕಾಲದಲ್ಲಿ ಸಂಪ್ರದಾಯಸ್ಥರು ವಿಧಿಸುತ್ತಿದ್ದ ಜಾತಿ ಬಹಿಷ್ಕಾರದ ಬಗೆಗಿನ ಭಯವೇ ಇದಕ್ಕೆ ಕಾರಣ. ಸಮುದ್ರ ದಾಟಿ ವಾಪಸ್ಸು ಬಂದ ಬ್ರಾಹ್ಮಣನೊಬ್ಬ 'ಶುದ್ಧೀಕರಣ'ಗೊಳ್ಳಲು ಅವಕಾಶ ನೀಡಿದ ಪ್ರಸಂಗವೊಂದು ಅಷ್ಟು ಹೊತ್ತಿಗಾಗಲೇ ಜರುಗಿದ್ದರೂ ಮಹಾರಾಜರು ಮಾತ್ರ ತಮ್ಮ ಭಯವನ್ನು ಮೀರಲಾಗಲೇ ಇಲ್ಲ. ಇಲ್ಲೊಂದು ಕುತೂಹಲಕರ ಅಂಶವನ್ನು ಪ್ರಸ್ತಾಪಿಸಬಹುದು. 1870ರ ದಶಕದಲ್ಲಿ ಮೀನಾಕ್ಷಿ ಅಯ್ಯರ್ ಎಂಬುವವರನ್ನು ಹೀಗೆ 'ಶುದ್ಧೀಕರಿಸಿ' ಜಾತಿಗೆ ಮರುಸೇರ್ಪಡೆ ಮಾಡುವ ಪ್ರಯತ್ನ ವಿಫಲವಾಗಿತ್ತು. ಸಂಪ್ರದಾಯವಾದಿಯಾಗಿದ್ದ ದಿವಾನ್ ರಂಗಾಚಾರ್ಲುರಂಥವರ ಬೆಂಬಲವಿದ್ದರೂ ಈ ಪ್ರಯತ್ನ ವಿಫಲವಾಗಿತ್ತು. ವರ್ಷಗಳು ಉರುಳಿದಂತೆ ಈ ರೀತಿಯ ಸಮುದ್ರಯಾನದಿಂದ ಬರುವ ಲೌಕಿಕ ಲಾಭಗಳು ಹೆಚ್ಚಿದಂತೆ ಮಡಿವಂತರು ಬರಬರುತ್ತಾ ಇದನ್ನು ಒಪ್ಪಿಕೊಳ್ಳಬೇಕಾಯಿತು.

ಮಹಿಳಾ ಶಿಕ್ಷಣಕ್ಕೆ ವಿರೋಧಿಯಾಗಿದ್ದ ಮಡಿವಂತ ವರ್ಗಗಳ ಜನ ನರಸಿಂಹ ಅಯ್ಯಂಗಾರ್ ಅವರ ವಿರುದ್ಧ ಕೆಟ್ಟ ಗಾಳಿಸುದ್ದಿಗಳನ್ನು ಹಬ್ಬಿಸುವ ಮಟ್ಟಕ್ಕೂ ಹೋದರು. ಈ ಗಾಳಿಸುದ್ದಿಗಳಲ್ಲಿ ಮಹಾರಾಜರ ಹೆಸರನ್ನು ತುರುಕುವುದಕ್ಕೂ ಅವರು ಹೇಸಲಿಲ್ಲ. ಐಯ್ಯಂಗಾರ್ ಅವರ ಆತ್ಯಂತಿಕ ಬದ್ಧತೆ, ಸರ್ಕಾರಿ ಅನುದಾನ ಹಾಗೂ ಅಂತಿಮವಾಗಿ ಸರ್ಕಾರವೇ ಶಾಲೆಯನ್ನು ನಡೆಸಲು ಮಾಡಿದ ನಿರ್ಧಾರ ಇವಿಲ್ಲದಿದ್ದರೆ ವಿರೋಧಿಗಳು ಶಾಲೆಯನ್ನು ಮುಚ್ಚಿಸುವಲ್ಲಿ ಯಶಸ್ವಿಯಾಗಿಬಿಡುತ್ತಿದ್ದರೆಂದೇ ಹೇಳಬೇಕು.

ಆದರೂ ಮೈಸೂರಿನ ಹೊರಗಿನ ಉದಾರವಾದಿ ಯೂರೋಪಿಯನ್ನರು ಇತರ ಕೆಲವು ಪ್ರತಿಷ್ಠಿತರು ಹಾಗೂ ಪತ್ರಿಕೆಗಳು ಈ ಶಾಲೆಗೆ ಬೆಂಬಲ ವ್ಯಕ್ತಪಡಿಸಿ ಮಾತಾಡುತ್ತಿದ್ದರು. ವೇಲ್ಸ್‌ನ ರಾಜ ರಾಣಿಯರಿಂದ ಹಿಡಿದು ಬರೋಡಾ ಸಂಸ್ಥಾನದ ರಾಜರಾಣಿಯರಿಗೆ ಶಾಲೆಗೆ ಭೇಟಿ ನೀಡಿದ

ಎಲ್ಲರೂ ಶಾಲೆಯನ್ನು ಕುರಿತು ಮೆಚ್ಚುಗೆ ವ್ಯಕ್ತಪಡಿಸಿದ್ದರು. 1891ರ ನಂತರ ಸರ್ಕಾರದ ಬೇರೆ ಬೇರೆ ಪಟ್ಟಣಗಳಲ್ಲೂ ಬಾಲಕಿಯರ ಶಾಲೆಗಳನ್ನಾರಂಭಿಸಿತು. ದಾನಿಗಳು ಉದಾರವಾಗಿ ಕೊಡುಗೆ ನೀಡಲು ಮುಂದೆ ಬಂದರು. 1894ರ ಹೊತ್ತಿಗೆ ಸರ್ಕಾರ 61,072 ರೂಪಾಯಿಗಳನ್ನು ಈ ಶಾಲೆಗಾಗಿ ವೆಚ್ಚ ಮಾಡಿದ್ದರೆ ಸಾರ್ವಜನಿಕ ದೇಣಿಗೆಯಾಗಿ 35760 ಸಂಗ್ರಹವಾಯಿತು. ಆ ಹೊತ್ತಿಗಾಗಲೇ ರಾಜ್ಯದಲ್ಲಿ 140 ಬಾಲಕಿಯರ ಶಾಲೆಗಳಿದ್ದವು. ಅವುಗಳಲ್ಲಿ ಸರ್ಕಾರಿ, ಅನುದಾನಿತ ಹಾಗೂ ಖಾಸಗಿ ಶಾಲೆಗಳೂ ಸೇರಿದ್ದವು. ಒಟ್ಟಿನಲ್ಲಿ 1854ರ ಹೊತ್ತಿಗೆ ಒಂದು ಪ್ರತ್ಯೇಕ ಸಾರ್ವಜನಿಕ ಶಿಕ್ಷಣ ಇಲಾಖೆ ಅಸ್ತಿತ್ವಕ್ಕೆ ಬರುವ ಮೂಲಕ ಶಿಕ್ಷಣ ಸಾರ್ವತ್ರಿಕವಾಗುವತ್ತ ಮೊದಲ ಹೆಜ್ಜೆಯಿಡುತ್ತದೆ.

ಇದಲ್ಲದೆ ನಾಲ್ವಡಿ ಕೃಷ್ಣರಾಜ ಒಡೆಯರು ಮೈಸೂರು ವಿಶ್ವವಿದ್ಯಾಲಯವನ್ನು ಆರಂಭಿಸಿದರಲ್ಲದೆ ಅವರೇ ಅದರ ಪ್ರಥಮ ಕುಲಪತಿಗಳೂ ಆಗಿ ಶಿಕ್ಷಣದ ಪ್ರಗತಿಯಲ್ಲಿ ತಮ್ಮನ್ನೇ ತೊಡಗಿಸಿಕೊಂಡರು. ಇವರ ಕಾಲದಲ್ಲೇ ಭಾರತೀಯ ವಿಜ್ಞಾನ ಸಂಸ್ಥೆಯು ಸಹ ಬೆಂಗಳೂರಿನಲ್ಲಿ ತನ್ನ ಕಾರ್ಯವನ್ನು ಆರಂಭಿಸಿತು. 1911ರಲ್ಲಿ ಅದಕ್ಕಾಗಿ 371 ಎಕರೆ ಜಾಗವನ್ನೂ ಸಹ ಅವರು ಮಂಜೂರು ಮಾಡಿದರು. ಹೀಗೆ ಇವರು ಮಾದರಿ ರಾಜ್ಯವನ್ನು ಬೆಳೆಸಲು ಸಂತ ಶ್ರೇಷ್ಠರಾಗಿ ಸೇವೆ ನೀಡಿದರು.

ಇವರ ಹಾದಿಯಲ್ಲೇ ಮುನ್ನಡೆದ ಜಯಚಾಮರಾಜ ಒಡೆಯರು ನಾಲ್ಕು ಡಾಕ್ಟರೇಟ್ ಪದವಿಗಳನ್ನು ಗಳಿಸಿದ್ದರಲ್ಲದೆ ಕನ್ನಡ ಶಿಕ್ಷಣ ಸಾರ್ವತ್ರಿಕವಾಗಲು ಸಾಕಷ್ಟು ಶ್ರಮಿಸಿದರು. ಅದರೊಡನೆ ವಯಸ್ಕರ ಶಿಕ್ಷಣಕ್ಕಾಗಿ ಜನಾಂದೋಲನವನ್ನೇ ಆರಂಭಿಸಿದರು.[11] ಹೀಗೆ ಮೈಸೂರಿನಲ್ಲಿ ಆಧುನಿಕ ಶಿಕ್ಷಣ ಸಂಸ್ಥೆಗಳು ತಲೆ ಎತ್ತಲಾರಂಭಿಸಿದವರು. ಅವುಗಳಲ್ಲಿ ಕೆಲವನ್ನು ಇಲ್ಲಿ ಹೆಸರಿಸಲೇ ಬೇಕಾಗುತ್ತದೆ.

### 1) ಪ್ರಾಥಮಿಕ ಶಿಕ್ಷಣ

1881ರಲ್ಲಿ ಕೇವಲ 907ರಷ್ಟಿದ್ದ ಈ ಶಾಲೆಗಳು 1916ರ ಹೊತ್ತಿಗೆ 2956 ರಷ್ಟಾದವು. ಇದರಿಂದಾಗಿ ಎಷ್ಟು ಮಂದಿ ವಿದ್ಯಾರ್ಥಿ–ವಿದ್ಯಾರ್ಥಿನಿಯರು ಸಾಕ್ಷರತೆಯನ್ನು ಗಳಿಸಿದರು ಎಂಬುದು ತಿಳಿಯುತ್ತದೆಯಲ್ಲದೆ ನಾಡುನುಡಿಗೆ ಮೈಸೂರು ಮಹಾರಾಜರು ನೀಡಿದ ಕೊಡುಗೆಯನ್ನು ತಿಳಿಯಬಹುದಾಗಿದೆ.[12]

## 2) ವಯಸ್ಕರ ಶಿಕ್ಷಣ

ವಯಸ್ಕರ ಶಿಕ್ಷಣ ಎರಡು ರೀತಿಯದ್ದಾಗಿತ್ತು. ಒಂದು ವಯಸ್ಕರಿಗೆ ಪ್ರಾಥಮಿಕ ಹಂತದ ಸಾಕ್ಷರತೆ ಎರಡು ಹೀಗೆ ಸಾಕ್ಷರತೆ ಪಡೆದ ಮಕ್ಕಳು ಶಾಲೆಯಲ್ಲಿ ತಮ್ಮ ಶಿಕ್ಷಣವನ್ನು ಮುಂದುವರೆಸುವುದು. ಈ ಶಾಲೆಗಳು ತೀವ್ರವಾಗಿ ಬೆಳೆಯಲು ಸರ್ಕಾರ ಅದಕ್ಕಾಗಿ ಸಾಕಷ್ಟು ಅನುದಾನವನ್ನು ನೀಡುತ್ತಿತ್ತು.

## 3) ಹಿರಿಯ ಪ್ರಾಥಮಿಕ ಶಿಕ್ಷಣ

ಹಿರಿಯ ಪ್ರಾಥಮಿಕ ಶಿಕ್ಷಣವನ್ನು ಆರು ವಿಧಗಳಲ್ಲಿ ವಿಭಾಗಿಸಲ್ಪಟ್ಟಿತ್ತು. 1) ದೇಶಿ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆಗಳು 2) ಆಂಗ್ಲೋ ವರ್ನಾಕ್ಯುಲರ್ ಶಾಲೆಗಳು 3) ಗ್ರಾಮೀಣ ವರ್ನಾಕ್ಯುಲರ್ ಶಾಲೆಗಳು 4) ಯೂರೋಪಿಯನ್ ಮತ್ತು ಆಂಗ್ಲೋ ಇಂಡಿಯನ್ ಶಾಲೆಗಳು 5) ಇಂಗ್ಲಿಷ್ ಪ್ರೌಢಶಾಲೆಗಳು ಹಾಗೂ 6) ಕನ್ನಡ ಪ್ರೌಢಶಾಲೆಗಳು. ಈ ಮಾದರಿಯ ಶಾಲೆಗಳು ಅಧಿಕವಾಗಿ ಜನಪ್ರಿಯವಾಗಿದ್ದವು.

## 4) ಪ್ರೌಢಶಾಲೆಗಳು

1921ರ ಕೊನೆಗೆ ಸುಮಾರು 18 ಪ್ರೌಢಶಾಲೆಗಳು ಮೈಸೂರು ಪ್ರಾಂತ್ಯದಲ್ಲಿ ಆರಂಭವಾಗಿದ್ದವು. ಈ ಶಾಲೆಗಳಲ್ಲಿ ಕಲಿಕಾ ವಿಷಯಗಳನ್ನು ಮೂರು ಗುಂಪುಗಳನ್ನಾಗಿ ವಿಂಗಡಿಸಿಕೊಳ್ಳಲಾಗಿತ್ತು. ಮೊದಲ ಗುಂಪಿನ ವಿಷಯಗಳು ಎಲ್ಲರೂ ಕಲಿಯಬೇಕಾಗಿದ್ದವು. ಇದರಲ್ಲಿ ಇಂಗ್ಲಿಷ್ ಸೇರಿಕೊಂಡಿತ್ತು. ಎರಡನೆಯದ್ದು ಭಾಷೆ, ಗಣಿತ, ಪ್ರಾಥಮಿಕ ವಿಜ್ಞಾನ, ಚರಿತ್ರೆ ಮತ್ತು ಭೂಗೋಳವನ್ನು ಹೊಂದಿತ್ತು. ಮೂರನೆಯದಾಗಿ ಹುಡುಗಿಯರು ಕಸೂತಿ, ಹೊಲಿಗೆ, ಕೌಟುಂಬಿಕ ನಿರ್ವಹಣೆ ಮುಂತಾದವುಗಳನ್ನು ಕಲಿಯುತ್ತಿದ್ದರು. ಎಲ್ಲಾ ಶಾಲೆಗಳಲ್ಲೂ ಗ್ರಂಥಾಲಯ ಮತ್ತು ಕ್ರೀಡಾ ಸೌಕರ್ಯವನ್ನು ಹೊಂದಿದ್ದವು.

## 5) ನಿಮ್ನ ವರ್ಗಗಳಗಾಗಿ ಶಿಕ್ಷಣ

1890 ರವರೆಗೆ ಹೇಳಿಕೊಳ್ಳುವಂಥ ಯಾವುದೇ ಶಿಕ್ಷಣವನ್ನು ನಿಮ್ನ ವರ್ಗಗಳಿಗಾಗಿ ಸರ್ಕಾರ ಹಮ್ಮಿಕೊಂಡಿರಲಿಲ್ಲ. ಅದರೆ 1890ರಲ್ಲಿ ಎರಡು ಸರ್ಕಾರಿ ಶಾಲೆಗಳು ಈ ಉದ್ದೇಶಕ್ಕಾಗಿಯೇ ಆರಂಭಗೊಂಡವು. ಹೀಗೆ ಆರಂಭಗೊಂಡ ಶಾಲೆಗಳು 1911ರ ವೇಳೆಗೆ 67 ಶಾಲೆಗಳು ಮೈಸೂರು ಪ್ರಾಂತ್ಯದಲ್ಲಿ ಕಾಣಿಸಿಕೊಳ್ಳುತ್ತವೆ. ಈ ಶಾಲೆಗಳಲ್ಲಿ ಕಲಿಯುತ್ತಿದ್ದ ವಿದ್ಯಾರ್ಥಿಗಳಿಗೆ ಹಾಸ್ಟೆಲ್

ಸೌಕರ್ಯವನ್ನು ಒದಗಿಸಲಾಗಿತ್ತು. ವಿದ್ಯಾರ್ಥಿ ವೇತನವೂ ಸಹ ದೊರೆಯುತ್ತಿತ್ತು. 1917ರಲ್ಲಿ ಹಿಂದುಳಿದ ಮತ್ತು ನಿಮ್ನ ವರ್ಗದ ವಿದ್ಯಾರ್ಥಿಗಳ ಸ್ಕಾಲರ್‌ಶಿಪ್‌ಗಾಗಿ ಮಹಾರಾಜರು ವಾರ್ಷಿಕವಾಗಿ ಒಂದು ಲಕ್ಷ ರೂ.ಗಳ ಅನುದಾನವನ್ನು ನೀಡತೊಡಗಿದರು. ಹೀಗೆ ಈ ವರ್ಗಗಳ ಶಿಕ್ಷಣ ಅಭಿವೃದ್ಧಿಗಾಗಿ ಸರ್ಕಾರ ಸಾಕಷ್ಟು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತು.

### 6) ಪದವಿ ಶಿಕ್ಷಕ ತರಬೇತಿ ಕೇಂದ್ರಗಳು

ಶಿಕ್ಷಕರ ತರಬೇತಿಗಾಗಿ 1860ರಲ್ಲೇ ಒಂದು ಸಂಸ್ಥೆಯನ್ನು ತೆರೆಯಲಾಗುತ್ತದೆ. ಇದಾದ ಕೆಲವೇ ವರ್ಷಗಳಲ್ಲಿ ಅಂದರೆ 1893ರಲ್ಲಿ ಮತ್ತೊಂದು ಅಂಥದ್ದೇ ತರಬೇತಿ ಕೇಂದ್ರ ಆರಂಭವಾಯಿತು. 1898ರಲ್ಲೇ ಮಹಾರಾಣಿ ಕಾಲೇಜು ಆರಂಭವಾಗಿ ಮಹಿಳೆಯರ ತರಬೇತಿಯನ್ನು ಕೈಗೆತ್ತಿಕೊಳ್ಳಲಾಗಿತ್ತು. 1916ರಲ್ಲಿ ಉರ್ದು ಶಿಕ್ಷಕರಿಗಾಗಿ ಝನಾನನ ಎನ್ನೋ ತರಬೇತಿ ಶಾಲೆ ಆರಂಭವಾಯಿತು. ಹೀಗಿರುವಾಗ 1914ರವರೆಗೆ ಪದವಿ ಶಿಕ್ಷಕರ ತರಬೇತಿ ಸಂಸ್ಥೆಗಳಾವುವು ಸರ್ಕಾರದ ವತಿಯಿಂದ ಆರಂಭವಾಗಿರಲಿಲ್ಲ. ಈ ತರಬೇತಿಗಾಗಿ ಸೈದಪೇಟೆ ಮತ್ತು ಮದ್ರಾಸ್ ಪಟ್ಟಣಗಳಿಗೆ ಹೋಗಬೇಕಾಗಿತ್ತು. ಇದಕ್ಕಾಗಿ 1914ರಲ್ಲಿ ಅಂಥದ್ದೊಂದು ಶಾಲೆಯನ್ನು ತೆರೆಯಲಾಯಿತು. ಹೀಗೆ 1947ರ ಹೊತ್ತಿಗೆ ಸಂಪೂರ್ಣ ರೀತಿಯಲ್ಲಿ ಶಿಕ್ಷಣ ತರಬೇತಿ ಕಾಲೇಜು ಸರ್ಕಾರದ ವತಿಯಿಂದಲೇ ನಡೆಯುತ್ತಿತ್ತು.

1913ರಲ್ಲಿ ವಾಣಿವಿಲಾಸ ಅರಸು ಬಾಲಕಿಯರ ಶಾಲೆ ಆರಂಭವಾಗಿ ಅದು ಅರಸು ಮನೆತನದ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಅಗತ್ಯ ಗಮನವನ್ನು ನೀಡಲಾಗಿತ್ತು.

### 7) ಕಾಲೇಜು ಶಿಕ್ಷಣ

ಇಡೀ ರಾಜ್ಯದಲ್ಲೇ ಉನ್ನತ ಶಿಕ್ಷಣಕ್ಕೆ ಅವಕಾಶ ದೊರೆತದ್ದು 1868ರಲ್ಲಿ. ಅದೂ ಸಹ ಸಾಧ್ಯವಾದುದು ಮದ್ರಾಸ್ ಸರ್ಕಾರ ಮಂಗಳೂರಿನಲ್ಲಿ ಪ್ರಥಮ ದರ್ಜೆ ಕಾಲೇಜನ್ನು ಆರಂಭಿಸುವ ಮೂಲಕ. ಬೆಂಗಳೂರಿನಲ್ಲಿದ್ದ ಪ್ರೌಢಶಾಲೆಯನ್ನು 1870ರಲ್ಲಿ ಕಾಲೇಜಿನ ಮಟ್ಟಕ್ಕೆ ಏರಿಸಲಾಗಿ ಅದನ್ನು ಸೆಂಟ್ರಲ್ ಕಾಲೇಜು ಎಂದು 1875ರಲ್ಲಿ ನಾಮಕರಣ ಮಾಡಲಾಯಿತು. ಮೈಸೂರು ಮಹಾರಾಜ ಹೈಸ್ಕೂಲ್ 1879ರಲ್ಲಿ ಮದ್ರಾಸ್ ಸರ್ಕಾರದ ಎಫ್.ಎ. ಪರೀಕ್ಷೆಗಳಿಗೆ ಅಭ್ಯರ್ಥಿಗಳನ್ನು ತಯಾರು ಮಾಡುತ್ತಿತ್ತು. 1864ರಲ್ಲಿ ಆರಂಭಿಸಿದ ದ್ವಿತೀಯ ಶ್ರೇಣಿ ಕಾಲೇಜನ್ನು 1894ರಲ್ಲಿ

ಪ್ರಥಮದರ್ಜೆ ಕಾಲೇಜನ್ನಾಗಿ ಪರಿವರ್ತಿಸಲಾಯಿತು. 1881ರಲ್ಲಿ ಆರಂಭಿಸಿದ ಮಹಾರಾಣಿ ಹೈಸ್ಕೂಲ್‌ನ್ನು 1902ರಲ್ಲಿ ದ್ವಿತೀಯ ಕಾಲೇಜನ್ನಾಗಿ ಮೇಲ್ದರ್ಜೆಗೆ ಏರಿಸಿ ಮದ್ರಾಸ್ ವಿಶ್ವವಿದ್ಯಾಲಯದೊಡನೆ ಸೇರ್ಪಡೆ ಮಾಡಲಾಯಿತು. ಮೈಸೂರು ಸಂಸ್ಥಾನದಲ್ಲಿ ಆದ ಮತ್ತೊಂದು ಮಹತ್ತರ ಬೆಳವಣಿಗೆ ಎಂದರೆ 1916ರಲ್ಲಿ ಮೈಸೂರು ವಿಶ್ವವಿದ್ಯಾಲಯವನ್ನು ಸ್ಥಾಪಿಸಿದ್ದು. ಹಾಗೆಯೇ ಇದೇ ವಿಶ್ವವಿದ್ಯಾಲಯ ಬೆಂಗಳೂರಿನಲ್ಲಿ 1917ರ ವೇಳೆಗೆ ಒಂದು ಇಂಜಿನಿಯರಿಂಗ್ ಕಾಲೇಜನ್ನು ಆರಂಭಿಸಿತ್ತಲ್ಲದೆ 1924ರಲ್ಲಿ ರಾಜ್ಯದ ಮೊಟ್ಟಮೊದಲ ವೈದ್ಯಕೀಯ ಕಾಲೇಜನ್ನು ಬೆಂಗಳೂರಿನಲ್ಲೇ ಆರಂಭಿಸಿತು. ಹೀಗೆ ವಿದ್ಯಾಭ್ಯಾಸ ಪ್ರಗತಿ ಮುಂದುವರೆದಂತೆ ಮೈಸೂರು ಮಹಾರಾಣಿ ಕಾಲೇಜನ್ನು 1920ರಲ್ಲಿ ಪ್ರಥಮದರ್ಜೆ ಕಾಲೇಜಾಗಿ ಮೇಲ್ದರ್ಜೆಗೆ ಏರಿಸುವ ಮೂಲಕ ಮಹಿಳೆಯರ ಉನ್ನತ ಶಿಕ್ಷಣಕ್ಕೆ ಪ್ರತ್ಯೇಕ ಗಮನ ನೀಡಲಾಯಿತು.

### ೮) ವೈದ್ಯಕೀಯ ಶಿಕ್ಷಣ

1917ರಲ್ಲಿ ಮೈಸೂರು ಸರ್ಕಾರ ಬೆಂಗಳೂರಿನಲ್ಲಿ ಒಂದು ವೈದ್ಯಕೀಯ ಶಾಲೆಯನ್ನು ಆರಂಭಿಸುತ್ತದೆ. ಇದರ ಉಸ್ತುವಾರಿಯನ್ನು ವೈದ್ಯಕೀಯ ಇಲಾಖೆಯ ಮುಖ್ಯ ಸರ್ಜನ್‌ಗೆ ವಹಿಸಲಾಗುತ್ತದೆ. ಇಲ್ಲಿ ನಾಲ್ಕು ವರ್ಷಗಳ ಕಾಲ ಅಧ್ಯಯನ ಮಾಡಿದವರಿಗೆ ವೈದ್ಯಕೀಯ ಸೇವೆ ಮಾಡಲು ಪರವಾನಗಿಯನ್ನು ನೀಡಲಾಗುತ್ತಿತ್ತು. 1929ರಲ್ಲಿ ಮೊದಲ ಎಂ.ಬಿ.ಬಿ.ಎಸ್.ಕಾಲೇಜನ್ನು ಬೆಂಗಳೂರಿನಲ್ಲೇ ಆರಂಭಿಸಲಾಗುತ್ತದೆ. ಈ ಎರಡೂ ಸಂಸ್ಥೆಗಳನ್ನು ಸಾಮಾನ್ಯ ಶಿಕ್ಷಕರ ಮೂಲಕವೇ ಮುಂದಿನ ಆರು ವರ್ಷಗಳ ಕಾಲ ನಡೆಸಲಾಯಿತು. 1930ರಲ್ಲಿ ವೈದ್ಯಕೀಯ ಕಾಲೇಜನ್ನು ಮೈಸೂರಿಗೆ ವರ್ಗಾಯಿಸಲಾಯಿತು. ಹೀಗಿರುವಲ್ಲಿ 1956ರಲ್ಲಿ ಬೆಂಗಳೂರಿನಲ್ಲಿದ್ದ ವೈದ್ಯಕೀಯ ಕಾಲೇಜನ್ನು ಮುಚ್ಚಲಾಯಿತು. ಮೈಸೂರಿನಲ್ಲಿದ್ದ ಕಾಲೇಜನ್ನು 1940ರಲ್ಲಿ ವಿಸ್ತರಿಸಲಾಯಿತು.

ಹೀಗಿರುವಲ್ಲಿ ಆರಂಭವಾದ 'ಭಾರತೀಯ ವಿದ್ಯಾಭ್ಯಾಸ ಸಮಿತಿ'ಯ ಸ್ತ್ರೀಯರ ವಿದ್ಯಾಭ್ಯಾಸದ ಸಮಸ್ಯೆಯನ್ನು ಕೂಲಂಕುಷವಾಗಿ ಚರ್ಚಿಸಿತು. ಖಾಸಗಿ ಪ್ರಯತ್ನಗಳಿಗೆ ಪ್ರೋತ್ಸಾಹಕವಾಗಿ ಬಾಲಕಿಯರ ಶಾಲೆಗಳಿಗೆ ನೀಡತಕ್ಕ ಸಹಾಯಧನದ ನಿಯಮಗಳನ್ನು ಸಡಿಲಗೊಳಿಸುವಂತೆಯೂ ಸಹಾಯಧನದ ಪ್ರಮಾಣ ಬಾಲಕರ ಶಾಲೆಗೆ ನೀಡತಕ್ಕ ಸಹಾಯಧನಕ್ಕಿಂತಲೂ ಹೆಚ್ಚಿರಬೇಕೆಂಬುದಾಗಿ ಶಿಫಾರಸ್ ಮಾಡಿತು. ಉಪಾಧ್ಯಾಯನಿಯರ ನೇಮಕವನ್ನು ಪ್ರೋತ್ಸಹಿಸುವ

ಸಲುವಾಗಿ 1) ವಿದ್ಯಾರ್ಥಿ ಶಿಕ್ಷಕರ ವಿಧಾನ ಅನುಸರಿಸುವಿಕೆ 2) ಸರ್ಕಾರದ ಆಡಳಿತದಲ್ಲಿ ಅಡಿಷನಲ್ ನಾರ್ಮಲ್ ಶಾಲೆಗಳನ್ನು ತೆರೆಯುವುದು.

ಅನಂತರ 20 ವರ್ಷಗಳಲ್ಲಿ ಸ್ತ್ರೀಯ ವಿದ್ಯಾಭ್ಯಾಸದಲ್ಲಿ ಉತ್ತಮ ಪ್ರಗತಿ ಕಂಡಿತು. ಗಮನಾರ್ಹ ಪ್ರಮಾಣದಲ್ಲಿ ಶಾಲೆ ಕಾಲೇಜುಗಳ ಸಂಖ್ಯೆ ಹೆಚ್ಚಾಯಿತು. ಶಿಕ್ಷಣ, ಕುಶಲತೆ, ಔಷಧಿ, ವಾಣಿಜ್ಯ ಮತ್ತು ಔದ್ಯೋಗಿಕ ತರಗತಿಗಳನ್ನು ಸ್ತ್ರೀಯರಿಗಾಗಿ ತೆರೆಯಲಾಯಿತು. 1947ರಲ್ಲಿ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯವು ಸ್ತ್ರೀಯರ ಪ್ರವೇಶಕ್ಕೆ ಅನುಮತಿ ನೀಡಿತು. ಭಾರತದಲ್ಲಿ ಸ್ತ್ರೀಯರ ವಿದ್ಯಾಭ್ಯಾಸವು ಕೇವಲ 125 ವರ್ಷಗಳಷ್ಟು ಮಾತ್ರ ಹಳೆಯದು. ಭಾರತ ರಾಜ್ಯಾಂಗವು ತನ್ನ ನಾಗರಿಕರ ವಿದ್ಯಾಭ್ಯಾಸಕ್ಕೆ ಸಮಾನ ಹಕ್ಕುಗಳನ್ನು ನೀಡಿದೆ. ಅದನ್ನು ಕಾರ್ಯ ರೂಪದಲ್ಲಿಯೂ ನಾವಿಂದು ಕಾಣಬಹುದು.

ಸಾಮಾಜಿಕ ಕ್ಷೇಮಾಭಿವೃದ್ಧಿ ವ್ಯವಸ್ಥೆಯಲ್ಲಿ ಸಾಮಾಜಿಕ ಕೆಲಸಕಾರ್ಯಗಳಿಗೆ ಸ್ವಯಂಸೇವಕರನ್ನು ಉಪಯೋಗಿಸಿಕೊಳ್ಳುವಲ್ಲಿ ಕೇವಲ ಚಾರಿತ್ರಿಕವಲ್ಲದೆ ಈಗ ಜಾರಿಯಲ್ಲಿರತಕ್ಕ ಮೂರು ಚಲನಾತ್ಮಕ ಶಕ್ತಿಗಳಿವೆ. ಮೊದಲನೆಯದು ಅವಶ್ಯಕತೆ. ಎರಡನೆಯದು ಸ್ತ್ರೀಯರಲ್ಲಿ ಹೆಚ್ಚಾಗಿ ಸೇವಾಮನೋಭವ ತಲೆದೋರಿತು. ಭಾರತ ದೇಶದಲ್ಲಿ ಅನೇಕ ರಾಜ್ಯಗಳಲಿ ಸೇವಾಮನೋಭಾವ ಹೊಂದಿರತಕ್ಕ ಗಂಡಸರ, ಹೆಂಗಸರ, ಯುವಕರ ಸಂಘಗಳು ಜನಾಂಗದ ಪರವಾಗಿ ಮತ್ತು ಅಭ್ಯುದಯಕ್ಕಾಗಿ ಅನೇಕ ವರ್ಷಗಳು ಆ ಕೆಲಸ ಮಾಡಿದವು. ಮೂರನೆಯ ಅಂಶವೆಂದರೆ ದೇಶ ಮತ್ತು ರಾಷ್ಟ್ರದ ಕ್ಷೇಮಾಭಿವೃದ್ಧಿ ಸಮಸ್ಯೆಗಳನ್ನು ಪರಿಹರಿಸುವಿಕೆಯಲ್ಲಿ ಸಹಾಯಕವಾಗುವುದೆಂಬುದು.

ಭಾರತ ದೇಶದಲ್ಲಿ ಪ್ರೈಮರಿ ಶಿಕ್ಷಣವು 6–11 ವರ್ಷದ ಮಧ್ಯೆ ಇರುವ ಮಕ್ಕಳಿಗೆ ಕಡ್ಡಾಯವಾಗಿ ಒದಗಿಸಲಾಗಿದೆ. ಹೆಂಗಸರ ಮತ್ತು ಬಾಲಕಿಯರ ವಿದ್ಯಾಭ್ಯಾಸದ ರಾಷ್ಟ್ರೀಯ ಸಮಿತಿಯು ಸಾರ್ವಜನಿಕರಲ್ಲಿ ಈ ವರ್ಗಗಳ ಅನುಕೂಲಕ್ಕೋಸ್ಕರವಾಗಿಯೇ ಸ್ಥಾಪಿಸಲ್ಪಟ್ಟಿತು. ಯುವತಿಯರಿಗೆ ನರ್ಸಿಂಗ್, ಅಧ್ಯಾಪಕ ವೃತ್ತಿ ಮತ್ತು ಇತರ ಉದ್ಯೋಗಗಳನ್ನು ಅವಲಂಬಿಸಲು ಇರಬೇಕಾದ ಅರ್ಹತೆ ಗಳಿಸಲು ಸಂಕ್ಷಿಪ್ತ ತರಗತಿಗಳು ಪ್ರಾರಂಭವಾದವು. ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ 20 ಲಕ್ಷ ಸ್ತ್ರೀಯರಿಗೆ ಶಿಕ್ಷಣ ನೀಡಲು ಉದ್ದೇಶಿಸಿದ್ದು ವೈದ್ಯರು,

ದಾದಿಯರು, ಸಾಮಾಜಿಕ ಕಾರ್ಯಕರ್ತರು, ಅಧ್ಯಾಪಕರು, ನ್ಯಾಯ ವಾದಿಗಳು, ಪ್ರೊಫೆಸರುಗಳಾಗಲು ತರಬೇತಿ ನೀಡಲು ಕಾಲೇಜುಗಳನ್ನು ತೆರೆಯಲಾಗುತ್ತಿದೆ. ಈಗ ಹೆಂಗಸರು ವಾಸ್ತುವಿದ್ಯಾವಿಶಾರದರೂ, ಲೆಕ್ಕಪರೀಕ್ಷಕರೂ ಆಗಿದ್ದು ಮುಂದೆ ಅವರ ಸಂಖ್ಯೆ ಹೆಚ್ಚುವ ಸಂಭವ ಇದೆ. ಉನ್ನತ ಮಟ್ಟದ ಹುದ್ದೆಗಳಿಗೆ ಸ್ತ್ರೀಯರು ಅರ್ಹತೆ ಗಳಿಸುವಂತೆ ಮಾಡಲು ರಾಷ್ಟ್ರೀಯ ಸಂಸ್ಥೆಗಳು ಸ್ಥಾಪಿತವಾಗಿವೆ. ಬಾಲಕಿಯರಿಗೆ ಪ್ರತ್ಯೇಕವಾಗಿ ಜೂನಿಯರ್ ಔದ್ಯೋಗಿಕ ಶಾಲೆಗಳನ್ನು ತೆರೆಯಲಾಗಿದೆ. ಹೆಂಗಸರಿಗೆ ಪ್ರತ್ಯೇಕವಾಗಿ ಪಾಲಿಟೆಕ್ನಿಕ್‌ಗಳನ್ನು ಸ್ಥಾಪಿಸಲಾಗಿದೆ.

## 3.4 ಉಪಸಂಹಾರ

ಮೇಲಿನ ವಿವರಗಳನ್ನು ಗಮನಿಸಿದಾಗ ಮೈಸೂರು ಸಂಸ್ಥಾನ ಇಡೀ ಬ್ರಿಟಿಷ್ ಇಂಡಿಯಾದಲ್ಲಿ ಮಹಿಳೆಯರು ಮತ್ತು ನಿಮ್ನ ವರ್ಗಗಳಿಗಾಗಿ ಆಧುನಿಕ ಶಿಕ್ಷಣದ ಬಾಗಿಲನ್ನು ತೆರೆಯುವ ಮೂಲಕ ಶ್ರೇಷ್ಟ ಸೇವೆಯನ್ನು ಇಡೀ ರಾಜ್ಯದ ಜನತೆಗೆ ನೀಡುತ್ತದೆ. ಇದೇ ಆದರ್ಶವನ್ನು ಸ್ವಾತಂತ್ರ್ಯದ ನಂತರವೂ ಮುಂದುವರೆಸಲಾಗುತ್ತದೆ.

ಒಟ್ಟಿನಲ್ಲಿ 19ನೇ ಶತಮಾನದಲ್ಲಿ ಆರಂಭಗೊಂಡ ಆಧುನಿಕ ಶಿಕ್ಷಣ ನಿಧಾನವಾಗಿಯಾದರೂ ಎಲ್ಲಾ ಕಡೆ ಜನಪ್ರಿಯವಾಗಿ ಸ್ವಾತಂತ್ರ್ಯ ಭಾರತದಲ್ಲಿ ಅದು ಮತ್ತಷ್ಟು ಪ್ರಚಾರಕ್ಕೆ ಬಂದಿತು. ಇದಕ್ಕೆ ಮುಖ್ಯ ಕಾರಣ ನಿಮ್ನ ವರ್ಗಗಳಿಗೆ ಮತ್ತು ಸ್ತ್ರೀಯರ ಶಿಕ್ಷಣಕ್ಕೆ ದೊರೆತ ಪ್ರಾಶಸ್ತ್ಯ ಎನ್ನಲೇಬೇಕು. ಈ ಶತಮಾನದ ಪೂರ್ವಾರ್ಧದಲ್ಲಿ ಸ್ವಾತಂತ್ರ್ಯ ಹೋರಾಟದ ಜೊತೆಗೇ ನಡೆದು ಚಿಂತನಶೀಲರ ಗಮನ ಸೆಳೆದು ಮೈಸೂರಿನ ಏಕೀಕರಣಕ್ಕಾಗಿ ಮಹಿಳಾ ಹೋರಾಟಗಾರರನ್ನು ತಯಾರಿಸಿದ ಕೀರ್ತಿ ಮೈಸೂರು ಸಂಸ್ಥಾನಕ್ಕೆ ಸಲ್ಲಬೇಕು.

# ಅಡಿಟಿಪ್ಪಣಿಗಳು

1) ಸಾಂಪ್ರದಾಯಿಕ ಎಂ.ಎ.ಚಿಂಗಾಮಣಿ, ಭಾರತೀಯ ಸಮಾಜದ ಸಮಾಜಶಾಸ್ತ್ರ, ಅರ್ಪನಾ ಬುಕ್ ಹೌಸ್, ಬೆಂಗಳೂರು, ಪು.150.
2) ವಿವರಗಳಿಗೆ ನೋಡಿ, ಸೂಸಿ ತಾರು, ಭಾರತೀಯ ಸ್ತ್ರೀವಾದ, ಅಕ್ಷರ ಪ್ರಕಾಶನ, ಹೆಗ್ಗೋಡು, 2001, ಪು.78.
3) ಅದೇ ನೋಡಿ, ಪು.79
4) ಅದೇ ನೋಡಿ
5) ಲಾರ್ಡ್ ಮೆಕಾಲೆಯ ಬಗ್ಗೆ ಭಿನ್ನವಾದ ಮತ್ತು ಸಕಾರಾತ್ಮಕವಾದ ವಿವರಗಳು ನಮಗೆ ದೊರಕುವುದು ದಲಿತ್ ಡೈರಿ ಅಂಕಣ ಬರಹಗಾರರಾಗಿರುವ ಚಂದ್ರಭಾನ್ ಪ್ರಸಾದ್‌ರವರಿಂದ. ಮೆಕಾಲೆ ಗುಲಾಮಗಿರಿಯ ವಿರುದ್ಧದ ಕಾನೂನು ಜಾರಿಯಾಗುವಲ್ಲಿ ಬಹಳಷ್ಟು ಶ್ರಮಿಸಿದ್ದ. ವಿವಿರಗಳಿಗೆ ನೋಡಿ ದಲಿತ್ ಡೈರಿ ಏಪ್ರಿಲ್ 2004, ಸಂವಾದ ಮಾಸಪತ್ರಿಕೆ.
6) ಉದ್ಧೃತ, ಡಾ.ಶ್ರೀನಿವಾಸ ಹಾವನೂರ, ಹೊಸಗನ್ನಡ ಅರುಣೋದಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1974, ಪು.64.
7) ಉದ್ಧೃತ, ಡಾ.ಶ್ರೀನಿವಾಸ ಹಾವನೂರ, ಹೊಸಗನ್ನಡ ಅರುಣೋದಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1974, ಪು.64.
8) ಉದ್ಧೃತ, ಡಾ.ಶ್ರೀನಿವಾಸ ಹಾವನೂರ, ಹೊಸಗನ್ನಡ ಅರುಣೋದಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1974, ಪು.64.
9) ಉದ್ಧೃತ, ಡಾ.ಶ್ರೀನಿವಾಸ ಹಾವನೂರ, ಹೊಸಗನ್ನಡ ಅರುಣೋದಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1974, ಪು.75.
10) ವಿವರಗಳಿಗೆ ನೋಡಿ, ಶಿವರಾಮ್ ಪಡಿಕ್ಕಲ್, ನಾಡು ನುಡಿಯ ರೂಪಕ, ಮಂಗಳೂರು ವಿಶ್ವವಿದ್ಯಾಲಯ, ದ.ಕ., 2001,ಪು.50.
11) See, Mahadevi, Society and Culture during Mysore Wodeyars (1704 to 1761), a thesis submitted for the degree of Ph.D., 1991, p.124-125.

12) See, Nanjaraja Arasu, P.V., Chandraraja Arasu S.R, Nalwadi Krishnaraja Wodeyar Ondu Darshana, Akhila Karnataka Arasu Parishath, Mysore, 1996, p.114.

# ಅಧ್ಯಾಯ-4

# ಮಹಿಳೆಯರ ಉನ್ನತಿಗಾಗಿ ನಡೆದ ಸಾಮಾಜಿಕ ಚಳುವಳಿಗಳು

4.1 ಪೀಠಿಕೆ

4.2 ಪಾಶ್ಚಿಮಾತ್ಯ ಶಿಕ್ಷಣ ಮತ್ತು ಸಂಸ್ಕೃತಿಯ ಪ್ರಭಾವ ಹಾಗೂ ಮೈಸೂರಿನ ಸುಧಾರಣಾ ಚಳುವಳಿಗಳು

4.3 ಸ್ತ್ರೀಯರ ಏಳ್ಗೆಗಾಗಿ ದುಡಿದಂಥ ಸಾಮಾಜಿಕ ಸಂಸ್ಥೆಗಳು, ಪೌರ ಮತ್ತು ಸಾಮಾಜಿಕ ಪ್ರಗತಿ ಸಂಘಗಳು, ಬ್ರಹ್ಮಸಮಾಜ, ಆರ್ಯಸಮಾಜ, ಥಿಯೋಸಫಿಕಲ್ ಸೊಸೈಟಿ, ಮಹಿಳಾ ಸೇವಾ ಸಮಾಜಗಳು ಹಾಗೂ ಇತರ ಸಂಸ್ಥೆಗಳು

4.4 ಉಪಸಂಹಾರ

## 4.1 ಪೀಠಿಕೆ

ಹತ್ತೊಂಭತ್ತನೆಯ ಶತಮಾನದ ಆರಂಭ ಘಟ್ಟದಲ್ಲಿ ಪಶ್ಚಿಮದ ಶಿಕ್ಷಣ ಹಾಗೂ ಉದಾರವಾದ ತತ್ವದೊಂದಿಗೆ ಸಂಪರ್ಕ ಪಡೆದ ಕೆಲ ಭಾರತೀಯರಿಗೆ ಪಶ್ಚಿಮದ ಒಟ್ಟಾರೆ ಪ್ರಗತಿಯ ಬಗ್ಗೆ ಮೆಚ್ಚುಗೆಯಿತ್ತು.[1] ತಮ್ಮ ಅನೇಕ ಸಾಮಾಜಿಕ ನಂಬಿಕೆಗಳು ಅವೈಚಾರಿಕವಾದವು, ಅವೈಜ್ಞಾನಿಕವಾದವು ಎಂಬುದು ಅವರ ಅರಿವಿಗೆ ಬರತೊಡಗಿತು. ತಮ್ಮ ಸಮಾಜ ಹಾಗೂ ದೇಶದ ಅಧೋಗತಿಗೆ ಈ ನಂಬಿಕೆಗಳು ಕಾರಣವೆಂಬುದು ಕೂಡ ಅವರಿಗೆ ಮನವರಿಕೆಯಾಗತೊಡಗಿತು. ಈ ಉದಾರವಾದಿ ಭಾರತೀಯರಿಗೆ ಹೊಸ ಪ್ರಭುತ್ವದ ನೀತಿಗಳಿಗೂ ಭಾರತೀಯ ಧರ್ಮ ಹಾಗೂ ಸಮಾಜದ ರೀತಿನೀತಿಗಳಿಗೂ ಹೊಂದಾಣಿಕೆಯಾಗುತ್ತಿರಲಿಲ್ಲವೆಂಬುದೂ ಅರಿವಾಗತೊಡಗಿತು. ಹೀಗಾಗಿ ಪ್ರಭುತ್ವದ ಉದಾರವಾದಿ ನೀತಿಗಳಿಗೆ ಹೊಂದಿಕೊಳ್ಳದ ಹಾಗೂ ತಮ್ಮ ಸಮಾಜಕ್ಕೆ ಅಂಟಿಕೊಂಡ ಹೀನಪದ್ಧತಿಗಳನ್ನು ತೊಡೆದು ಹಾಕಲು ಅವರು ಬಯಸಿದರು.

ಅವರ ಈ ನಿಲುವಿಗೆ ಬ್ರಿಟಿಷ್ ಸರ್ಕಾರದ ಬೆಂಬಲವೂ ದೊರೆಯಿತು. ಅದರ ಫಲವಾಗಿ ಸಾಮಾಜಿಕ, ಧಾರ್ಮಿಕ ಸುಧಾರಣಾ ಚಳುವಳಿಗಳು ಆರಂಭವಾದವು. ಈ ಎರಡು ಶಕ್ತಿಗಳು ಒಗ್ಗೂಡಿದ್ದು ಸತಿಪದ್ಧತಿ, ಬಾಲ್ಯವಿವಾಹ ಪದ್ಧತಿ, ಗುಲಾಮಿ ಪದ್ಧತಿ ಮುಂತಾದ ಸಾಮಾಜಿಕ ಅನಿಷ್ಟಗಳನ್ನು ತೊಡೆಯುವಲ್ಲಿ ಸಹಾಯಕವಾಯಿತು.

ಹೀಗೆ ಆಧುನಿಕತೆ ಮೈಸೂರು ಪ್ರಾಂತ್ಯದಲ್ಲಿ ಬೆಳೆದದ್ದು ಪಾಶ್ಚಾತ್ಯ ಶಿಕ್ಷಣದಿಂದ. ಇದನ್ನು ಈ ಹಿಂದಿನ ಅಧ್ಯಾಯದಲ್ಲಿ ಗಮನಿಸಿದ್ದೇವೆ. ಆದರೆ ಈ ಶಿಕ್ಷಣದಿಂದ ಮತ್ತು ಬ್ರಿಟಿಷ್ ಆಡಳಿತದಿಂದ ಮೈಸೂರಿನ "ಶಿಷ್ಟವರ್ಗದಲ್ಲಿ ವ್ಯಕ್ತಿ ಸ್ವಾತಂತ್ರ್ಯದ ಕಲ್ಪನೆ, ವಿಚಾರವಾದ, ಪ್ರಗತಿವಾದ, ವಿಜ್ಞಾನವಾದ ಮುಂತಾದವು ಇಲ್ಲಿನ ಸುಧಾರಣಾವಾದಿ ಹಾಗೂ ಪುನರುತ್ಥಾನವಾದಿ ಚಳುವಳಿಗಳನ್ನು ಪ್ರೇರೇಪಿಸುತ್ತವೆ."2 ಮೈಸೂರಿನಲ್ಲಿದ್ದ ಸಾಮಾಜಿಕ ಆಚಾರಗಳು, ಮೌಲ್ಯಗಳು ನೀತಿ ನಿಯಮಗಳು ಭಾರತೀಯ ಸಮಾಜದ ವಸಾಹತುಶಾಹಿ ಕಲ್ಪನೆಗಳನ್ನು ಕಟ್ಟಿಕೊಟ್ಟು ವಸಾಹತುಶಾಹಿ ಆಧುನಿಕತೆಯನ್ನು ಸಮರ್ಥಿಸುತ್ತಿದ್ದವು. ನಾಡನ್ನು ಈ ವಸಾಹತುಶಾಹಿ ಆಧುನಿಕತೆ ರಾಷ್ಟ್ರ ಎಂದು ಪರಿವರ್ತಿಸಿದಾಗ ಆಧುನಿಕತೆ 'ರಾಷ್ಟ್ರ-ವ್ಯಕ್ತಿತ್ವ'ಕ್ಕೆ ಅನಿವಾರ್ಯವಾಗುತ್ತದೆ. ಮಹಿಳಾ ಸುಧಾರಣೆ ಈ ಪ್ರಕ್ರಿಯೆಯ ಒಂದು ಅಂತ್ಯವಾದರೆ, ಪುನರುತ್ಥಾನ ಮತ್ತೊಂದು ಅಂತ್ಯವಾಯಿತು. ಪುನರುತ್ಥಾನ ವಸಾಹತುಶಾಹಿಯಲ್ಲಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿರುವ ಸ್ವಕೀಯ

ಡಾ.ಅಂಬೇಡ್ಕರ್‌ರವರ ಮೂಲಕ ಪ್ರಬಲವಾಗುತ್ತದೆ."[3] ಈ ತಾತ್ವಿಕ ಹಿನ್ನಲೆಯಲ್ಲಿ ಮಹಿಳಾ ಉನ್ನತಿಯ ಸಾಮಾಜಿಕ ಚಳುವಳಿಗಳನ್ನು ಗಮನಿಸಬೇಕಾಗುತ್ತದೆ. ಇಲ್ಲವಾದರೆ ಸುಧಾರಣಾವಾದಿ ನಿಲುವುಗಳು ಮತ್ತೆ ಮಹಿಳಾ ಚಳುವಳಿಯನ್ನು ಕೇವಲ ಸುಧಾರಣಾವಾದಿ ಚಳುವಳಿ ಎಂದು ಬಿಂಬಿಸಿಬಿಡುತ್ತದೆ.

ಆದ್ದರಿಂದ 19ನೇ ಶತಮಾನದ ರಾಜಕೀಯ ಪಲ್ಲಟಗಳು ಮತ್ತು ಸಮಾಜದಲ್ಲಿ ಆದ ಬದಲಾವಣೆಗಳನ್ನು ಚಾಚೂ ತಪ್ಪದೆ ಗಮನಿಸಬೇಕಾಗುತ್ತದೆ. ಬ್ರಿಟಿಷರ ಸಾಮ್ರಾಜ್ಯಶಾಹಿ ನೀತಿಯ ಒತ್ತಡಗಳಿಂದಾಗಿ ಹತ್ತೊಂಬತ್ತನೆಯ ಶತಮಾನದ ಮೈಸೂರು ಕೆಲವು ಕಂಪನಗಳನ್ನು ಕಾಣುತ್ತದೆ ನಿಜ. ಶಿಕ್ಷಣ ಪದ್ಧತಿ, ಆರ್ಥಿಕತೆ ಹಾಗೂ ಆಡಳಿತಗಳಲ್ಲಿ ಉಂಟಾದ ತೀವ್ರ ಬದಲಾವಣೆಗಳ ಫಲವಾಗಿ ಹೊಸ ಸಾಮಾಜಿಕ ಸುಧಾರಕ ವರ್ಗಗಳು ಹುಟ್ಟಿದವು. ಈ ವರ್ಗಗಳ ಹುಟ್ಟು ವಿಭಿನ್ನ ಪ್ರದೇಶಗಳಲ್ಲಿ ಹಾಗೂ ವಿಭಿನ್ನ ಸಮುದಾಯಗಳಲ್ಲಿ ಬೇರೆಬೇರೆ ತೆರನಾಗಿತ್ತು ಹಾಗೂ ಬಹುತೇಕವಾಗಿ ಬ್ರಿಟಿಷರ ಪ್ರವೇಶ ಮತ್ತು ಅವರು ಪ್ರಾಂತ್ಯಗಳನ್ನು ವಶಪಡಿಸಿಕೊಳ್ಳುವ ಗತಿಯನ್ನು ಅವಲಂಬಿಸಿತ್ತು. ಬ್ರಿಟಿಷರು ಭಾರತವನ್ನು ಆರ್ಥಿಕವಾಗಿ ಹಿಂಡಿಹಿಪ್ಪೆ ಮಾಡುತ್ತಾ ತಮ್ಮ ಅನುಕೂಲಕ್ಕೆ ತಕ್ಕಂತೆ ಒಡೆದು ಆಳುವ ನೀತಿಯನ್ನು ಅನುಸರಿಸುತ್ತಿದ್ದರೂ ಅವರು ಪರೋಕ್ಷವಾಗಿ ಭಾರತದ ಏಕೀಕರಣದ ಬೀಜವನ್ನೂ ಬಿತ್ತಿದರೆಂಬುದನ್ನು ನಾವು ಒಪ್ಪಿಕೊಳ್ಳಬೇಕು. ತಮ್ಮ ಸಾಮ್ರಾಜ್ಯವಾದಿ ಹಿತಾಸಕ್ತಿಗಳಿಗೆ ಪೂರಕವಾದ ಬಂಡವಾಳವಾದಿ ದಿಕ್ಕಿನಲ್ಲಿ ಭಾರತವನ್ನು ಪರಿವರ್ತಿಸಲೆತ್ನಿಸುತ್ತಿದ್ದ ಬ್ರಿಟಿಷರು ತಮ್ಮ ಆಡಳಿತಾತ್ಮಕ ನೀತಿಗಳಲ್ಲಿ ಉದಾರವಾದಿಯಾಗಿ ವರ್ತಿಸಬೇಕಾದದ್ದು ಅನಿವಾರ್ಯವಾಗಿತ್ತು.

ಇಲ್ಲಿ 'ಉದಾರವಾಗಿರುವುದು' ಎಂದರೆ ವೈಯಕ್ತಿಕ ಸ್ವಾತಂತ್ರ್ಯ ಹಾಗೂ ಸಾಮಾಜಿಕ ಸಮಾನತೆಯ ತತ್ವಗಳನ್ನು ರೂಪಿಸುವುದು ಎಂದರ್ಥ. ರಾಜಕೀಯ ವ್ಯವಸ್ಥೆಯ ದಕ್ಷ ನಿರ್ವಹಣೆಗಾಗಿ ಬ್ರಿಟಿಷರು ಬಹುಮಟ್ಟಿಗೆ ಸರ್ವಸಮಾನವಾದ ಕೆಲವು ಆಡಳಿತಾತ್ಮಕ ನಿಯಮಗಳನ್ನು ರೂಪಿಸಿದರು. ಈ ನಿಯಮಗಳು ಜಾರಿಗೊಳ್ಳುವುದನ್ನು ನೋಡಿಕೊಳ್ಳಲು ನ್ಯಾಯಾಂಗ ಹಾಗೂ ಅಧಿಕಾರಶಾಹಿಯನ್ನು ರೂಪಿಸಿದರು. ಈ ಬಗೆಯ ಆಡಳಿತದ ಶಾಖೆಗಳ ಮಧ್ಯಮ ಹಾಗೂ ಆ ನಂತರದ ಸ್ಥರಗಳಲ್ಲಿ ಇಂಗ್ಲಿಷ್ ಶಿಕ್ಷಣ ಪಡೆದ ಭಾರತೀಯರನ್ನು ನೇಮಿಸಲಾಯಿತು. ಈ ಹೊಸ ಪ್ರಭುತ್ವದ ನೀತಿಗೂ ಸಾಂಪ್ರದಾಯಿಕ ಭಾರತೀಯ ಸಮಾಜಕ್ಕೂ ಸಮರ್ಪಕ

ಹೊಂದಾಣಿಕೆಯಾಗುವುದು ಸುಲಭವಿರಲಿಲ್ಲ. ಇದರ ಜೊತೆಗೆ 'ನಾಗರಿಕ ಪಶ್ಚಿಮ'ದ ಭಾಗವಾಗಿದ್ದ ಬ್ರಿಟಿಷರು 1857 ರವರೆಗೂ ಭಾರತೀಯ ಸಾಮಾಜಿಕ ರಚನೆಯಲ್ಲಿದ್ದ ಜಡ ಶ್ರೇಣೀಕರಣವನ್ನು ಅನುಮೋದಿಸಿರಲಿಲ್ಲ.

ಆದರೆ ದಕ್ಷಿಣ ಭಾರತದಲ್ಲಿ ಈ ವಾತಾವರಣ ಹತ್ತೊಂಭತ್ತನೆಯ ಶತಮಾನದ ಕೊನೆಯ ದಶಕಗಳಲ್ಲಷ್ಟೇ ಸೃಷ್ಟಿಯಾಯಿತು. ಸುಧಾರಣಾವಾದಿ ಆಲೋಚನೆಗಳು ದಕ್ಷಿಣ ಭಾರತದಲ್ಲಿ ನಿಧಾನವಾಗಿ ಯಾದರೂ ಹಬ್ಬಿದ್ದು 1870ರಲ್ಲಿ.

ಮೈಸೂರು ಪ್ರಾಂತ್ಯದಲ್ಲಿ ಪ್ರಾಯಶಃ ಸಾಮಾಜಿಕ, ರಾಜಕೀಯ ಕಾರಣಗಳಿಂದಾಗಿಯೋ ಏನೋ ಪಶ್ಚಿಮದ ಉದಾರವಾದ ಮೈಸೂರನ್ನು ತಲುಪಿದ್ದು ಬಹುತೇಕ ಉಳಿದೆಲ್ಲ ಪ್ರಾಂತ್ಯಗಳನ್ನು ತಲುಪಿದ ನಂತರವೇ ಈ ಸಾಲಿನಲ್ಲಿ ನಿಲ್ಲುವ ಕೊನೆಯ ಪ್ರಾಂತ್ಯವೆಂದರೆ ಹೈದರಾಬಾದು. ಆದರೆ ಬ್ರಿಟಿಷರ ನೇರಾಡಳಿತದ ಐವತ್ತು ವರ್ಷಗಳ (1831–1881) ಅವಧಿಯಲ್ಲಿ ರೂಪಿಸಿಕೊಂಡ ಆಡಳಿತ ವ್ಯವಸ್ಥೆಗೆ ಮೈಸೂರು ರಾಜ್ಯ ಉತ್ತರಾಧಿಕಾರಿಯಾಯಿತು. 1881ರ ಒಪ್ಪಂದದ ನಿರ್ದೇಶನದಿಂದಾಗಿ ಸ್ಥಳೀಯ ರಾಜರು ಈ ವ್ಯವಸ್ಥೆಯನ್ನು ಬದಲಾಯಿಸುವಂತೆಯೂ ಇರಲಿಲ್ಲ. ಮದರಾಸು ವಿಶ್ವವಿದ್ಯಾಲಯದಲ್ಲಿ ತಯಾರಾದ ಬಹಳಷ್ಟು ಜನ ಈ ವ್ಯವಸ್ಥೆಯ ಆಯಕಟ್ಟಿನ ಜಾಗಕ್ಕೆ ಬಂದರು ಹಾಗೂ ಇವರೆಲ್ಲಾ ಭಾರತೀಯ ಉಪಖಂಡದ ಸುಧಾರಣಾವಾದಿ ಚಳುವಳಿಯಿಂದ ಪ್ರಭಾವಿತರಾದರು. ಬ್ರಿಟಿಷರು ಹಾಗೂ ಕ್ರಿಶ್ಚಿಯನ್ ಮಿಷನರಿಗಳ ಬೆಂಬಲ ಪಡೆದ ಇವರು ಸಾಮಾಜಿಕ ಹಾಗೂ ಧಾರ್ಮಿಕ ಸುಧಾರಣೆಗಳ ಮಾತನ್ನಾಡಲಾರಂಭಿಸಿದರು. ಅಲ್ಲದೆ ನಿಧಾನವಾಗಿ ಆಧುನಿಕತೆಯ ಗಾಳಿ ತೀವ್ರವಾದ ಸಂಚಲವನ್ನುಂಟು ಮಾಡಲಾರಂಭಿಸಿದವು. ಇದು ರಾಷ್ಟ್ರೀಯ ಹಂತದಲ್ಲೂ ಉಂಟಾದ ಪಾಶ್ಚಾತ್ತ್ಯೀಕರಣದ ಪ್ರಕಾರವನ್ನು ಸೂಚಿಸುತ್ತದೆ. ಆದ್ದರಿಂದ ವಸಾಹತುಶಾಹಿ ಆಧುನಿಕತೆಯೆಂದರೆ ಕೆಳಗಿನ 5 ಅಂಶಗಳನ್ನು ಹೆಸರಿಸಬಹುದಾಗಿದೆ.

1) ಒಂದು ಸಾರ್ವತ್ರಿಕ ನ್ಯಾಯಾಂಗ ರಚನೆಯ ಬೆಳವಣಿಗೆ

2) ಶಿಕ್ಷಣದ ವಿಸ್ತರಣೆ

3) ನಗರೀಕರಣ ಮತ್ತು ಔದ್ಯೋಗೀಕರಣ

4) ಸಂಪರ್ಕಜಾಲದ ವಿಸ್ತರಣೆ

5) ರಾಷ್ಟ್ರೀಯತೆಯ ಬೆಳವಣಿಗೆ ಮತ್ತು ಸಾಮಾಜಿಕ ಬದಲಾವಣೆಗಳು

ಈ ಮೇಲಿನ 5 ಅಂಶಗಳು ಮೈಸೂರು ಸಂಸ್ಥಾನದಲ್ಲಿ ಹಲವಾರು ಬದಲಾವಣೆಗಳಿಗೆ ಕಾರಣವಾದವು.

ಈ ಸಾಮಾಜಿಕ ಬದಲಾವಣೆಗಳು ಮಹಿಳೆಯರ ಸ್ಥಿತಿಗತಿಗಳ ಮೇಲೆ ಉಂಟು ಮಾಡಿದ ಪರಿಣಾಮಗಳನ್ನು ಈ ಭಾಗದಲ್ಲಿ ಚರ್ಚಿಸಲಾಗುವುದು. ಮಹಿಳಾ ಶಿಕ್ಷಣ ಹಾಗೂ ವಿವಾಹಗಳ ಬಗೆಗೆ ಇಲ್ಲಿ ಹೆಚ್ಚು ಒತ್ತು ನೀಡಲಾಗಿದೆ. ಹಾಗೆಯೇ ಸುಧಾರಣೆಗಳನು ಕುರಿತಂತೆ ಸಾರ್ವಜನಿಕ ಅಭಿಪ್ರಾಯದ ಸ್ವರೂಪ ಹೇಗಿತ್ತೆಂಬುದನ್ನು ನೋಡಲೂ ಇಲ್ಲಿ ಯತ್ನಿಸಲಾಗಿದೆ. ಹಾಗೆಯೇ ಪ್ರಭುತ್ವವೂ ಸೇರಿದಂತೆ ಈ ಸುಧಾರಣೆಗಳಲ್ಲಿ ಭಾಗಿಯಾದ ವಿವಿಧ ಪಂಗಡಗಳ ಉದ್ದೇಶಗಳನ್ನೂ ಇಲ್ಲಿ ವಿಶ್ಲೇಷಿಸಲೆತ್ನಿಸಲಾಗಿದೆ.

## 4.3 ಸ್ತ್ರೀಯರ ಏಳ್ಗೆಗಾಗಿ ದುಡಿದಂಥ ಸಾಮಾಜಿಕ ಸಂಸ್ಥೆಗಳು, ಪೌರ ಮತ್ತು ಸಾಮಾಜಿಕ ಪ್ರಗತಿ ಸಂಘಗಳು ಬ್ರಹ್ಮಸಮಾಜ, ಆರ್ಯಸಮಾಜ, ಥಿಯೋಸಾಫಿಕಲ್ ಸೊಸೈಟಿ, ಮಹಿಳಾ ಸೇವಾ ಸಮಾಜಗಳು ಹಾಗೂ ಇತರ ಸಂಸ್ಥೆಗಳು

ಈ ಹಿಂದಿನ ಅಧ್ಯಾಯದಲ್ಲಿ ಗಮನಿಸಿದಂತೆ, ಪ್ರಜಾಪ್ರತಿನಿಧಿ ಸಭೆ ಆರಂಭವಾದಂತೆ ನಿಧಾನವಾಗಿ ಸ್ತ್ರೀಯರ ಶಿಕ್ಷಣದಲ್ಲಿ ಸಾಕಷ್ಟು ಪ್ರಗತಿಯಾಗಿ ಕಾಲಾನುಕ್ರಮದಲ್ಲಿ ಮಧ್ಯಮ ವರ್ಗದ ಸ್ತ್ರೀಯರು ಸಾಮಾಜಿಕವಾಗಿ ಕ್ರಿಯಾಶೀಲರಾಗ ತೊಡಗಿದರು. ಅಲ್ಲದೆ ಸ್ತ್ರೀಯರ ಸ್ಥಾನಮಾನದಲ್ಲೂ ಬದಲಾವಣೆಗಳು ಕಾಣಿಸಿಕೊಳ್ಳತೊಡಗಿದವು. ಇದರ ಪರಿಣಾಮವಾಗಿ ಆ ಕಾಲದಲ್ಲಿ ಅನೇಕ ಮಹಿಳಾ ಸಂಘಟನೆಗಳು ಕಾಣಿಸಿಕೊಳ್ಳತೊಡಗಿದವು. ಇದರ ಪರಿಣಾಮವಾಗಿ ಆ ಕಾಲದಲ್ಲಿ ಅನೇಕ ಮಹಿಳಾ ಸಂಘಟನೆಗಳು ಸಹ ಸ್ಥಾಪಿಸಲ್ಪಟ್ಟವು. ಈ ಸಮಯದಲ್ಲಿಯೇ ಅನೇಕ ರಾಜ್ಯಮಟ್ಟದ ಹಾಗೂ ಸ್ಥಳೀಯ ಮಟ್ಟದ ಸಂಘಟನೆಗಳನ್ನು ಸ್ಥಾಪಿಸಲಾಯಿತು. ಈ ಸಂಘಟನೆಗಳಿಂದ ಸ್ತ್ರೀಯರ ಜೀವನದಲ್ಲಿ ಯಾವುದೇ ಕ್ರಾಂತಿಕಾರಿ ಬದಲಾವಣೆಗಳು ಆಗದಿದ್ದರೂ ಸ್ತ್ರೀಯರು ಸಮಾನತೆಗಾಗಿ ವ್ಯವಸ್ಥಿತವಾಗಿ ಹಾಗೂ ಸಂಘಟಿತರಾಗಿ ಹೋರಾಡಲು ಈ ಸಂಘಟನೆಗಳು ನೆರವಾದವು.

ಮೈಸೂರು ಮಹಿಳಾ ಅಭಿವೃದ್ಧಿಯಲ್ಲಿ ಪಾಲ್ಗೊಂಡಂಥ ಸಾಮಾಜಿಕ ಸೇವಾಸಂಸ್ಥೆಗಳು ಬಹು ಮುಖ್ಯವಾಗಿ ಸುಧಾರಣಾವಾದಿ ನಾಯಕರಿಂದ ಉದಯಿಸಿದ್ದು. ಕಾರಣ ಈ ನಾಯಕರು ನಾಗರೀಕ ಸಮಾಜದ ಅನಿವಾರ್ಯ ನಾಯಕರಾಗಿ ಪರಿಣಮಿಸಿ ಅವರು ಕಂಡ ಕನಸನ್ನು ಸಾಧಿಸಲು

ಹಲವಾರು ಸಂಘಸಂಸ್ಥೆಗಳನ್ನು ಸ್ಥಾಪಿಸಿದರು. ಈ ಸಂಘಸಂಸ್ಥೆಗಳೆಂದರೆ "ಖಾಸಗಿ ಸಂಸ್ಥೆಗಳು. ಅವು ಕಷ್ಟಸಂಕಷ್ಟಗಳನ್ನು ನಿವಾರಿಸುವ ಚಟುವಟಿಕೆಗಳಲ್ಲಿ ತೊಡಗಿದ್ದು ಬಡವರ, ಮಕ್ಕಳ ಮತ್ತು ಮಹಿಳೆಯರ ಹಿತಾಸಕ್ತಿಗಳನ್ನು ಘೋಷಿಸುತ್ತವೆ, ಪರಿಸರವನ್ನು ಸಂರಕ್ಷಿಸುತ್ತವೆ, ಮೂಲಭೂತ ಸಾಮಾಜಿಕ ಸೇವೆಗಳನ್ನು ಒದಗಿಸುತ್ತವೆ ಅಥವಾ ಸಾಮುದಾಯಿಕ ಅಭಿವೃದ್ಧಿಯನ್ನು ಕೈಗೆತ್ತಿಕೊಳ್ಳುತ್ತವೆ."[4]

ಚಾರಿತ್ರಿಕ ಈ ಸಂಘಸಂಸ್ಥೆಗಳ ಪರಿಕಲ್ಪನೆ ಉದಯಿಸಿದ್ದು 1920ರ ಆದಿಭಾಗದಲ್ಲಿ. ಸೋಫಿ-ಸ್ಯಾಂಗರ್ ಎನ್ನುವ ವ್ಯಕ್ತಿ 1906ರಲ್ಲಿ ಕಾರ್ಮಿಕ ಒಪ್ಪಂದಗಳಿಗೆ ಸಂಬಂಧಿಸಿದಂತೆ[5] ಚರ್ಚಿಸುವಾಗ ಇಂಥ ಸಂಘಟನೆಗಳು ಈ ಹಿಂದೆ ಅಸ್ತಿತ್ವದಲ್ಲಿ ಇರಲಿಲ್ಲ ಎಂದು ಹೇಳುತ್ತನೆ. ಆತನ ಪ್ರಕಾರ 1919ರಲ್ಲಿ ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆ ಅಸ್ತಿತ್ವಕ್ಕೆ ಬರುವುದರ ಮೂಲಕ ಸರ್ಕಾರೇತರ ಸಂಘಟನೆಗಳು ಅಸ್ತಿತ್ವಕ್ಕೆ ಬಂದವು. ಅನಂತರದಲ್ಲಿ "ಅಂತರರಾಷ್ಟ್ರೀಯ ಶಾಶ್ವತ ನ್ಯಾಯಾಲಯ" 1922ರಲ್ಲಿ ಅಸ್ಥಿತ್ವಕ್ಕೆ ಬಂದಾಗ ಆದ ಒಂದು ಕಾರ್ಮಿಕ ಕಾನೂನು ಚರ್ಚೆಯಲ್ಲಿ ಇಂಥ ಸಂಘಟನೆಗಳ ವಿವರಣೆಯನ್ನು ಪಡೆಯಬಹುದೆಂದು ಸೂಚಿಸಲಾಯಿತು. ಹೀಗೆ ಸಂಸ್ಥೆಗಳ ಅಸ್ತಿತ್ವಕ್ಕೆ ಕಾನೂನಾತ್ಮಕ ಚೌಕಟ್ಟು ಅಂತರರಾಷ್ಟ್ರೀಯವಾಗಿ ದೊರೆಯಿತು. ಆದ್ದರಿಂದ ವಿಶ್ವಸಂಸ್ಥೆಯ ಚಾರ್ಟರ್‌ನ ಪರಿಚ್ಛೇದ 71ರಲ್ಲಿ ಹೀಗೆ ಹೇಳಲಾಗಿದ "ಆರ್ಥಿಕ ಮತ್ತು ಸಾಮಾಜಿ ಕೌನ್ಸಿಲ್ ಅಗತ್ಯವೆಂದು ಕಂಡುಬಂದಲ್ಲಿ ಸರ್ಕಾರೇತರ ಸಂಸ್ಥೆಗಳ ಪ್ರಾವೀಣ್ಯತೆಯನ್ನು ಬಳಸಿಕೊಳ್ಳಲು ಅನುವು ಮಾಡಿಕೊಡತಕ್ಕದ್ದು" ಎಂದಿದೆ. ಸಂಘಸಂಸ್ಥೆಗಳು ತಮ್ಮದೇ ಆದ ಪರಿಣಿತಿಯನ್ನು ಹೊಂದಿದ್ದು ಅವು ದೇಶವೊಂದರಲ್ಲಿ ಕಾರ್ಯ ನಿರತವಾಗಿರುತ್ತವೆ. ಇವು ತಮ್ಮದೇ ಆದ ಸಾಂಸ್ಥಿಕ ಸ್ವರೂಪವನ್ನು ಹೊಂದಿದ್ದು ಸಾರ್ವಜನಿಕವಾಗಿ ಪಾರದರ್ಶಕ ನೀತಿಯನ್ನು ಅನುಸರಿಸಬೇಕೆಂದು ನಂಬಲಾಗಿದೆ. ಅದೊಂದು ಸ್ವಯಂ ಪ್ರೇರಣೆಯಿಂದ ಉದಯಿಸಿದ್ದು ಸಮಾನ ಮನಸ್ಕರೊಡಗೂಡಿ ಒಕ್ಕೂಟ ಸ್ವರೂಪವನ್ನು ಪಡೆಯುತ್ತದೆ.

ಯಾವುದೇ ವ್ಯಕ್ತಿ ಮತ್ತು ಸಂಸ್ಥೆ ಒಂದು ನಿರ್ದಿಷ್ಟ ಚಾರಿತ್ರಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸನ್ನಿವೇಶದಲ್ಲಿ ಹುಟ್ಟುತ್ತದೆ.

ಈ ಸಂಘಟನೆಗಳ ಸ್ವರೂಪವನ್ನು ಗಮನಿಸುವುದಾದರೆ ಅವುಗಳೆಲ್ಲಾ ಸರ್ಕಾರಿ ಕಛೇರಿಯಲ್ಲಿ ನೋಂದಾಯಿಸಿಕೊಂಡವಾಗಿರುತ್ತವೆ ಅಥವಾ ಕೇವಲ ಕೆಲವು ಕಾರ್ಯಕ್ರಮಗಳಿಗಾಗಿ ಹುಟ್ಟು ಹಾಕಲಾದ ಗುಂಪುಗಳಾಗಿರುತ್ತವೆ. ಈ ನೋಂದಾಯಿತ ಸಂಸ್ಥೆಗಳು ಲಾಭರಹಿತ ಉದ್ದೇಶಗಳಿಂದ ಒಬ್ಬ ವ್ಯಕ್ತಿ ಇಲ್ಲವೇ ಹಲವಾರು ವ್ಯಕ್ತಿಗಳ ಒಟ್ಟಾರೆ 'ಸಮಾಜ ಬದಲಾವಣೆ'ಯ ಸಕಾರಾತ್ಮಕ ಉದ್ದೇಶವನ್ನು ಹೊಂದಿದ್ದು ಅವು ಎರಡು ರೀತಿಯದ್ದಾಗಿರುತ್ತವೆ.

1) ಸೊಸೈಟಿ ಆಕ್ಟ್‌ನಡಿ ನೋಂದಾಯಿತಗೊಂಡವು

2) ಚಾರಿಟೆಬಲ್ ಟ್ರಸ್ಟ್ ಎಂದು ನೋಂದಾಯಿತಗೊಂಡವು

ಮೊದಲನೆಯದು ಸಾರ್ವಜನಿಕವಾದ ಬದ್ಧತೆ ಮತ್ತು ಪಾರದರ್ಶಕತೆಗೆ ಒಳಗಾಗುತ್ತವೆ. ಅಲ್ಲಿ ಪ್ರಜಾಸತ್ತಾತ್ಮಕ ಆಡಳಿತವಿದ್ದು ಸಾಮಾಜಿಕ ಬದ್ಧತೆಗೆ ಹೆಚ್ಚು ಒತ್ತನ್ನು ನೀಡಲಾಗುತ್ತದೆ. ಇಲ್ಲಿನ ಸದಸ್ಯತ್ವ ವೈವಿಧ್ಯ ಹಿನ್ನಲೆಯ ಸಮಾನ ಮನಸ್ಕರ ವ್ಯಕ್ತಿಗಳಿಂದ ಕೂಡಿರುತ್ತದೆ.

ಎರಡನೆಯದ್ದು ಕೆಲವೇ ವ್ಯಕ್ತಿಗಳಿಂದ ಕೂಡಿದ್ದು ಸದಸ್ಯತ್ವ ನಿರ್ದಿಷ್ಟವಾಗಿರುತ್ತದೆ ಮತ್ತು ಕಡಿಮೆ ಜನರ ಪಾಲ್ಗೊಳ್ಳುವಿಕೆಯನ್ನು ಒಳಗೊಂಡಿರುತ್ತದೆ. ಇಲ್ಲಿ 'ಪಾರದರ್ಶಕತೆ' ಎನ್ನುವುದು ಸೀಮಿತ ನೆಲೆಯದ್ದಾಗಿರುತ್ತದೆ. ಇಂತೆಡೆ ಬದ್ಧತೆ ಅಧಿಕವಾಗಿದ್ದು ಮೂಗು ತೂರಿಸುವುದು ಇಲ್ಲವೆಂದು ವಾದಿಸಲಾಗುತ್ತದೆ.

ನೀರಾ ದೇಸಾಯಿ ಮತ್ತು ಕೃಷ್ಣರಾಜ್ ಮೈತ್ರೇಯಿ ಹೇಳುವಂತೆ 'ಒಟ್ಟಿನಲ್ಲಿ ಸ್ವಾತಂತ್ರ್ಯದ ಮೊದಲಿನ ಹಂತದಲ್ಲಿ ಸ್ತ್ರೀಯರ ಸಾಮಾಜಿಕ ದೌರ್ಬಲ್ಯದ ನಿವಾರಣೆಯ ಅಗತ್ಯದ ಬಗ್ಗೆ ಒಂದು ಜಾಗೃತಿ ಉಂಟಾಯಿತು. ಶಿಕ್ಷಣದ ಬಾಗಿಲುಗಳನ್ನು ಅವರಿಗೆ ತೆರೆಯಲಾಯಿತು. ನಗರದ ಮಧ್ಯಮ ವರ್ಗದ ಸ್ತ್ರೀಯರ ಅಗತ್ಯಗಳನ್ನು ಪ್ರತಿನಿಧಿಸಸಲು ಮಹಿಳಾ ಸಂಘಟನೆಗಳು ಉದಯವಾದವು. ಸ್ತ್ರೀಯರ ರಾಜಕೀಯ ಚಟುವಟಿಕೆಗಳು ಅವರ ಚಲನೆಯನ್ನು ಹೆಚ್ಚಿಸಿದವು. ಅಂತಿಮವಾಗಿ ಅನೇಕ ಶಾಸನಾತ್ಮಕ ಕ್ರಮಗಳಿಂದ ಸ್ತೀಯರ ಅಸಮಾನ ಸ್ಥಾನವನ್ನು ಸುಧಾರಿಸಲಾಯಿತು". ಹೀಗೆ ಮೂಲಭೂತ ಬದಲಾವಣೆಗಳು 19ನೇ ಶತಮಾನದ ಕೊನೆಯಲ್ಲಿ ಮಹಿಳಾ ಬದುಕಿನಲ್ಲಿ ಕಾಣಿಸಿಕೊಳ್ಳಲಾರಂಭಿಸಿದವು.

### 4.3.1 ಆಧುನಿಕ ಚಳುವಳಿಗಳು ಮತ್ತು ಸಂಘಸಂಸ್ಥೆಗಳ ಹುಟ್ಟು

19ನೇ ಶತಮಾನದ ಮಧ್ಯಭಾಗದಲ್ಲಿ ಕನ್ನಡ ಪುನರುತ್ಥಾನಕ್ಕಾಗಿ ಪ್ರಾರಂಭವಾದ ಆಂದೋಲನದ ಪರಾಕಾಷ್ಟೆಯೆಂದರೆ ಏಕೀಕರಣಕ್ಕಾಗಿ ನಡೆದ ಆಂದೋಲನ. ಬಂಗಾಳ ವಿಭಜನೆ ಹಾಗೂ ನಂತರ ಪುನರೇಕೀಕರಣಕ್ಕಾಗಿ ನಡೆದ ಆಂದೋಲನದ ಪರಿಣಾಮವಾಗಿ 1912ರಲ್ಲಿ ವಿಭಜನೆ ರದ್ದಾದುದು ಮತ್ತು ಅಸ್ಸಾಮ್, ಬಿಹಾರ, ಒರಿಸ್ಸಾ ಪ್ರಾಂತ್ಯಗಳನ್ನು ಭಾಷಾ ತಳಹದಿಯ ಮೇಲೆ ರಚಿಸುತ್ತಿದ್ದು ಏಕೀಕರಣ ಆಂದೋಲನಕ್ಕೆ ಪುಷ್ಟಿ ನೀಡಿದವು. ಇದಕ್ಕೆ ಪೂರಕವಾದ ಪತ್ರಿಕಾ ಮಾಧ್ಯಮ ಮಾಡಿದ ಕಾರ್ಯವನ್ನು ಮರೆಯಲಾಗದು. ಬಳ್ಳಾರಿಯಲ್ಲಿ 1820ರಲ್ಲಿ ಬೆಂಗಳೂರಿನಲ್ಲೂ ಪತ್ರಿಕೆಗಳು ಜನರಲ್ಲಿ ಜಾಗೃತಿಯನ್ನು ಆರಂಭಿಸಿದವು. ಹಿಂದೂ ಸಮಾಜದಲ್ಲಿ ಕಡೆಗಣಿಸಲಾದ ವರ್ಗದವರ ವಿಮೋಚನಾ ಕಾರ್ಯದಲ್ಲಿ ತೊಡಗಲು ಈ ಪತ್ರಿಕೆಗಳು ಸರ್ಕಾರವನ್ನು ಒತ್ತಾಯಿಸಿದವು. ಈ ಕಾರಣದಿಂದಾಗಿ ಅನೇಕ ನಿಯೋಗಗಳನ್ನು ಸರ್ಕಾರ ನೇಮಿಸತೊಡಗಿತು. ಕರ್ನಾಟಕದಲ್ಲಿ ಕನ್ನಡದ ಅಚ್ಚು ಮೊಳೆಯ ತಯಾರಿಕೆ ಹಾಗೂ ಅಚ್ಚುಕೂಟಗಳ ಆರಂಭ ಆದುದು ಕ್ರಿಶ್ಚಿಯನ್ ಮತಪ್ರಚಾರಕರಿಂದಲೇ. ಬಾಸೆಲ್ ಮಿಷನ್‌ನವರು 1843ರಲ್ಲಿ 'ಮಂಗಳೂರು ಸಮಾಚಾರ' ಎಂಬ ಮೊಟ್ಟಮೊದಲ ಕನ್ನಡದ ವಾರ್ತಾ ಪತ್ರಿಕೆಯನ್ನು ಆರಂಭಿಸಿದರು. ಜೊತೆಗೆ ಓಲೆಗರಿಯಲ್ಲಿ ದೊರೆತ ಕನ್ನಡದ ಉತ್ಕೃಷ್ಟ ಪ್ರಾಚೀನ ಕಾವ್ಯಗಳನ್ನು ಅಚ್ಚುಮಾಡಿ ಪ್ರಕಟಿಸಿದರು. ರಾಜ್ಯದಲ್ಲಿ ಇದು ಸಾಹಿತ್ಯಿಕ ಹಾಗೂ ಇತರ ನವೋದಯ ಕಾರ್ಯಗಳಿಗೆ ನಾಂದಿಯಾಯಿತು ಮಾತ್ರವಲ್ಲದೆ ಪ್ರಚೋದಕವೂ ಆಯಿತು. ಈ ಕ್ಯಾಥೋಲಿಕ್ ಮತ್ತು ಪ್ರಾಟೆಸ್ಟೆಂಟ್ ಕ್ರೈಸ್ತಧರ್ಮ ಮಂಡಳಿಗಳು ಆಂಗ್ಲ ವಿದ್ಯಾಭ್ಯಾಸವನ್ನು ಆರಂಭ ಮಾಡಿದವು. ಈ ಸಲುವಾಗಿ ಅವರು ಆರಂಭದ ದಿನಗಳಲ್ಲಿಯೇ ಮಂಗಳೂರು, ಮಡಿಕೇರಿ, ಬೆಂಗಳೂರು, ಬಳ್ಳಾರಿ ಮತ್ತು ಬೆಳಗಾವಿಗಳಲ್ಲಿ ಶಾಲೆಗಳನ್ನು ಪ್ರಾರಂಭ ಮಾಡಿದರು. ಆರೋಗ್ಯ ಸೇವಾ ವಿಭಾಗದಲ್ಲಿ ಸಹ ಅವರದ್ದು ಗಣನೀಯ ಸೇವೆ. ಇದು ಇಲ್ಲಿನವರೆಗೂ ಸ್ಫೂರ್ತಿಯಾಗಿ ಪರಿಣಮಿಸಿದವು.

ಹೀಗೆ ಮುದ್ರಣದ ಪ್ರಾರಂಭ ಮತ್ತು ಸಾಕ್ಷರತೆಯ ಪ್ರಸರಣಗಳಿಂದ ಜನರ ಮಾನಸಿಕ ಕ್ಷಿತಿಜ ವಿಸ್ತರಿಸಿದವು. ಪುಸ್ತಕಗಳು, ನಿಯತಕಾಲಿಕಗಳು ಸಾಕಷ್ಟು ಪ್ರಮಾಣದಲ್ಲಿ ಪ್ರಕಟಗೊಂಡವು.[6] ಸುಧಾರಿಸಿದ ಸಾಗಾಣಿಕೆ ಮತ್ತು ಉತ್ತಮ ಸಂಪರ್ಕ ಸಾಧನಗಳಿಂದ ಹೊಸ ವಿಚಾರಗಳು ತೀವ್ರವಾಗಿ ಪಸರಿಸಿದವು. ಹಳೇ ಮೌಲ್ಯಗಳು, ಹಳೇ ವಿಚಾರಗಳು ಹೊಸ ಮೌಲ್ಯದ ವಿಚಾರಗಳಿಗೆ ದಾರಿ ಮಾಡಿಕೊಟ್ಟವು. ಗೌಡಸಾರಸ್ವತ ಸಮಾಜದ ಗುಂಪೊಂದು ಪಶ್ಚಿಮದ ವಿದ್ಯೆಗೆ ಬೇರೆಯವರಿಗಿಂತ

ಮೊದಲು ಶೀಘ್ರವಾಗಿ ಶರಣು ಹೋಯಿತು. ಸರ್ಕಾರಿ ಸೇವೆಯಲ್ಲಿ ಸೇರಿ, ಯೂರೋಪಿಯನ್ನರನ್ನು ಏಕಾಧಿಕ ವಿಷಯಗಳಲ್ಲಿ ಅನುಕರಿಸಿ, ಹೊಸದೊಂದು ಸಾರಸ್ವತ ಎಂಬ ಪ್ರತ್ಯೇಕ ಜಾತಿ ಹುಟ್ಟಿಕೊಂಡಿತು. ಹೀಗೆ ಪಡುವಣ ಕಲಿಕೆಯ ಲಾಭವನ್ನು ಕ್ರೈಸ್ತರೂ, ಬ್ರಾಹ್ಮಣರೂ ಮೊಟ್ಟಮೊದಲಿಗೆ ಪಡೆದುಕೊಂಡರೂ ಬೇರೆ ಜಾತಿಯವರು ಇವರನ್ನು ಹಿಂಬಾಲಿಸಿದರು. ಒಡನೆ ಕೆಲಸ ದೊರಕಿಸಿಕೊಳ್ಳಲು ಬ್ರಾಹ್ಮಣ ಬ್ರಾಹ್ಮಣೇತರರಲ್ಲಿ ಕಚ್ಚಾಟ ಮೊದಲಾಯಿತು. ಅದರ ಪರಿಣಾಮ ಬ್ರಿಟಿಷರ ಕಾಲಾವಧಿಯಲ್ಲಿ ಧಾರವಾಡ ಪ್ರದೇಶಗಳಲ್ಲಿ ಬ್ರಾಹ್ಮಣೇತರರ ಪರಿಷತ್ತು, ಮೈಸೂರು ಸಂಸ್ಥಾನದಲ್ಲಿ ಪ್ರಜಾಮಿತ್ರ ಮಂಡಲಿಯಂತಹ ಬ್ರಾಹ್ಮಣೇತರರ ಆಂದೋಲನಗಳು ಹುಟ್ಟಿಕೊಂಡವು. ಸ್ವಾತಂತ್ರ್ಯ ದೊರೆತ ನಂತರ ಸರ್ಕಾರಿ ನೌಕರಿಯ ಸ್ಥಳಗಳಿಗೆ ಮತ್ತು ಶೈಕ್ಷಣಿಕ ಪ್ರವೇಶಕ್ಕೆ ನಡೆದು, ನಾಗನಗೌಡ ಮತ್ತು ಹಾವನೂರ ನಿಯೋಗಗಳನ್ನು ರಾಜ್ಯ ಸರ್ಕಾರ ಕಾಯ್ದೆಗಳ ಅನ್ವಯ ನೇಮಿಸಿತು. ಅವುಗಳ ಸಲಹೆಗಳ ಪ್ರಕಾರ ಸರ್ಕಾರವು ಕೆಲವು ಜಾತಿಗಳ ಗುಂಪುಗಳಿಗೆ ರಾಜ್ಯ ಸರ್ಕಾರದ ಸೇವೆಯಲ್ಲಿ ಮತ್ತು ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆಯಲು ಪ್ರಮಾಣಗಳನ್ನು ಕಾದಿರಿಸಿದೆ.

ಶಿಕ್ಷಣ ಪ್ರಸಾರದಿಂದ ಸಂಸ್ಕೃತಾನುಕರಣಕ್ಕೆ ಇಂಬು ದೊರೆಯಿತು. ಇದರಿಂದ ಸಾಮಾಜಿಕ ವ್ಯವಹಾರಗಳಲ್ಲಿ ಬಿಗುತನ ತೋರಿಸಿ ಬ್ರಾಹ್ಮಣರೇ ಆಧುನಿಕತೆಯ ಪ್ರಭಾವಕ್ಕೊಳಗಾಗಿ ಕೈಬಿಟ್ಟ ಸಾಂಪ್ರದಾಯಿಕತೆಗೆ ಹಿಂದುಳಿದವರು ಕಟ್ಟುಬೀಳುವುದುಂಟು.

ಸಾಗರಪರ್ಯಟನದ ಮೇಲಿನ ನಿರ್ಬಂಧಗಳನ್ನು ಸಾರಸ್ವತರಂಥ ಮುಂದುವರಿದ ಜಾತಿಗಳಲ್ಲಿಯೂ ಶ್ಯಾಮರಾವ ವಿಟ್ಠಲ್ ಕಾಯ್ಕಿನಿಯವರು ‘ಸಮುದ್ರಯಾನ ಮೀಮಾಂಸೆ’ (1895) ಎಂಬ ಚಿಕ್ಕ ಹೊತ್ತಿಗೆಯಲ್ಲಿ, ಗುಲ್ವಾಡಿ ವೆಂಕಟರಾಯರು ತಮ್ಮ ‘ಇಂದಿರಬಾಯಿ’ (1899) ಎಂಬ ಕಾದಂಬರಿಯಲ್ಲಿ ಖಂಡಿಸಿದ್ದಾರಲ್ಲದೆ, ವಿಧವಾ ವಿವಾಹವನ್ನು ಕೃತಿಯಲ್ಲಿ ಎತ್ತಿಹಿಡಿದರು. ಸಂಪ್ರದಾಯಬದ್ಧ ಬ್ರಾಹ್ಮಣ ಕುಟುಂಬದ ಸರ್ ಎಂ.ವಿಶ್ವೇಶ್ವರಯ್ಯನವರು ಯೂರೋಪಿಗೆ ಹೋಗಿ ಬಂದ ಮೇಲೆ ಅವರ ಸಂಬಂಧಿಕರಲ್ಲದೆ ಸ್ವತಃ ತಾಯಿಯೇ ಈ ಸಮುದ್ರ ಸಂಚಾರಕ್ಕೆ ಮನಸ್ಸನ್ನು ಹೊಂದಿಸಿಕೊಂಡಿರಲಿಲ್ಲ. ಎಷ್ಟಾದರೂ 19ನೇ ಶತಮಾನ ಮುಗಿಯುವುದರಲ್ಲಿ ಶಿಕ್ಷಣ ಪಡೆಯಲು ತರುಣರು, ವಿಲಾಯಿತಿಗೆ ಹೋಗುತ್ತಿದ್ದರು. ಮೈಸೂರು ಸಂಸ್ಥಾನವು ಪ್ರತಿಭಾವಂತ ವಿದ್ಯಾರ್ಥಿಗಳಿಗೆ

ಸಾಗರಾತೀತ ಛಾತ್ರವೃತ್ತಿ ಕೊಡುವ ಏರ್ಪಾಟು ಮಾಡಿತು. 1904ರಲ್ಲಿ ವೀರಶೈವ ಮಹಾಸಭೆಯವರು ಸಹ ಇಂಥ ವಿದ್ಯಾರ್ಥಿ ವೇತನಗಳನ್ನು ಸ್ಥಾಪಿಸಿತು.

### 4.3.2 ಸಾಮಾಜಿಕ ಬದಲಾವಣೆಗಳು

ಈ ಹಿಂದೆ ನೋಡಿದಂತೆ ಕ್ರೈಸ್ತ ಮಿಷನರಿಗಳು ವಿಶೇಷವಾಗಿ ಬಾಸೆಲ್, ವೆಸ್ಲಿಯನ್ ಮತ್ತು ಲಂಡನ್ ಮಿಷನರಿಗಳ ಧರ್ಮಪ್ರಚಾರ ಚಟುವಟಿಕೆಗಳಿಂದ ಭಾರತೀಯ ಸಮಾಜದಲ್ಲಿ ಗಾಢ ಪರಿಣಾಮಗಳಾಗ ತೊಡಗಿದವು. ಅವರು ಕೈಗೊಂಡ ಸಮಾಜಸೇವೆ ಹಾಗೂ ಹಿಂದೂ ಸಮಾಜದಲ್ಲಿನ ನಂಬಿಕೆ ಆಚಾರಗಳನ್ನು ಖಂಡಿಸುತ್ತಿದ್ದರು. ಇದರಿಂದ ಹಿಂದೂ ಸಮಾಜದಲ್ಲಿನ ಗಣ್ಯರು ತಮ್ಮಲ್ಲಿಯ ಸಾಮಾಜಿಕ ಕೆಡಕುಗಳತ್ತ ಲಕ್ಷ್ಯ ಕೊಡುವಂತಾಯಿತು. ರಾಜಾರಾಮ ಮೋಹನ್‌ರಾಯ್, ರಾನಡೆ ಮತ್ತು ಡಾ.ಭಾಂಡರ್ಕರ್‌ರಂಥವರ ವಿಚಾರಗಳಿಂದ ಹೊಸ ಪದ್ಧತಿಯ ಶಿಕ್ಷಣ ಪಡೆದ ಸಾರಸ್ವತರಲ್ಲಿ ಆಳವಾದ ಪ್ರಭಾವ ಬೀರಿತು. ಈ ಅಂಶವನ್ನು ಈಗಾಗಲೇ ಗಮನಿಸಿದ್ದೇವೆ. ವಾಸ್ತವವಾಗಿ 1870ರಲ್ಲಿ ಮಂಗಳೂರಿನಲ್ಲಿ ಸ್ಥಾಪಿಸಿದ ಬ್ರಹ್ಮಸಮಾಜವು ಮಿಷನರಿ ಚಟುವಟಿಕೆಗಳಿಗೆ ಸುಶಿಕ್ಷಿತ ಹಿಂದೂಗಳ ಪ್ರತಿಕ್ರಿಯೆ ಎನ್ನಬಹುದು. ಪರಿಣಾಮವಾಗಿ ಮತ್ತಷ್ಟು ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳು ಪ್ರಾರಂಭವಾದವು. ಅನಂತರದಲ್ಲಿ ಬ್ರಹ್ಮಸಮಾಜವು ಬೆಂಗಳೂರು, ಮೈಸೂರುಗಳಲ್ಲೂ ತನ್ನ ಶಾಖೆಗಳನ್ನು ಆರಂಭಿಸಿತು. ರೆವರೆಂಡ್ ಅಮೃತ್‌ಲಾಲ್ ಬೋಸ್ ಎನ್ನುವವರು ಸಮಾಜದ ಪ್ರಮುಖ ನಾಯಕರುಗಳಲ್ಲಿ ಒಬ್ಬರು. ಅವರು 1889ರಲ್ಲಿ ಮಂಗಳೂರಿಗೆ ಬಂದು ಸರಿಸುಮಾರು ಒಂದು ವರ್ಷಕಾಲ ಅಲ್ಲಿಯೇ ಇದ್ದರು. 1904ರಲ್ಲಿ ಹೇಮಶ್ಚಂದ್ರ ಸರ್ಕಾರ್ ಎನ್ನುವವರೂ ಸಹ ಮಂಗಳೂರಿಗೆ ಭೇಟಿ ನೀಡಿದ್ದರು.

1880ರಷ್ಟು ಪೂರ್ವದಲ್ಲಿಯೇ ಮೈಸೂರಿನಲ್ಲಿ ಆರ್ಯಸಮಾಜದ ಚಟುವಟಿಕೆ ಆರಂಭವಾಗಿ ಅದರ ಶಾಖೆಗಳು 1919ರಲ್ಲಿ ಮಂಗಳೂರಿನಲ್ಲಿಯೂ, 1922ರಲ್ಲಿ ಬೆಂಗಳೂರಿನಲ್ಲಿಯೂ ಆರಂಭವಾದವು. ಸ್ವಾಮಿ ಶ್ರದ್ಧಾನಂದರು 1924–25ರಲ್ಲಿ ಆರ್ಯಸಮಾಜದ ಗುರಿ ಹಾಗೂ ಧ್ಯೇಯಗಳ ಪ್ರಸಾರಕ್ಕಾಗಿ ಕರ್ನಾಟಕದಲ್ಲಿ ಸುತ್ತಾಡಿದರು. ಹೈದರಾಬಾದ್ ಕರ್ನಾಟಕದ ವಿಭಾಗದಲ್ಲಿ ಆರ್ಯಸಮಾಜವು ಸ್ಥಿರವಾಗಿ ನೆಲೆನಿಂತಿತು. ಅಷ್ಟೇ ಅಲ್ಲದೆ ಆ ವಿಭಾಗದ ಸ್ವಾತಂತ್ರ್ಯ ಚಳುವಳಿಯಲ್ಲಿ ಮುಖ್ಯ ಪಾತ್ರ ವಹಿಸಿತು.

1886ರಲ್ಲಿ ಥಿಯೋಸಾಫಿಕಲ್ ಸೊಸೈಟಿಯು ಮೊದಲು ತನ್ನ ಚಟುವಟಿಕೆಗಳನ್ನು ಬೆಂಗಳೂರು ನಗರ ಪ್ರದೇಶದಲ್ಲಿ ತನ್ನ ಕೇಂದ್ರವನ್ನು ಸ್ಥಾಪಿಸುವುದರ ಮೂಲಕ ಆರಂಭಿಸಿತು ಮತ್ತು ಅದೇ ವರ್ಷ ಬೆಂಗಳೂರು ದಂಡು ಪ್ರದೇಶದಲ್ಲಿ ಇನ್ನೊಂದು ಕೇಂದ್ರವನ್ನು ಸ್ಥಾಪಿಸಿ ತನ್ನ ಚಟುವಟಿಕೆಯನ್ನು ವಿಸ್ತರಿಸಿತು ಮತ್ತು ಶೀಘ್ರವಾಗಿ 1901ರಲ್ಲಿ ಮಂಗಳೂರು, 1902ರಲ್ಲಿ ಧಾರವಾಡ ಮೊದಲಾದ ಪ್ರಮುಖ ನಗರಗಳಲ್ಲಿ ತನ್ನ ಶಾಖೆಗಳನ್ನು ಸ್ಥಾಪಿಸಿತು. ಆಗಿನ ಮೈಸೂರು ರಾಜ್ಯದ ದಿವಾನರಾಗಿದ್ದ ಸರ್ ಶೇಷಾದ್ರಿ ಅಯ್ಯರ್‌ರವರು ಈ ಚಟುವಟಿಕೆಗಳೊಡನೆ ಸಂಬಂಧವಿರಿಸಿಕೊಂಡಿದ್ದರು. 1893ರಲ್ಲಿ ದಿವಾನರ ಅಧ್ಯಕ್ಷತೆಯಲ್ಲಿ ಸೇರಿದ ಸಾರ್ವಜನಿಕ ಸಮಾವೇಶದಲ್ಲಿ ಕರ್ನಲ್ ವೋಲ್ಕಾಟ್‌ರವರು ಉಪನ್ಯಾಸ ಮಾಡಿದ್ದರು. ಶ್ರೀಮತಿ ಅನಿಬೆಸೆಂಟ್ ರವರು ಅನೇಕ ಸಲ ಕರ್ನಾಟಕಕ್ಕೆ ಭೇಟಿ ನೀಡಿದ್ದರು. 1910ರಲ್ಲಿ ಆಕೆ 10 ಕೇಂದ್ರಗಳನ್ನು ಒಳಗೊಂಡ ಕರ್ನಾಟಕದ ಥಿಯೋಸಾಫಿಕಲ್ ಒಕ್ಕೂಟವನ್ನು ಆರಂಭಿಸಿದರು. ಪ್ರಸಿದ್ಧ ಥಿಯೋಸಾಫಿಸ್ಟ್‌ರಾದ ಜೇಮ್ಸ್ ಹೆನ್ರಿ ಕಸಿನ್ಸ್ ಮತ್ತು ಅವರ ಪತ್ನಿ ಮಾರ್ಗರೇಟ್‌ರವರು ಮಂಗಳೂರಿನಲ್ಲಿ ಬಹಳ ಕಾಲ ವಾಸ್ತವ್ಯ ಹೂಡಿದ್ದರು.

ರಾಮಕೃಷ್ಣ ಮಿಷನ್ ಸಂಸ್ಥೇಯು ಧಾರ್ಮಿಕ ಹಾಗೂ ಸಮಾಜ ಕಲ್ಯಾಣದ ಕೆಲಸಗಳನ್ನು ಮಾಡುವುದರಲ್ಲಿ ಆಸಕ್ತಿ ವಹಿಸಿತ್ತು. 1904ರಲ್ಲಿ ಅವರ ಪ್ರಪ್ರಥಮ ಶಾಖೆಯನ್ನು ಬೆಂಗಳೂರಿನಲ್ಲಿಯೂ, 1927ರಲ್ಲಿ ಮೈಸೂರಿನಲ್ಲಿಯೂ ಆರಂಭಿಸಿತು. 1911ರಲ್ಲಿ ಶಾರದಮಣಿದೇವಿಯವರು ಬೆಂಗಳೂರಿನಲ್ಲಿ ಒಂದು ಸಂದರ್ಶನವನ್ನು ನೀಡಿದ್ದರು.

ಈ ವಿವಿಧ ಹೊಸ ಧಾರ್ಮಿಕ ಚಟುವಟಿಕೆಳು ಸಮಾಜ ಸುಧಾರಣೆಯಲ್ಲಿ ಪ್ರಮುಖ ಪಾತ್ರ ವಹಿಸಿದವು. ಸ್ತ್ರೀ ವಿಮೋಚನೆ ಮತ್ತು ಅಸ್ಪೃಶ್ಯತಾ ನಿವಾರಣೆಗಳು ಅವುಗಳ ಸಮಾಜ ಸುಧಾರಣಾ ಕಾರ್ಯಗಳಲ್ಲಿ ಮಿಡಿತವಾದುವು. ಬಾಲ್ಯವಿವಾಹದ ನಿಷೇಧ, ವಿಧವಾ ವಿವಾಹದ ಪ್ರೋತ್ಸಾಹ ಮತ್ತು ಸ್ತ್ರೀ ವಿದ್ಯಾಭ್ಯಾಸ ಮುಂತಾದ ಕಾರ್ಯಗಳನ್ನು ಅವು ಕೈಗೊಂಡವು.7

### 4.3 ಸ್ಥಾಪನೆಗೊಂಡ ಸಂಘಸಂಸ್ಥೆಗಳು

ಮೇಲೆ ವಿವರಿಸಿಕೊಂಡಂತೆ ಸಮಾನ ಮನಸ್ಕ, ಸಮಾನ ಹಿತಾಸಕ್ತಿ, ಅಭಿರುಚಿ ಹಾಗೂ ಉದ್ದೇಶಗಳನ್ನು ಹೊಂದಿದ ಅನೇಕ ಸಂಘಸಂಸ್ಥೆಗಳು 20ನೇ ಶತಮಾನದ ಆರಂಭದ ವೇಳೆಗೆ

ಮೈಸೂರು ಪ್ರಾಂತ್ಯದಲ್ಲಿ ಆರಂಭಗೊಳ್ಳುತ್ತವೆ. ಸಂಸಾರವು ಏಳಿಗೆಯನ್ನು ಹೊಂದಲು ನಿಯೋಜಿತವಾದಂತಹ ಯೋಜನೆಗಳಲ್ಲಿ ಸ್ತ್ರೀಯರ ಪಾತ್ರವು ಚೆನ್ನಾಗಿ ವಿವರಿಸಲ್ಪಟ್ಟಿದೆ. ಸ್ತ್ರೀಯರ ಸರ್ಕಾರವೇ ರಚಿಸಲ್ಪಡುವಂತೆ ರಾಣಿದುಂಬಿಗಳು ಸಂಚು ಮಾಡಿದಂತೆ ಸ್ತ್ರೀಯರ ಶಕ್ತಿಯನ್ನು ಯಾರೂ ಅನ್ಯಥಾ ಭಾವಿಸಲಿಲ್ಲ. ಶಿಸ್ತಿನಿಂದ ಕೂಡಿದ ಸಮಾಜವನ್ನು ರಚಿಸುವುದು ರೂಢಿಯಲ್ಲಾಯಿತು. ಇದೇ ಸಮಷ್ಟಿ ಕುಟುಂಬ. ಇದು ತಬ್ಬಲಿ, ಮುಪ್ಪು, ವೈಧವ್ಯ ಇತ್ಯಾದಿಗಳಿಗೆ ಗೃಹದಂತಿದ್ದೂ ಒಗ್ಗಟ್ಟನ್ನು ಉಂಟು ಮಾಡಿತು. ಇದನ್ನು ಗಮನಿಸಿಯೇ ಭರ್ತೃಹರಿ ಕವಿಯು ವಿಸೇವಾಧರ್ಮ ಪರಮಗಹನೋಯೋಗಿ ಅಗಮ್ಯಃಹಿ ಎಂಬುದಾಗಿ ಹೇಳಿರಬೇಕು. ಯೋಗದ ಅಭ್ಯಾಸದಲ್ಲಿ ನಿರತರಾಗಿರತಕ್ಕವರಿಗೆ ಅದು ಹಿಡಿಯಲಿಲ್ಲ. ಕ್ರಮೇಣ ಸೇವಾಕಾರ್ಯದಲ್ಲಿ ಸ್ತ್ರೀ ಪ್ರಧಾನ್ಯಳಾದಳು. ಸೇವೆಯೇ ಧ್ಯೇಯವಾಗಿ ಉಳ್ಳ ಹೆಂಗಸರಲ್ಲಿ ಉತ್ಸಾಹ, ಕ್ಷಮೆ, ಸ್ಥಿರವಾದ ತಾಳ್ಮೆ, ಸತ್ಯದಲ್ಲಿ ಶ್ರದ್ಧೆ ಹಾಗೂ ಕರುಣೆ ಮುಂತದ ಗುಣಗಳಿರಬೇಕೆಂಬುದಾಗಿ ಭರ್ತೃಹರಿಯು ಹೇಳಿದ್ದಾನೆ. ಇಂದ್ರಿಯ ನಿಗ್ರಹಿಯೂ ಆಗಿರಬೇಕು.

ಸಾಮಾಜಿಕ ರಚನೆಯಲ್ಲಿ ಹೆಂಗಸರು ತಾಯಂದಿರಾಗಿದ್ದೇ ತತ್ವಶಾಸ್ತ್ರಜ್ಞರು, ಪತ್ನಿಯರಾಗಿದ್ದೇ ತರ್ಕಶಾಸ್ತ್ರಜ್ಞರೂ ಆದರು. ಇದರಿಂದ ವಿವಾಹವಿಚ್ಛೇದನವಾವುದೂ ಆಗಲಿಲ್ಲ. ಸಹನೆಯೇ ಪ್ರಧಾನವಾಗ ಬೇಕಿತ್ತು. ಸಹನೆ, ದಯೆ, ತಿಳುವಳಿಕೆ ಮತ್ತು ಶಿಸ್ತುಗಳೇ ರಾಗಗಳಾಗಿದ್ದು ಹೆಂಗಸು ಈ ರಾಗಗಳಿಂದ ಕೂಡಿರತಕ್ಕ ಹಾಡಿನಂತಿದ್ದಳು.

ಹೀಗೆ ಮನೆಯಿಂದ ಹೊರಬಂದ ಸ್ತ್ರೀಯರು ಅನೇಕ ಸಂಘಸಂಸ್ಥೆಗಳನ್ನು ಹುಟ್ಟುಹಾಕಿ ಮಹಿಳೆಯರ ಸರ್ವತೋಮುಖ ಅಭಿವೃದ್ಧಿಗೆ ಕಾರಣರಾದರು. ಅಲ್ಲದೆ, ಸುಧಾರಣಾವಾದಿ ಚಟುವಟಿಕೆಗಳಿಂದ ಪ್ರಭಾವಿತರಾದ ಮೈಸೂರಿನ ಕೆಲ ವ್ಯಕ್ತಿಗಳು ಕೊನೆಯಪಕ್ಷ ಈ ಬಗ್ಗೆ ಅಕಾಡೆಮಿಕ್ ಆಸಕ್ತಿಯನ್ನಾದರೂ ತೋರಿಸಿ ಮೂರು ಸಂಘಟನೆಗಳನ್ನು ಹುಟ್ಟುಹಾಕಿದರು. ಅವೆಂದರೆ, 'ಬೆಂಗಳೂರು ಲಿಟರರಿ ಯೂನಿಯನ್', 'ರಾನಡೆ ಸೊಸಟಿ' ಮತ್ತು 'ವಿಧವಾ ವಿವಾಹ ಸಂಘ'.

1870ರಲ್ಲಿ ಆರಂಭಗೊಂಡ ಬೆಂಗಳೂರು ಲಿಟರರಿ ಯೂನಿಯನ್ ಸಮಾಜ ಸುಧಾರಣೆ ಕುರಿತಂತೆ ಪ್ರಮುಖ ಸುಧಾರಣಾವಾದಿಗಳಿಂದ ಭಾಷಣಗಳನ್ನು ಏರ್ಪಡಿಸಿತು. ಆದರೆ

ಸಂಪ್ರದಾಯವಾದಿಗಳೇ ಪ್ರಧಾನವಾಗಿದ್ದ ಈ ಸಂಘ ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸುವುದನ್ನು ದಾಟಿ ಮುಂದೆ ಸಾಗಲಿಲ್ಲ. ಹಾಗೆಯೇ ಯೂರೋಪಿಯನ್ನನೊಬ್ಬನ ನಾಯಕತ್ವದಲ್ಲಿ ತನ್ನ ಆರಂಭಿಕ ಹಂತದಲ್ಲಿ ಚಟುವಟಿಕೆಯಿಂದಿದ್ದ ರಾನಡೆ ಸೊಸೈಟಿ ಕಾಲಕ್ರಮೇಣ ಸುಧಾರಣಾ ಚಟುವಟಿಕೆಗಳ ಬಗ್ಗೆ ಆಸಕ್ತಿಯಿರದ ಸ್ಥಳೀಯ ಸಂಪ್ರದಾಯ ವಾದಿಗಳ ಕೈಗೆ ಸಿಕ್ಕಿ ಬಸವಳಿಯಿತು. ಅಷ್ಟೇ ಅಲ್ಲ ಹಣ ದುರುಪಯೋಗದ ಸಮಸ್ಯೆಯಿಂದಾಗಿ ಸೊಸೈಟಿಯನ್ನು ಮುಚ್ಚಬೇಕಾಗಿಯೂ ಬಂತು.

ಇನ್ನುಳಿದ ಕೆಲವು ವ್ಯಕ್ತಿಗಳು ಸೇರಿ ಮಿಷನರಿಗಳು ಹಾಗೂ ಯೂರೋಪಿಯನ್ನರ ಸಹಾಯದಿಂದ ಬೆಂಗಳೂರು ಹಾಗೂ ಮೈಸೂರುಗಳಲ್ಲಿ ವಿಧವಾ ವಿವಾಹ ಸಂಘಗಳನ್ನು ಆರಂಭಿಸಿದರು. ಆದರೆ ಈ ಎರಡೂ ಸಂಘಗಳು ತಮ್ಮ ಮೊದಲ ಸಭೆಯ ನಂತರ ಮುಂದುವರಿಯಲಿಲ್ಲ. ವೈಯಕ್ತಿಕ ಭಿನ್ನಾಭಿಪ್ರಾಯಗಳ ಕಾರಣಗಳಿಂದಾಗಿ ಈ ಸಂಘಗಳು ಮುಂದುವರಿಯಲಿಲ್ಲವೆಂದೂ ಹೇಳಲಾಗಿದೆ. ಅಂತೂ ತಾವು ಕೈಗೊಂಡ ಕೆಲಸವನ್ನು ಮುಂದುವರಿಸಲು ಬೇಕಾದ ಬದ್ಧತೆ ಅವರಿಗಿರಲಿಲ್ಲ ಎಂಬುದು ಸ್ಪಷ್ಟ.

ಈ ಬಗೆಯ ಸನ್ನಿವೇಶದಲ್ಲಿ ತೀವ್ರ ಸುಧಾರಣೆಗಳನ್ನು ಪ್ರತಿಪಾದಿಸುವ ಚಳುವಳಿಗಳನ್ನು ಸಂಘಟಿಸುವುದು ಅತ್ಯಂತ ಪ್ರಯಾಸಕರ ಕೆಲಸವಾಗಿತ್ತು. ಹೀಗಿದ್ದಾಗಲೂ 1870ರ ಕೊನೆಯ ಹೊತ್ತಿಗೆ ಮಹಿಳಾ ಶಿಕ್ಷಣ ಕುರಿತಂತೆ ಕೆಲವರಾದರೂ ಆಸಕ್ತಿ ತೋರಲಾರಂಭಿಸಿದರು.

ಇನ್ನು ಮುಂದೆ ಅಂಥ ಕೆಲವು ಪ್ರಮುಖ ಸಂಸ್ಥೆಗಳನ್ನು ವಿವರಿಸಿಕೊಳ್ಳಬಹುದು.

## ಭಗಿನಿ ಸೇವಾಸಮಾಜ

ಪುಣೆಯ ಸೇವಾ ಸದನದ ಚಟುವಟಿಕೆಗಳಿಂದ ಸ್ಫೂರ್ತಿ ಪಡೆದ ದಿ.ವೈ.ಕೆ.ಅಮೃತಾಬಾಯಿ ಅವರು 1923ರಲ್ಲಿ ಭಗಿನಿ ಸೇವಾಸಮಾಜವನ್ನು ಮೈಸೂರಿನಲ್ಲಿ ಸ್ಥಾಪಿಸಿದರು. ಮಹಿಳೆಯರ ಸಾಂಸ್ಕೃತಿಕ ಪ್ರಗತಿಗೆ ಅವಕಾಶಗಳನ್ನು ಒದಗಿಸುವುದೇ ಅದರ ಮುಖ್ಯ ಗುರಿಯಾಗಿತ್ತು. ಶೈಕ್ಷಣಿಕ ಸಂಸ್ಥೆಗಳನ್ನು ನಡೆಸುತ್ತಿರುವ ಈ ಸಂಸ್ಥೆ ಸಂಗೀತ ತರಗತಿಗಳನ್ನು ಸ್ತ್ರೀಯರಿಗಾಗಿ ನಡೆಸುತ್ತಿತ್ತು. ಇದಲ್ಲದೆ, ಕ್ರೀಡೆಗಳಲ್ಲೂ ಬಾಲ್ ಬ್ಯಾಡ್ಮಿಂಟನ್, ಟೆನ್ನಿಕಾಯ್, ಥ್ರೋಬಾಲ್, ಖೋಖೋ, ಟೇಬಲ್ ಟೆನ್ನಿಸ್, ಚದುರಂಗ, ಪಗಡೆ ಇತ್ಯಾದಿ ಆಟಗಳಿಗೆ ಅನುಕೂಲತೆ ಕಲ್ಪಿಸುತ್ತಿದೆಯಲ್ಲದೆ ಸ್ಪರ್ಧೆಗಳನ್ನು

ನಡೆಸಲು ಪ್ರಾರಂಭಿಸಿತು. ಇದು ಮೈಸೂರು ಮಹಿಳೆಯರ ಧಾರ್ಮಿಕ ಬದುಕಿಗೂ ಹೊಸ ಆಯಾಮವನ್ನು ನೀಡಿತು.

## ವಾಣಿವಿಲಾಸ ಮಹಿಳಾ ಕ್ಲಬ್

1922ರಲ್ಲಿ ಮಹಾರಾಣಿ ಶ್ರೀ ವಾಣಿವಿಲಾಸ ಸನ್ನಿಧಾನದವರು ವಾಣಿವಿಲಾಸ ಮಹಿಳಾ ಕ್ಲಬ್‌ನ್ನು ಸ್ಥಾಪಿಸಿದರು. ಮೈಸೂರಿನ ಮಹಿಳೆಯರಿಗೆ ಸಾಂಸ್ಕೃತಿಕ, ಸಾಮಾಜಿಕ ಹಾಗೂ ಮನರಂಜನಾ ಚಟುವಟಿಕೆಗಳಿಗೆ ಅಗತ್ಯವಾದ ಅವಕಾಶಗಳನ್ನು ಒದಗಿಸುವುದೇ ಈ ಕ್ಲಬ್‌ನ ಮುಖ್ಯ ಉದ್ದೇಶವಾಗಿತ್ತು.

ಟೇಬಲ್ ಟೆನ್ನಿಸ್, ಬ್ರಿಜ್, ಷಟಲ್, ಬಾಲ್ ಬ್ಯಾಡ್ಮಿಂಟನ್, ಟೆನ್ನಿಕಾಯ್, ಥ್ರೋಬಾಲ್ ಮುಂತಾದ ಕ್ರೀಡಾ ಚಟುವಟಿಕೆಗಳನ್ನು ಈ ಕ್ಲಬ್ ಏರ್ಪಡಿಸುತ್ತಿತ್ತು.

ಇದಲ್ಲದೆ, ರಾಜ್ಯ ಮತ್ತು ರಾಷ್ಟ್ರ ಉತ್ಸವಗಳು, ಧಾರ್ಮಿಕ ಉತ್ಸವಗಳು ಮುಂತಾದವು ಈ ಕ್ಲಬ್‌ಗೆ ಅನೇಕ ಕಾರ್ಯಕ್ರಮಗಳನ್ನು ಏರ್ಪಡಿಸಲು ಅನುವು ಮಾಡಿಕೊಡುತ್ತಿದ್ದವು. ವಿಶ್ಲೇಷಣಾತ್ಮಕವಾಗಿ ಈ ಕ್ಲಬ್ ಕೇವಲ ಸಿರಿವಂಥ ಸ್ತ್ರೀಯರಿಗೆ ಅವಕಾಶಗಳನ್ನು ಒದಗಿಸುತ್ತಿತ್ತಾದರೂ ಆ ಕಾಲದಲ್ಲಿ ಇದೇ ಮಹತ್ವದ ಬೆಳವಣಿಗೆ ಎನ್ನುವಂತಿಲ್ಲ.

## ಶಾರದ ಸ್ತ್ರೀ ಸಮಾಜ ಟ್ರಸ್ಟ್

4ನೇ ಮೇ 1990ರಲ್ಲಿ ಅಂದಿನ ಮುಖ್ಯಮಂತ್ರ ವೀರೇಂದ್ರ ಪಾಟೀಲ್ ಹೀಗೆಂದು ಅಭಿನಂದನಾ ಪತ್ರವನ್ನು ಬರೆದಿದ್ದರು. "ಬೆಂಗಳೂರಿನ ಚಾಮರಾಜಪೇಟೆಯ ಶಾರದ ಸ್ತ್ರೀ ಸಮಾಜವು ತನ್ನ ಅಮೃತೋತ್ಸವ ಸಮಾರಂಭವನ್ನು ಇದೇ ತಿಂಗಳ 10 ರಂದು ನೆರವೇರಿಸುತ್ತಿರುವುದನ್ನು ತಿಳಿದು ಅತ್ಯಂತ ಸಂತೋಷವಾಯಿತು. ಏಳೂವರೆ ದಶಕಗಳಿಗೂ ಹೆಚ್ಚು ಕಾಲ ಮಹಿಳೆಯರ ಶ್ರೇಯಸ್ಸಿಗಾಗಿ ಶ್ರಮಿಸುತ್ತಿರುವ ಈ ಸಂಸ್ಥೆಯ ಯಶಸ್ಸು ಅದರ ಸ್ಥಾಪಕರ, ಕಾರ್ಯಕರ್ತರ ನಿಸ್ವಾರ್ಥ, ನಿರಂತರ ಸೇವೆಗೆ ಸಾಕ್ಷಿಯಾಗಿದೆ. ಮಹಿಳೆಯರ ಶಿಕ್ಷಣ, ಮಕ್ಕಳ ಏಳಿಗೆ, ಸ್ವಯಂ ಉದ್ಯೋಗ ಮುಂತಾದ ಕ್ಷೇತ್ರಗಳಲ್ಲಿ ಈ ಸಮಾಜ ಸಲ್ಲಿಸಿರುವ ಸೇವೆ ಆದರಣೀಯ, ಅನುಕರಣೀಯ."[8]

ಈ ಮೇಲಿನ ಮಾತುಗಳು ಶಾರದ ಸ್ತ್ರೀ ಸಮಾಜಕ್ಕೆ ಹಿಡಿದ ಕನ್ನಡಿಯಾಗಿದೆ. ಇಂಥ ಮಹತ್ವದ ಸಂಸ್ಥೆಯನ್ನು ಲೇಡಿ ಪಾರ್ವತಮ್ಮ ಪುಟ್ಟಣ್ಣಚೆಟ್ಟಿ ಅವರು ಸ್ಥಾಪಿಸಿದರು. ಮಹಿಳೆಯರ ಕೈಗಾರಿಕಾ ಶಾಲೆಯಾಗಿ ಪ್ರಾರಂಭವಾದ ಈ ಸಮಾಜಕ್ಕೆ ಶ್ರೀಮತಿ ಲೇಡಿ ಪಾರ್ವತಮ್ಮನವರೇ ಅಜೀವ ಅಧ್ಯಕ್ಷಣಿಯಾಗಿದ್ದು ಅದರ ಸರ್ವತೋಮುಖ ಏಳಿಗೆಗಾಗಿ ಶ್ರಮಿಸಿರುವುದನ್ನು ನಾವು ಇಂದು ಸ್ಮರಿಸಲೇ ಬೇಕಾಗಿದೆ. ಅವರು 1956ರ ತನಕ ಈ ಸಮಾಜವನ್ನು ಮುನ್ನಡೆಸಿದರು.

ಪ್ರಾರಂಭದಲ್ಲಿ ಕೇವಲ ಕೈಗಾರಿಕಾ ಹಾಗೂ ಶಿಶುವಿಹಾರ ತರಗತಿಗಳನ್ನು ಹೊಂದಿದ್ದ ಈ ಸಮಾಜವು ಕ್ರಮೇಣ ಅನೇಕ ಶಿಕ್ಷಣ ಶಾಖೆಗಳನ್ನು ಆರಂಭಿಸಿತು. ಚಿತ್ತದ ಕೆಲಸ, ಹೊಲಿಗೆ ಕೆಲಸದ ತರಗತಿಗಳಲ್ಲಿ ಮೊದಲು ಕೇವಲ 28 ಮಂದಿ ಮಾತ್ರ ಶಿಕ್ಷಣ ಪಡೆಯುತ್ತಿದ್ದರು. ಶಿಕ್ಷಣ ಪಡೆದವರ ಸಂಖ್ಯೆ ಕ್ರಮೇಣ ಹೆಚ್ಚಿದಂತೆ ಸಮಾಜವು ತನ್ನ ಕಾರ್ಯಕ್ಷೇತ್ರಗಳನ್ನು ವಿಸ್ತರಿಸುವುದು ಅಗತ್ಯವೂ ಆಯಿತು. ಪರಿಣಾಮವಾಗಿ ಶಿಕ್ಷಣದ ವಿವಿಧ ಭಾಗಗಳನ್ನು ತೆರೆಯಲಾಯಿತು. ಹೀಗೆ ಇಂದಿಗೂ ಈ ಸಮಾಜವು ಬೆಂಗಳೂರಿನಲ್ಲಿ ಸುಮಾರು 2000 ಮಂದಿ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಶಿಕ್ಷಣವನ್ನು ನೀಡುತ್ತಿದೆ.

## ಚಿಲ್ಡ್ರನ್ಸ್ ಬುಕ್ ಕೌನ್ಸಿಲ್

ಮಕ್ಕಳ ಪುಸ್ತಕ ಸಂಘ ಎಂಬುದು ಅದರ ಅನುವಾದ. ಈ ಸಂಸ್ಥೆಯು ಮಕ್ಕಳ ಮತ್ತು ಮಹಿಳೆಯರ ಪುರೋಭಿವೃದ್ಧಿಗೆ 1937ರಲ್ಲಿ ಪ್ರಾರಂಭವಾದ ವನಿತಾಸದನದಲ್ಲಿ 1938ರಲ್ಲಿ 'ನರ್ಸರಿ' ವಿಭಾಗವು ಪ್ರಾರಂಭವಾಯಿತು. ಸದನದ ಸ್ಥಾಪಕರಾದ ಶ್ರೀ ನಾಗೇಶ್‌ರಾವ್‌ರವರು ನರ್ಸರಿ ತರಗತಿಯ ಬಗ್ಗೆ ವಿಶೇಷ ಆಸಕ್ತಿ ಹೊಂದಿದ್ದರು. ಶಾಲೆಗಳಲ್ಲಿ ಮಕ್ಕಳಿಗೆ ಬೋಧಿಸುವ ವಿಧಾನವನ್ನು ಗುರುತಿಸಿ, ಅದಲ್ಲಿರುವ ಕುಂದುಕೊರತೆಗಳನ್ನು ನಿವಾರಿಸಲು ಮಾರ್ಗವನ್ನು ಹುಡುಕಲು 1947 ಫೆಬ್ರವರಿಯಲ್ಲಿ 'ಶಿಶು ಶಿಕ್ಷಣ ಗೋಷ್ಠಿ' ಯನ್ನು ವನಿತಾಸದನದಲ್ಲಿ ಏರ್ಪಡಿಸಿದರು. ಅಂದು ಆ ಸಮಾವೇಶದಲ್ಲಿ ಡಾ.ಕಿಣಿಯವರು ಮಾಡಿದ ಭಾಷಣದಿಂದ ಸ್ಫೂರ್ತಿಗೊಂಡು 1947ರಲ್ಲಿ ಶಿಶು ಸಾಹಿತ್ಯ ಸಂಘವನ್ನು ಅವರೇ ಪ್ರಾರಂಭಿಸಿದರು. ಈ ಸಂಘವು 1997ರಲ್ಲಿ ತನ್ನ ಸುವರ್ಣ ಮಹೋತ್ಸವವನ್ನು ಆಚರಿಸಿಕೊಂಡಿತು.

ಶಿಶು ಸಾಹಿತ್ಯ ಸಂಘವು ಇಡೀ ಭಾರತಕ್ಕೆ ಆಗ ಹೊಸದಾದ ಸಂಸ್ಥೆ. ಈ ಸಂಘದ ಮೊದಲನೇ ಪುಸ್ತಕ ಪ್ರದರ್ಶನವು 1947ರ ನವೆಂಬರ್ ತಿಂಗಳಿನಲ್ಲಿ ಮೈಸೂರಿನ ಸಹಕಾರ ಭವನದಲ್ಲಿ ನಡೆಯಿತು. ಮಕ್ಕಳಿಗೆ ಅದೊಂದು ದೊಡ್ಡ ಹಬ್ಬವಾಗಿತ್ತು. ಈ ದೇಶದ ಮೂಲೆ ಮೂಲೆಗಳಿಂದಷ್ಟೇ ಅಲ್ಲದೆ, ಹೊರದೇಶಗಳಿಂದಲೂ ಬಹು ರಮ್ಯವಾದ ಚಿತ್ರ ವಿಚಿತ್ರವಾದ ಪುಸ್ತಕಗಳು ಪ್ರದರ್ಶನಕ್ಕೆ ಬಂದಿದ್ದವು.

1947ನೇ ನವೆಂಬರ್ 27ನೇ ತಾರೀಖು ಶಿಶುಸಾಹಿತ್ಯ ಸಂಘವು ತನ್ನ ಮೊದಲನೇ 'ಕಂದ' ಪತ್ರಿಕೆಯನ್ನು ಹೊರತಂದಿತು. ತದನಂತರದಲ್ಲಿ ಶಿಶುಕೂಟಗಳು, ಶಿಶುಕ್ರೀಡೆಗಳು, ಸ್ಪರ್ಧೆಗಳು ಮುಂತಾಗಿ ಮಕ್ಕಳ ಕಲಿಕೆಯನ್ನು ಈ ಸಂಘ ವಿತರಿಸುವಲ್ಲಿ ಮಹತ್ವದ ಕೊಡುಗೆಯನ್ನು ಇಂದಿಗೂ ನೀಡುತ್ತಿರುವುದು ಸಂತಸದ ಸಂಗತಿ.

**ಅಖಿಲ ಕರ್ನಾಟಕ ಮಕ್ಕಳ ಕೂಟ (ರಿ)**

ಈ ಸಂಸ್ಥೆಯನ್ನು ಸ್ಥಾಪಿಸಿದವರು ನಾಡಿನ ಹೆಸರಾಂತ ಮಹಿಳೆ ಶ್ರೀಮತಿ ಕಲ್ಯಾಣಮ್ಮನವರು. ಮಕ್ಕಳನ್ನು ಪ್ರೀತಿಸುವುದೆಂದರೆ ಪರಮಾತ್ಮನನ್ನು ಪೂಜಿಸುವುದೆಂದೇ ಪ್ರಾಜ್ಞರ ವಿಚಾರ. ರವೀಂದ್ರನಾಥ ಠಾಕೂರ್‌ರವರು ಎಂದಿದ್ದಾರೆ. ಕವಿ ಕುವೆಂಪುರವರು "ಕಂದನಲಿ ಶಿವನ ಬಂಧನವ ಕಾಣುವುದೇ ಮುಕ್ತಿ" ಎನ್ನುವಾಗ ಮಕ್ಕಳ ಮುಗ್ಧತೆ, ನಿಷ್ಕಪಟ ಹೃದಯ, ಪವಿತ್ರ ಭಾವನೆಗಳೇ ಧ್ವನಿಸುತ್ತವೆ. ಜನಪದ ಹೆಣ್ಣುಮಗಳು ಮಗುವಿನ "ಕಣನೋಟ ಶಿವನ ಕೈಯಲಗು" ಎಂದು ಭಕ್ತಿ ನುಡಿಯನ್ನಾಡುತ್ತಾಳೆ. ಮಕ್ಕಳ ಕಲ್ಯಾಣಕ್ಕಾಗಿ ಶ್ರಮಿಸಿದ ಉದಾತ್ತ ಪುಣ್ಯಜೀವಿಗಳಲ್ಲಿ ದಿವಂಗತ ಆರ್.ಕಲ್ಯಾಣಮ್ಮನವರ ಸೇವೆ ಸ್ಮರಣೀಯವಾದುದು. ಮಕ್ಕಳ ಮಹಿಳೆಯರ ಅಭಿವೃದ್ಧಿಯಲ್ಲಿ ಬಹುಮುಖ ಕ್ರಿಯಾಶೀಲರಾಗಿದ್ದ ಅವರು ಇಂದಿನ ನಾಗರಿಕ ಮಹಿಳೆಯರಿಗೆ ಅನುಕರಣೀಯರಾಗಿದ್ದಾರೆ.

ಮಕ್ಕಳ ಹಿತದೃಷ್ಟಿಗೆ ಸ್ಪಂದಿಸಿ ಶ್ರೀಮತಿ ಆರ್.ಕಲ್ಯಾಣಮ್ಮರವರ ಚಿಂತನಗಳ ಅನುಭವದ ಮೂಸೆಯಲ್ಲಿ ಮೂಡಿಬಂದ ಪತ್ರಿಕೆ 'ಸರಸ್ವತಿ'. "ಬೆಳೆಯುವ ಕುಡಿ ಮೊಳಕೆಯಲ್ಲಿಯೇ" ಎಂಬಂತೆ ಮಕ್ಕಳನ್ನು ಸತ್ಪ್ರಜೆಗಳನ್ನಾಗಿ ರೂಪುಗೊಳಿಸಲು ಅವರು ಸಲ್ಲಿಸದ ಸೇವೆ ಅವಿಸ್ಮರಣೀಯ. ಅವರು ಬಾಳಿದ ಬದುಕು, ಅವರು ಹೊಂದಿದ್ದ ಉಚ್ಚ ಆದರ್ಶಗಳು ಎಂದೆಂದಿಗೂ ಅನುಕರಣೀಯ.

ನಿಜಕ್ಕೂ ಅವರು ಮಕ್ಕಳ ಸರ್ವತೋಮುಖ ಏಳಿಗೆಗೆ ಹೆಚ್ಚು ಒತ್ತು ಕೊಟ್ಟರು. ಮಕ್ಕಳು ನಾಡಿನ ಮಹಾನ್ ಸಂಪತ್ತು. ಕಲ್ಯಾಣಮ್ಮನವರು 1937ರಲ್ಲಿ ಮಕ್ಕಳ ಕೂಟವನ್ನು ಸ್ಥಾಪಿಸಿ ಮಕ್ಕಳ ಬದುಕಿನಲ್ಲಿ ಹೊಸ ಗೆಲುವು, ಹೊಸ ನಲಿವು, ಹೊಸ ಚೆಲುವು ಬರುವಂತೆ ಮಾಡಿದರು. ಪದ್ಯ ಹೇಳುವುದು, ಕಟ್ಟುವುದು, ನಾಟಕವಾಡುವುದು, ಸಭೆಯಲ್ಲಿ ದಿಗಿಲಿಲ್ಲದೆ ಮಾತಾಡುವುದು, ಚಿತ್ರ ಬಿಡಿಸುವುದು, ಕಸೂತಿ ಮುಂತಾದ ಕೈ ಕಲೆಗಳಲ್ಲಿ ಕೌಶಲ ತೋರಿಸುವುದು ಇವಕ್ಕೆಲ್ಲ ದೊಡ್ಡ ಅವಕಾಶ ಒದಗಿಸಿಕೊಟ್ಟರು. ಬೆಂಗಳೂರು ಶಾಲಾ ಮಕ್ಕಳ ಕಲೆಗಳ ಮೊದಲ ಪ್ರದರ್ಶನವನ್ನು ಅವರು ಏರ್ಪಡಿಸಿದಾಗ ದೊಡ್ಡವರು ಬೆರಗಾದರು. ಬೆಂಗಳೂರಿನಲ್ಲಿ ಬೆಳಗಿನ ಬೆಳಕಿನಂತೆ ಈ ಮಕ್ಕಳ ಕೂಟದ ಕೀರ್ತಿ ಹಬ್ಬಿದ್ದು ಮಿಕ್ಕ ಊರುಗಳಿಗೂ ಹರಡಿದ್ದು ಆಶ್ಚರ್ಯವಲ್ಲ. ಅರವತ್ತು ವರ್ಷಗಳಿಂದ ಮಕ್ಕಳ ಕೂಟದ ಮೂಲಕ ಕನ್ನಡ ದೇಶದ ಮಕ್ಕಳು ಲಾಭ ಪಡೆದು ಮುಂದಕ್ಕೆ ಬಂದಿದ್ದಾರೆಂದು ನಿರ್ಭಯವಾಗಿ ಹೇಳಬಹುದು.

## ಭಗಿನಿ ಮಂಡಳ

ನಾಡಿನ ಭಗಿನಿಯರ ಉನ್ನತಿಗಾಗಿ ಮಹಿಳೆಯರದೇ ಆದ ಒಂದು ಸಂಸ್ಥೆ ಅವಶ್ಯವೆಂದು 1922ರಲ್ಲಿ ಹುಬ್ಬಳ್ಳಿಯಲ್ಲಿ "ಭಗಿನಿ ಮಂಡಳ" ವನ್ನು ಉಮಾಬಾಯಿಯವರು ಪ್ರಾರಂಭಿಸಿದರು. ಉಮಾಬಾಯಿಯವರು ಅದರಲ್ಲಿ ಸೇರಿ ಅವರ ಕಾರ್ಯಕಲಾಪಗಳಲ್ಲಿ ಭಾಗವಹಿಸ ಹತ್ತಿದರು. ಗಂಗೂತಾಯಿ ಶೇವಡೆ, ಉಮಾಬಾಯಿ ಜೋಶಿ, ಕಮಲಕ್ಕಾ ಪಾಚಲಗ ಮತ್ತು ಪ.ವಾ.ರಂಭಕ್ಕೆ ಮುದವೇಡಕರ ಇವರು ಆ ಸಂಸ್ಥೆಯ ಕಾರ್ಯಕ್ಷೇತ್ರವನ್ನು ವಿಸ್ತರಿಸಿ ಒಳ್ಳೆ ಹುರುಪಿನಿಂದ ಕಾರ್ಯ ಮಾಡುತ್ತಿದ್ದರು.

ಭಗಿನಿ ಮಂಡಳದವರು ಹುಬ್ಬಳ್ಳಿಯ ಕಿಲ್ಲೆಯಲ್ಲಿಯ ಒಂದು ಸಣ್ಣ ಮನೆಯಲ್ಲಿ ಟಿಳಕ ಕನ್ಯಾ ಶಾಲೆಯೊಂದನ್ನು ಆರಂಭಿಸಿದ್ದರು. ಉಮಾಬಾಯಿಯವರು ಈ ಶಾಲೆಯ ಸಂಪೂರ್ಣ ಹೊಣೆಯನ್ನು ತಾವು ಹೊತ್ತನಂತರ ಅದಕ್ಕೆ ಪ್ರಶಸ್ತವಾದ ಸ್ಥಳವನ್ನೊದಗಿಸಿಕೊಡುವುದಕ್ಕಾಗಿ ಕರ್ನಾಟಕ ಪ್ರೆಸ್ಸಿಗೆ ಅದನ್ನು ಸ್ಥಳಾಂತರಿಸಿದರು. ಮಹಿಳೆಯರಿಗೆ ರಾಷ್ಟ್ರೀಯ ಪದ್ಧತಿಯಲ್ಲಿ ಶಿಕ್ಷಣ ದೊರೆಯಬೇಕು, ಸ್ತ್ರೀಯರಲ್ಲಿ ರಾಷ್ಟ್ರೀಯ ವಿಚಾರಗಳ ಬೆಳವಣಿಗೆಯಾಗಬೇಕು ಎಂಬ ಉದ್ದೇಶಕ್ಕೆ ಟಿಳಕ ಕನ್ಯಾ ಶಾಲೆ, ಟಿಳಕ ಕನ್ಯಾ ಮೇಳಾ ಮೊದಲಾದವುಗಳು ಪ್ರಚಾರ ಸಾಧನಗಳಾಗಿದ್ದವು. ಹತ್ತು ವರ್ಷಗಳವರೆಗೆ ಈ ಸಂಸ್ಥೆ ನಡೆಯಿತು. ಭಗಿನಿ ಮಂಡಳದ ಮುಖಾಂತರ

ಉಮಾಬಾಯಿಯವರು ಕೇವಲ ಹುಬ್ಬಳ್ಳಿಯಲ್ಲಷ್ಟೇ ಅಲ್ಲ, ನಾಡಿನ ಅನೇಕ ಭಾಗಗಳೆಲ್ಲ ಸಂಚರಿಸಿ ಜನತೆಯಲ್ಲಿ ಅದರಲ್ಲಿಯೂ ಸ್ತ್ರೀಯರಲ್ಲಿ ರಾಷ್ಟ್ರೀಯ ಜಾಗ್ರತೆಯಾಗುವಂತೆ ಪ್ರಚಾರ ಮಾಡಿದರು.

ಭಗಿನಿ ಮಂಡಳವು ಈ ರೀತಿ ಪ್ರಭಾವೀ ಕಾರ್ಯ ಕೈಕೊಂಡದ್ದರ ಪರಿಣಾಮವಾಗಿ ಕರ್ನಾಟಕದ ಮಹಿಳಾ ಪ್ರಪಂಚದಲ್ಲಿ ಆ ಸಂಸ್ತೆಯ ಬಗ್ಗೆ ಆದರಾಭಿಮಾನಗಳು ತೋರಿ ಬರಲಾರಂಭಿಸಿದವರು. ತತ್ಪರಿಣಾಮವಾಗಿ 1924 ರಷ್ಟರ ಹೊತ್ತಿಗೆ ಹುಬ್ಬಳ್ಳಿಯ ಮಂಡಳವು ಕೇಂದ್ರವಾಗಿ ಬೇರೆ ಬೇರೆ ಜಿಲ್ಲೆಗಳಲ್ಲೆಲ್ಲ ಕೂಡಿ 14 ಮಂಡಳಗಳು ಸುಸಂಘಟಿತವಾಗಿ ಕಾರ್ಯಾರಂಭ ಮಾಡಿದವು. ಆದರೆ 1932ರ ರಾಷ್ಟ್ರೀಯ ಆಂದೋಲನ ಪ್ರಾರಂಭವಾದ ಕೂಡಲೆ ಭಗಿನಿಮಂಡಳವೂ ಭಗಿನಿ ಮಂಡಳದೊಡನೆ ಟಳಕ ಕನ್ಯಾ ಶಾಲೆಯಂಥ ಅಂಗಸಂಸ್ಥೆಗಳೂ ಅಕ್ರಮ ಕೂಟಗಳೆಂದು ಸರ್ಕಾರವು ಸಾರಿತು. ಈ ಸಂಸ್ಥೆಯ ಆಸ್ತಿಪಾಸ್ತಿಗಳ ಬಹುಭಾಗವನ್ನು ಜಪ್ತಿ ಮಾಡಿತು. ಆದರೂ ಅದು ಅನಂತರದಲ್ಲಿ ಮತ್ತಷ್ಟು ಶಕ್ತಿಯನ್ನು ಪಡೆದು ಉತ್ತರ ಕರ್ನಾಟಕದ ಮಹಿಳೆಯರಿಗೆ ಬಹುವಾದ ಸೇವೆಯನ್ನು ಸಲ್ಲಿಸುತ್ತಾ ಬಂದಿದೆ.

## 4.4 ಉಪಸಂಹಾರ

ಮೇಲೆ ಗುರುತಿಸಿದ ಸಂಸ್ಥೆಗಳು ಸಲ್ಲಿಸಿದ ಸೇವೆ ಮತ್ತು ಈ ಸಂಸ್ಥೆಗಳಿಂದ ತಯಾರಾದ ನಾಯಕಿಯರು ಮತ್ತು ವಿದ್ಯಾವಂತ ಮಹಿಳೆಯರನ್ನು ಹೆಸರಿಸಲು ಹೋದಲ್ಲಿ ಅದೇ ಮತ್ತೊಂದು ಸಂಶೋಧನೆಯಾದೀತು. ಈ ಸಂಸ್ಥೆಗಳಲ್ಲದೆ ಅನೇಕ ಇತರ ಸಂಘಟನೆಗಳೂ ಸಹ ಮಹಿಳೆಯರ ಉನ್ನತಿಗಾಗಿ ದುಡಿದಿವೆ ಎಂಬುದನ್ನು ನಾವು ಮರೆಯುವಂತಿಲ್ಲ. ಇಲ್ಲಿ ಕೆಲವನ್ನಷ್ಟೇ ಪ್ರಾತಿನಿಧಿಕವಾಗಿ ತೆಗೆದುಕೊಂಡು ಅವುಗಳ ಮೂಲಕ ಮಹಿಳೆಯರು ನೀಡಿರುವ ಸೇವೆಯನ್ನಷ್ಟೇ ಇಲ್ಲಿ ಗುರುತಿಸಲಾಗಿದೆ.

ಸಾಮಾಜಿಕ ಕ್ಷೇಮಾಭಿವೃದ್ಧಿ ವ್ಯವಸ್ಥೆಯಲ್ಲಿ ಸಾಮಾಜಿಕ ಕೆಲಸ ಕಾರ್ಯಗಳಿಗೆ ಸ್ವಯಂ ಸೇವಕರನ್ನು ಉಪಯೋಗಿಸಿಕೊಳ್ಳುವಲ್ಲಿ ಕೇವಲ ಚಾರಿತ್ರಿಕವಲ್ಲದೆ ಈಗ ಜಾರಿಯಲ್ಲಿರತಕ್ಕ ಮೂರು ಚಲನಾತ್ಮಕ ಶಕ್ತಿಗಳನ್ನು ನಾವು ಗಮನಿಸಲೇ ಬೇಕಾಗುತ್ತದೆ. ಮೊದಲನೆಯದು ಅವಶ್ಯಕತೆ. ಎರಡನೆಯದು ಸ್ತ್ರೀಯದಲ್ಲಿ ಹೆಚ್ಚಾಗಿ ಸೇವಾಮನೋಭಾವ ತಲೆದೋರಿತು. ಭಾರತ ದೇಶದಲ್ಲಿ ಅನೇಕ ರಾಜ್ಯಗಳಲ್ಲಿ ಸೇವಾಮನೋಭಾವ ಹೊಂದಿರತಕ್ಕ ಗಂಡಸರ, ಹೆಂಗಸರ, ಯುವಕರ

ಸಂಘಗಳು ಜನಾಂಗದ ಪರವಾಗಿ ಮತ್ತು ಅಭ್ಯುದಯಕ್ಕಾಗಿ ಅನೇಕ ವರ್ಷಗಳು ಆ ಕೆಲಸ ಮಾಡಿದವು. ಮೂರನೆಯ ಅಂಶವೆಂದರೆ ದೇಶ ಮತ್ತು ರಾಷ್ಟ್ರದ ಕ್ಷೇಮಾಭಿವೃದ್ಧಿ ಸಮಸ್ಯೆಗಳನ್ನು ಪರಿಹರಿಸುವಿಕೆಯಲ್ಲಿ ಸಹಾಯಕವಾಗುವುದೆಂಬುದು.

ಆದರೂ ಇನ್ನೂ ಸಹ ಎಲ್ಲಾ ಮಹಿಳೆಯರಿಗೆ ಲಿಂಗೀಯ ಸಮಾನತೆ ದೊರಕಬೇಕಿದೆ ಎಂಬುದನ್ನು ಮರೆಯುವಂತಿಲ್ಲ.

# ಅಡಿಟಿಪ್ಪಣಿಗಳು

1) ಸೂರ್ಯನಾಥ್ ಕಾಮತ್, ಕರ್ನಾಟಕ ಗೆಜೆಟಿಯರ್, ಭಾಗ-1, ಹಂಗ್ರಿ ಪ್ರಿಂಟರ್ಸ್, ಬೆಂಗಳೂರು, ಪು.282.
2) ಡಾ.ರಾಜಾರಾಮ ಹೆಗಡೆ, ಕುವೆಂಪು ಕಾದಂಬರಿಗಳಲ್ಲಿ ವಸಾಹತುಶಾಹಿ ಅನುಭವ ಸ್ವರೂಪ, ಸಂವಾದ, ಮಾರ್ಚ್-ಏಪ್ರಿಲ್ 1994, ಪು.27
3) ಡಾ.ರಾಜಾರಾಮ ಹೆಗಡೆ, ಕುವೆಂಪು ಕಾದಂಬರಿಗಳಲ್ಲಿ ವಸಾಹತುಶಾಹಿ ಅನುಭವ ಸ್ವರೂಪ, ಸಂವಾದ, ಮಾರ್ಚ್-ಏಪ್ರಿಲ 1994, ಪು.27-28.
4) Social organizations are private organizations that pursue activities to relieve suffering, promote the interests of the poor, protect the environment, provide basic services or undertake community development.
5) Sophy Sanger, "Practical problems of International Labour Legislation" in E.John Solano, Labour as an International Problem, 1920, p.135-136.
6) ಆಗಿನ ಕಾಲದ ಪ್ರಸಿದ್ಧವಾಗಿದ್ದ ಪತ್ರಿಕೆಗಳೆಂದರೆ, ಸಾಧ್ವಿ, ಒಕ್ಕಲಿಗರ ಪತ್ರಿಕೆ, ನುಡಿಗನ್ನಡಿ, ವಿದ್ಯಾದಾಯಿನಿ, ಕೊಡಗು, ಕಂಠೀರವ ಮುಂತಾದ ಪತ್ರಿಕೆಗಳು ಕಲ್ಯಾಣಮ್ಮನಂತವರ ನಾಯಕತ್ವವನ್ನು ಬೆಳೆಸಲು ಕಾರಣವಾದವು. ಮತ್ತಷ್ಟು ವಿವರಗಳಿಗೆ ನೋಡಿ, ಹೆಚ್.ಎಸ್.ಪಾರ್ವತಮ್ಮ, ಆರ್.ಕಲ್ಯಾಣಮ್ಮ ಜೀವನ ಮತ್ತು ಕಾರ್ಯ, ಕರ್ನಾಟಕ ಪ್ರಕಟನಾಲಯ, ಬೆಂಗಳೂರು, ಪು.6.
7) ಸೂರ್ಯನಾಥ್ ಕಾಮತ್, ಕರ್ನಾಟಕ ಗೆಜೆಟಿಯರ್, ಭಾಗ-1, ಹಂಗಿ ಪ್ರಿಂಟರ್ಸ್, ಬೆಂಗಳೂರು, ಪು.391.
8) ಶಾರದ ಸ್ತ್ರೀ ಸಮಾಜ ಟ್ರಸ್ಟ್ (ರಿ), ಅಮೃತ ಮಹೋತ್ಸವ ಸ್ಮರಣ ಸಂಚಿಕೆ 1913-1990, ಚಾಮರಾಜ ಪೇಟೆ, ಬೆಂಗಳೂರು, 1990, ಪು.6

# ಅಧ್ಯಾಯ-5

## ಸ್ತ್ರೀಯರ ಉನ್ನತಿಯ ಸಾಮಾಜಿಕ ಮಸೂದೆಗಳು

5.1 ಪೀಠಿಕೆ

5.2 ಮೈಸೂರು ಸಮಾಜದಲ್ಲಿ ಜಾರಿಯಾದ ಮಸೂದೆಗಳ ಸ್ವರೂಪ

5.3 ಸ್ತ್ರೀಯರಿಗೆ ಸಂಬಂಧಿಸಿದ ಮಸೂದೆಗಳು

5.4 ಉಪಸಂಹಾರ

## ೨.1 ಪೀಠಿಕೆ

"ಸ್ತ್ರೀಪುರುಷರು ಸ್ಥಾನಮಾನಗಳಲ್ಲಿ ಸರಿಸಮಾನರಾದರೂ ತದ್ರೂಪರಲ್ಲ. ಸ್ತ್ರೀಯು ಪುರುಷನ ಸಂಗಾತಿಯಾಗಿ ಸಮಾನ ಬೌದ್ಧಿಕ ಸಾಮರ್ಥ್ಯವನ್ನು ಪಡೆದವಳಾಗಿದ್ದಾಳೆ. ಮನುಷ್ಯನ ಚಟುವಟಿಕೆಗಳಲ್ಲಿ ಅತಿ ಕೂಲಂಕುಷವಾಗಿ ಭಾಗವಹಿಸಲು ಅಧಿಕಾರವುಳ್ಳವಳಾಗಿದ್ದಾಳೆ ಮತ್ತು ಅವನಷ್ಟೇ ಸ್ವತಂತ್ರತೆ ಸೌಲಭ್ಯಗಳನ್ನು ಪಡೆಯಲು ಬಾಧ್ಯತೆಯುಳ್ಳವಳಾಗಿದ್ದಾಳೆ" ಎಂದು ಮಹಾತ್ಮ ಗಾಂಧೀಜಿ ಹೇಳಿದ್ದಾರೆ.

ಸ್ತ್ರೀ ಪುರುಷರಿಬ್ಬರೂ ಪರಸ್ಪರ ಕಾರ್ಯರಂಗಗಳಲ್ಲಿ ಸಮಾನ ಸ್ಥಾನಮಾನವನ್ನು ಪಡೆದವರು. ಬುದ್ಧಿಯಲ್ಲಿ, ಕಾರ್ಯಕ್ಷಮತೆಯಲ್ಲಿ ಕುಟುಂಬ ಜೀವನದಲ್ಲಿ ಇಬ್ಬರೂ ಸರಿಸಮಾನರು. ಆದರೆ ಸಮಾಜ ರಚನೆಯಲ್ಲಿ ಸ್ತ್ರೀಯು ಕಾಲಾನುಕ್ರಮದಿಂದ ನಡೆದುಬಂದ ರೂಢಿ ಮೂಲಕವಾಗಿ ಸಮಾನಾಧಿಕಾರದಿಂದ ವಂಚಿಸಲ್ಪಟ್ಟು ಹಿಂದುಳಿದಿದ್ದಾಳೆ. ಮಾನವ ಕುಟುಂಬವು ಸಹಜ ಪ್ರವೃತ್ತಿಗಳ ಬೆಳವಣಿಗೆಯ ಜೊತೆಗೆ ನಾಗರೀಕತೆಯಲ್ಲಿ ಪ್ರಗತಿಯನ್ನು ಹೊಂದುತ್ತ ಬಂದಿದೆ. ಸಮಾಜವು ಅನಾಗರೀಕ ಸ್ಥಿತಿಯಲ್ಲಿದ್ದಾಗ ಶಾರೀರಿಕ ಬಲಿಷ್ಟತೆಗೆ ಪ್ರಾಮುಖ್ಯತೆ ದೊರೆತದು ಸಹಜವಾಗಿದೆ. ಬಲಿಷ್ಟತೆಯೇ ನ್ಯಾಯಾನ್ಯಾಯಗಳ ಅಳತೆಗೋಲಾಗಿದ್ದಾಗ ಉಳಿದ ಶಕ್ತಿಗಳೆಲ್ಲವೂ ಬದಿಗುಳಿಯುವುದು ಆಶ್ಚರ್ಯವೇನಲ್ಲ. ಅರಸೊತ್ತಿಗೆಯ ಕೃಪಾಛತ್ರದ ಕೆಳಗೆ ಕೆಲವರಿಗೆ ಮಾತ್ರ ನೆರಳು ದೊರೆತು ಸಾಮಾನ್ಯ ಜನತೆಗೆ ಪುಷ್ಟಿ ದೊರೆಯದೆ ಇದ್ದರೆ ಅಸ್ವಾಭಾವಿಕವಾದುದೇನೂ ಇಲ್ಲ. ಪ್ರಜಾಸತ್ತಾತ್ಮಕ ರಾಜ್ಯ ಸ್ಥಾಪನೆಯೇ ಸಮಾಜ ವಿಕಾಸದ ಹೆಗ್ಗುರುತು. ಇದಕ್ಕೆ ಮಹಿಳೆಯರ ಕೊಡುಗೆಯನ್ನು ಅಲ್ಲಗಳೆಯಲಾಗದು.

ಸಮಾಜ ಸುಧಾರಕರ ನಿರಂತರ ಹೋರಾಟದಿಂದ ಮತ್ತು ಬ್ರಿಟಿಷ್ ಉನ್ನತ ಅಧಿಕಾರಿಗಳ ಮನವರಿಕೆಯಿಂದ ಸತ್ರೀಯರ ವಿಮೋಚನೆ ಪ್ರಾರಂಭಗೊಂಡಿತು. ಸ್ತ್ರೀಯರ ವಿರುದ್ಧವಿದ್ದ ಅನಿಷ್ಟ ಪದ್ಧತಿಗಳನ್ನು ಶಾಸನಗಳ ಮೂಲಕ ತೊಡೆದು ಹಾಕಲಾಯಿತು. ಅವರ ಶಿಕ್ಷಣಮತ್ತು ಉದ್ಯೋಗವನ್ನು ಪ್ರೋತ್ಸಾಹಿಸಲಾಯಿತೆಂಬ ಅಂಶಗಳನ್ನು ಅಧ್ಯಾಯ ಮೂರರಲ್ಲಿ ನೋಡಿದ್ದೇವೆ. ಮಹಿಳಾ ಕಲ್ಯಾಣಕ್ಕಾಗಿ ಅನೇಕ ಸಂಘಸಂಸ್ಥೆಗಳನ್ನು 1910 ಮತ್ತು 1920ರ ಅವಧಿಯಲ್ಲಿ ಸ್ಥಾಪನೆಯಾದುದನ್ನು ಹಾಗೂ ಯಾರು ಅದಕ್ಕೆ ಕಾರಣಕರ್ತರು ಎಂಬುದನ್ನು ನಾಲ್ಕನೇ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಆದರೆ ಈ ಭಾಗದಲ್ಲಿ ಇಂತಹ ಸಂಸ್ಥೆಗಳು ಮತ್ತು ಸಮಾಜ

ಸುಧಾರಕ/ಕಿಯರಿಂದ ನಡೆದ ಅವಿರತ ಹೋರಾಟದ ಫಲವಾಗಿ ಸರ್ಕಾರ ತಂದ ಕಾನೂನುಗಳ ವಿಶ್ಲೇಷಣೆಯನ್ನು ಈ ಭಾಗದಲ್ಲಿ ಚರ್ಚೆಗೆ ತೆಗೆದುಕೊಳ್ಳಲಾಗುವುದು. ಮೊದಮೊದಲು ಉದಾರವಾದಿ ಪುರುಷರೇ ಇಂತಹ ಕಾಯಕಕ್ಕೆ ಎಂದಾದರು ಎಂದರೆ ಅತಿಶಯೋಕ್ತಿ ಯೇನಲ್ಲ. 19ನೇ ಶತಮಾನದ ಸುಧಾರಣಾ ಚಳುವಳಿಗಳು ಮಧ್ಯಮವರ್ಗ, ಉನ್ನತವರ್ಗ ಮತ್ತು ಉನ್ನತ ಜಾತಿಯ ಸ್ತ್ರೀಯರ ಏಳ್ಗೆಗೆ ಸಹಾಯಕವಾದವು. ಅವರು ಕುಟುಂಬ ವ್ಯಾಪ್ತಿಯಲ್ಲಿ ಮಹಿಳೆಯರ ಸ್ಥಾನಮಾನಗಳನ್ನು ಬದಲಾಯಿಸಲು ಪ್ರಯತ್ನಿಸಿದರೇ ಹೊರತು ಕುಟುಂಬದ ಹೊರಗೆ ಸತ್ರೀಯರ ಸಮಾನತೆ ಮತ್ತು ಶ್ರೇಯಸ್ಸಿಗೆ ಹೆಚ್ಚು ಗಮನ ನೀಡಲಾಗಲಿಲ್ಲ ಎನ್ನುವುದು ನಿಜವಾದರೂ 20ನೇ ಶತಮಾನದ ಆರಂಭಕ್ಕೆ ಅನೇಕ ಮಹಿಳಾ ನಾಯಕಿಯರು ಸಾರ್ವಜನಿಕ ರಂಗಕ್ಕೆ ಬಹಳಷ್ಟು ಕೊಡುಗೆಯನ್ನು ನೀಡುವುದನ್ನು ನಾವು ಕಾಣುತ್ತೇವೆ.

## 5.2 ಮೈಸೂರು ಸಮಾಜದಲ್ಲಿ ಜಾರಿಯಾದ ಮಸೂದೆಗಳ ಸ್ವರೂಪ

ಮಹಿಳೆಯರ ಸ್ಥಾನಮಾನಗಳಲ್ಲಿ ಸುಧಾರಣೆಯನ್ನು[1] ನಾವು ಮೂರು ಹಂತಗಳಲ್ಲಿ ಕಾಣುತ್ತೇವೆ.

### ಮೊದಲನೇಯ ಹಂತ

ಇದು 19ನೇ ಶತಮಾನದಿಂದ ಪ್ರಾರಂಭವಾಗುತ್ತದೆ. ಆಧುನಿಕ ಭಾರತದ ಜನಕನೆನಿಸಿರುವ ರಾಜಾರಾಮ್ ಮೋಹನರಾಯ್ ಅವರಿಂದ ಈ ಹಂತವು ಪ್ರಾರಂಭಗೊಳ್ಳುತ್ತದೆ. ಅವರು ಭಾರತೀಯ ಮಹಿಳೆಯರಲ್ಲಿ ಹೊಸ ಅರಿವಿಗೆ ಕಾರಣರಾದರು. ಬಾಲ್ಯವಿವಾಹ, ಬಹುಪತ್ನಿತ್ವ, ಸತಿಸಹಗಮನ ಪದ್ಧತಿ ಹಾಗೂ ವಿಧವಾ ವಿವಾಹದ ಮೇಲಿನ ನಿರ್ಬಂಧ; ಇಂತಹ ಮಹಿಳಾ ಸಮಸ್ಯೆಗಳನ್ನು ನಿವಾರಿಸಲು ಕಾನೂನಾತ್ಮಕ ಹೋರಾಟವನ್ನು ನಡೆಸಲು ಕಾರಣಕರ್ತರಾದರು. ಈ ಹೋರಾಟದ ಫಲವಾಗಿ 1829ರಲ್ಲಿ ಸತಿಸಹಗಮನ ಪದ್ಧತಿ ನಿಷೇಧ ಕಾಯ್ದೆಯು ಜಾರಿಗೆ ಬಂದಿತು. ಲಾರ್ಡ್ ವಿಲ್ಲಿಯಂ ಬೆಂಟಿಕ್ ಅವರು ಈ ಕಾಯ್ದೆಯನ್ನು ಜಾರಿಗೊಳಿಸಿ ಈ ಕಾಯ್ದೆಯ ಅನ್ವಯಕ್ಕಾಗಿ ಒಂದು ಜಾಗೃತ ದಳವನ್ನು ನೇಮಿಸಿದರು. ಈಶ್ವರಚಂದ್ರ ವಿದ್ಯಾಸಾಗರ ಅವರ ಪ್ರಯತ್ನದಿಂದ 1856ರಲ್ಲಿ ವಿಧವಾ ಪುನರವಿವಾಹ ಕಾಯಿದೆ[2] ಜಾರಿಗೆ ಬಂದಿತು. ಈ ಕಾಯಿದೆ ಮೈಸೂರಿನಲ್ಲಿ ಜಾರಿಯಾದಾಗ ಸಂಭವಿಸಿದ ಘಟನಾವಳಿಗಳನ್ನು ನಾವು ತದನಂತರದಲ್ಲಿ ಚರ್ಚಿಸುತ್ತೇವೆ.

1929ರಲ್ಲಿ ಬಾಲ್ಯವಿವಾಹ ನಿಷೇಧ ಕಾಯಿದೆಯು (ಶಾರದಾ ಕಾಯಿದೆ ಎಂದೇ ಹೆಸರಾಗಿದೆ) ವಿವಾಹದ ಕನಿಷ್ಟ ವಯಸ್ಸನ್ನು ಪುರುಷರಿಗೆ 19 ವರ್ಷವೆಂದು, ಹುಡುಗಿಯರಿಗೆ 14 ವರ್ಷವೆಂದು ನಿಗದಿ ಪಡಿಸಿತು. ಈ ಕಾಯಿದೆಗೆ ಮತ್ತೆ ತಿದ್ದುಪಡಿಯಾಗಿ ಆ ವಯೋಮಿತಿಯನ್ನು ಕ್ರಮವಾಗಿ 21 ಮತ್ತು 18 ವರ್ಷಗಳಿಗೆ ಏರಿಸಿದ್ದನ್ನು ನಾವು ಕಾಣುತ್ತೇವೆ. ಹೀಗೆ ಮಹಿಳೆಯರು ಎಚ್ಚೆತ್ತುಕೊಳ್ಳಲು ಅಗತ್ಯವಾದ ಪ್ರವೇಶವನ್ನು ಈ ಮೊದಲ ಹಂತ ನೀಡಿತ್ತೆಂದು ಹೇಳಬಹುದಾಗಿದೆ.

## ಎರಡನೇ ಹಂತ

ಮಹಿಳಾ ಸುಧಾರಣೆಯಲ್ಲಿ ಎರಡನೇ ಹಂತವು ಮಹಿಳಾ ಶಿಕ್ಷಣವನ್ನು ಒಳಗೊಂಡಿದೆ. ಹಿಂದೆ ಮಹಿಳೆಯರಿಗೆ ಶಿಕ್ಷಣವು ವರ್ಜ್ಯವಾಗಿತ್ತು. 1854ರಲ್ಲಿ ಮಹಿಳಾ ಶಿಕ್ಷಣಕ್ಕೆ ಸರ್ಕಾರವು ಧನಸಹಾಯವನ್ನು ಮಂಜೂರು ಮಾಡಿತು. ಹುಡುಗಿಯರು ಶಾಲೆಗೆ ಸೇರಿ ಅಕ್ಷರ ಕಲಿಯುವ ಅವಕಾಶವಾಯಿತು. ಶಿಕ್ಷಣ ಸಾರ್ವಜನಿಕವಾಗಿ ವಿಧವೆಯರಿಗೂ ವಯಸ್ಕ ಶಿಕ್ಷಣದ ಅವಕಾಶ ದೊರೆಯಿತು.

## ಮೂರನೇ ಹಂತ

ಈ ಹಂತದಲ್ಲಿ ಮಹಿಳೆಯರು ಸಾರ್ವಜನಿಕ ಮತ್ತು ರಾಜಕೀಯ ಕ್ಷೇತ್ರಗಳನ್ನು ಪ್ರವೇಶಿಸುವುದರಿಂದ ಮಹಿಳಾ ಚಳುವಳಿಯ ಮೂರನೇ ಹಂತ ಪ್ರಾರಂಭವಾಗುತ್ತದೆ. 1906ರಲ್ಲಿ ನಡೆದ ಭಾರತೀಯ ಮಹಿಳೆಯರ ಮೊದಲ ಸಮ್ಮೇಳನದಲ್ಲಿ ಮಹಿಳಾ ಸಮಸ್ಯೆಗಳ ಬಗ್ಗೆ ತೀವ್ರವಾದ ಚರ್ಚೆಗಳು ನಡೆಯುತ್ತವೆ. ಮುಂದೆ 1917ರ ವೇಳೆಗೆ ಭಾರತೀಯ ಮಹಿಳಾ ಸಂಘವು ಪ್ರಾರಂಭವಾಗಿ ಮುಂದಿನ 10 ವರ್ಷಗಳಲ್ಲಿ ಎಲ್ಲಾ ರಾಜ್ಯಗಳಲ್ಲೂ ಅದೇ ತರಹದ ಮಹಿಳಾ ಸಂಘಟನೆಗಳನ್ನು ಸ್ಥಾಪಿಸುವುದನ್ನು ಈ ಹಂತ ಒಳಗೊಳ್ಳುತ್ತದೆ. ಅಖಿಲ ಭಾರತ ಮಟ್ಟದ ಸಮ್ಮೇಳನವು 1927ರಲ್ಲಿ ಆಗಿ ಅದು ಮೊಟ್ಟಮೊದಲ ಮಹಿಳಾ ಸಮ್ಮೇಳನ ಎನಿಸಿಕೊಂಡಿತು. 1930ರ ಅಂತ್ಯದ ವೇಳೆಗೆ ಅತ್ಯಧಿಕ ಪ್ರಾತಿನಿಧ್ಯ ಹೊಂದಿರುವ ಸಂಘಗಳಲ್ಲಿ ಈ ಅಖಿಲ ಭಾರತ ಮಹಿಳಾ ಸಂಘಟನೆ ಎರಡನೆಯದ್ದೆನಿಸಿಕೊಂಡಿತು. ಮಕ್ಕಳು ಮತ್ತು ತಾಯಂದಿರ ಏಳಿಗೆಗಾಗಿ ಈ ಸಂಘಟನೆ ಮುಡಿಪಾಗಿಟ್ಟುಕೊಂಡಿತು.

ಈ ಮೇಲಿನ ಚೌಕಟ್ಟಿನಲ್ಲಿ ನಾವು ಮೈಸೂರು ಸಂಸ್ಥಾನದಲ್ಲಿ ಜಾರಿಯಾದ ಕಾಯಿದೆಗಳನ್ನು ಇನ್ನು ಮುಂದೆ ಚರ್ಚೆಗೆ ತೆಗೆದುಕೊಳ್ಳಬಹುದು.

## ೫.೩ ಸ್ತ್ರೀಯರಿಗೆ ಸಂಬಂಧಿಸಿದ ಮಸೂದೆಗಳು

ಮೈಸೂರು ಸಂಸ್ಥಾನ ಮಾದರಿ ಸಂಸ್ಥಾನ ಎಂದು ಕರೆಸಿಕೊಳ್ಳುವಲ್ಲಿ ಅದು ಪ್ರಗತಿಪರವಾಗಿ ಮಹಿಳೆಯರ ಹಕ್ಕುಗಳನ್ನು ಸ್ವೀಕರಿಸಿದ್ದೇ ಆಗಿದೆ. ಆದ್ದರಿಂದ ಆ ಕಾನೂನುಗಳನ್ನು ಇನ್ನು ಮುಂದೆ ವಿವರವಾಗಿ ಚರ್ಚೆಗೆ ತೆಗೆದುಕೊಳ್ಳೋಣ.

### 1) 1929ರ ಸತಿಸಹಗಮನ ಪದ್ಧತಿ ನಿಷೇಧದ ಕಾಯಿದೆ

ಈ ಕಾಯಿದೆಯ ಪ್ರಕಾರ ಮರಣ ಹೊಂದಿದ ಗಂಡನ ಶವದೊಡನೆ ಜೀವಂತವಾಗಿ ಹೆಂಡತಿಯನ್ನು ಸುಡುವುದನ್ನು ಅಥವಾ ಹೂಳುವುದನ್ನು ನಿಷೇಧಿಸಿ ಅಂತಹ ಕೃತ್ಯಗಳಿಗೆ ಪ್ರೋತ್ಸಾಹ ನೀಡುವುದು ಸಹ ಅಪರಾಧವಾಗುತ್ತದೆ. ಇದಕ್ಕೆ ದಂಡ ಮತ್ತು ಸೆರೆಮನೆ ವಾಸವಿರುತ್ತದೆ.

ಈ ಕಾನೂನು ಜಾರಿಯಾದಾಗ ಅದರ ವಿರುದ್ಧ ಭಾರತದ ಹಲವಾರು ಕಡೆಗಳಲ್ಲಿ ಪ್ರತಿಭಟನೆಗಳಾದವು. ಆದರು ಬ್ರಿಟಿಷ್ ಸರ್ಕಾರ ಅದಕ್ಕೆ ಜನ ಬೆಂಬಲವನ್ನು ಪಡೆಯುವಲ್ಲಿ ಸಫಲವಾಯಿತು. ಕಳೆದ ದಶಕದಲ್ಲೂ ಸತಿಪದ್ಧತಿ ಮತ್ತೆ ರಾಜಸ್ಥಾನದಲ್ಲಿ ಕಾಣಿಸಿಕೊಂಡದ್ದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.

### 2) 1856ರ ಹಿಂದೂ ವಿಧವಾ ಪುನರ್‌ವಿವಾಹ ಕಾಯಿದೆ

1856ರಲ್ಲಿ ಹಿಂದೂ ವಿಧವಾ ಪುನರ್‌ವಿವಾಹ ಕಾಯಿದೆಯನ್ನು ಜಾರಿಗೆ ತರಲಾಯಿತು. ಇದರ ವಾದ ಪ್ರತಿವಾದಗಳನ್ನು ಅನಂತರದಲ್ಲಿ ಚರ್ಚೆಗೆ ತೆಗೆದುಕೊಳ್ಳಲಾಗುವುದು. ಸಾಂಪ್ರದಾಯಿಕ ಹಿಂದೂ ಸಮಾಜದಲ್ಲಿ ವಿಧವಾ ವಿವಾಹ ನಿಷೇಧಿಸಲ್ಪಟ್ಟು ವಿಧವೆಯರ ಸ್ಥಿತಿ ಕರುಣಾಜನಕವಾಗಿತ್ತು. ಅವರನ್ನು ಆ ದುಃಸ್ಥಿತಿಯಿಂದ ದೂರಮಾಡಿ ಮತ್ತೆ ವಿವಾಹವಾಗಿ ನೆಮ್ಮದಿಯ ಬಾಳನ್ನು ಬಾಳಲು ಅನುವು ಮಾಡಿಕೊಡುವ ಸದುದ್ದೇಶದಿಮದ 1856ರಲ್ಲಿ ಸರ್ಕಾರ ಹಿಂದೂ ವಿಧವಾ ಪುನರ್‌ವಿವಾಹ ಕಾಯಿದೆಯನ್ನು ಜಾರಿಗೆ ತಂದಿತು. ಈ ಕಾಯಿದೆ ಜಾರಿಗೆ ಬಂದು ಜನಪ್ರಿಯವಾಗಲು ಮೈಸೂರಿನಲ್ಲಿದ್ದ ಅನೇಕ ಸುಧಾರಕರು ಕಾರಣರಾಗಿದ್ದಾರೆ. ಆದರೆ ಅದರ ಜಾರಿ ಸುಲಭದ ಪ್ರಶ್ನೆಯೇನೂ ಆಗಿರಲಿಲ್ಲ. ಈ ಕಾಯಿದೆಯ ಪ್ರಮುಖ ಅಂಶಗಳು ಈ ರೀತಿಯಲ್ಲಿವೆ.

ಅ) ಈ ಕಾಯಿದೆಯ ಒಂದನೆಯ ಪರಿಚ್ಛೇದದಲ್ಲಿ ವಿಧವಾ ವಿವಾಹವನ್ನು ಮತ್ತು ಆ ವಿವಾಹದಿಂದ ಜನಿಸಿದ ಮಕ್ಕಳನ್ನು ಕಾನೂನುಬದ್ಧವಾಗಿ ಸಮ್ಮತಿಸಿದ್ದು.

ಆ) ವಿಧವೆಯರ ಪುನರ್ ವಿವಾಹವಾದೊಡನೆ ಆಕೆಯು ತನ್ನ ಮರಣ ಹೊಂದಿದ ಪತಿಯ ಆಸ್ತಿಯ ಹಕ್ಕನ್ನು ಕಳೆದುಕೊಳ್ಳುತ್ತಾಳೆ.

ಇ) ಈ ಕಾಯಿದೆಯ ಐದನೆಯ ಪರಿಚ್ಛೇದದ ಪ್ರಕಾರ ವಿಧವೆಯು ತನ್ನ ಪುನರ್ವಿವಾಹದ ನಂತರ ವಿವಾಹಿತ ಮಹಿಳೆಗಿರುವ ಎಲ್ಲಾ ಹಕ್ಕುಗಳನ್ನು ಪುನಃ ಪಡೆಯುತ್ತಾಳೆ.

ಈ) ವಿಧವೆಯು ಅಪ್ರಾಪ್ತ ವಯಸ್ಕಳಾಗಿದ್ದರೆ ಪುನರ್ವಿವಾಹಕ್ಕೆ ಆಕೆಯು ತಂದೆತಾಯಿಯರ ಇಲ್ಲವೇ ಪಾಲರ ಅನುಮತಿ ಅವಶ್ಯಕವಾಗಿರುತ್ತದೆ.

### 3) 1872ರ ವಿಶೇಷ ವಿವಾಹ

ಈ ಕಾಯಿದೆಯು ಒಬ್ಬ ಪುರುಷನು ತನ್ನ ಒಳಬಾಂಧವ್ಯ ಸಮೂಹಕ್ಕೆ ಸೇರಿಲ್ಲದ ಸ್ತ್ರೀಯನ್ನು ವಿವಾಹವಾಗಲು ಅವಕಾಶ ಕಲ್ಪಿಸಿದ್ದನ್ನು ಒಳಗೊಂಡಿರುತ್ತದೆ. ಇದನ್ನು ಅಂತರ್‌ಜಾತಿ ವಿವಾಹ ಕಾಯಿದೆ ಎಂತಲೂ ಕರೆಯುತ್ತಾರೆ.

### 4) 1929ರ ಬಾಲ್ಯವಿವಾಹ ನಿಷೇಧ ಕಾಯಿದೆ

ಈ ಕಾಯಿದೆಯ ಪ್ರಕಾರ ಕಾಯಿದೆಯನ್ನು ಶಾರದಾ ಕಾಯಿದೆ ಎಂದೂ ಸಹ ಕರೆಯಲಾಗುತ್ತದೆ. ವಿವಾಹದ ಕನಿಷ್ಟ ವಯಸ್ಸನ್ನು ಪುರುಷರಿಗೆ 19 ವರ್ಷವೆಂದು, ಹುಡುಗಿಯರಿಗೆ 14 ವರ್ಷವೆಂದು ನಿಗದಿ ಪಡಿಸಿತು. ಈ ಕಾಯಿದೆಗೆ ಮತ್ತೆ ತಿದ್ದುಪಡಿಯಾಗಿ ಆ ವಯೋಮಿತಿಯನ್ನು ಕ್ರಮವಾಗಿ 21 ಮತ್ತು 18 ವರ್ಷಗಳಿಗೆ ಏರಿಸಿದ್ದನ್ನು ನಾವು ಕಾಣುತ್ತೇವೆ.

### 5) 1938ರ ಹಿಂದೂ ಉತ್ತರಾಧಿಕಾರ ಕಾಯಿದೆ

ಈ ಕಾಯಿದೆಯು ತನ್ನ ಜಾತಿಯ ಹೊರಗೆ ವಿವಾಹವಾಗುವ ಪುರುಷನ ಆಸ್ತಿಯನ್ನು ರಕ್ಷಿಸುವ ಹಕ್ಕನ್ನು ನೀಡುತ್ತದೆ. ಆದರೆ ಇದೇ ಹಕ್ಕು ಮಹಿಳೆಗೆ ಅನ್ವಯಿಸಲು ಅನೇಕ ವರ್ಷಗಳೇ ಕಾಯಬೇಕಾಯಿತು.

**6) 1945ರ ಹಿಂದೂ ವಿವಾಹ ದೌರ್ಬಲ್ಯಗಳ ನಿರ್ಮೂಲನಾ ಕಾಯಿದೆ ಮತ್ತು 1946ರ ಹಿಂದೂ ವಿವಾಹ ಸಿಂಧುತ್ವ ಕಾಯಿದೆಗಳು**

ಹಿಂದೂಗಳಲ್ಲಿ ಏರ್ಪಟ್ಟು ವಿವಾಹವನ್ನು ದಂಪತಿಗಳು ಕೇವಲ ಬೇರೆಬೇರೆ ಧರ್ಮ, ಜಾತಿ, ಉಪಜಾತಿ ಮತ್ತು ಒಳಪಂಗಡಗಳಿಗೆ ಸೇರಿದವರೆಂಬ ಕಾರಣದಿಂದ ಸಿಂಧುವಲ್ಲವೆಂಬ ತೀರ್ಮಾನಕ್ಕೆ ಬರುವುದನ್ನು ನಿಷೇಧಿಸುತ್ತದೆ.

**7) 1946ರ ಮುಂಬಯಿ ಹಿಂದೂ ವಿವಾಹ**

ದೌರ್ಬಲ್ಯಗಳ ನಿರ್ಮೂಲನಾ ಕಾಯಿದೆ ಮತ್ತು 1953ರ ಹಿಂದೂ ವಿವಾಹದ ಮೇಲಿನ ಜಾತಿಯ ಮತ್ತು ಗೋತ್ರದ ನಿರ್ಬಂಧಗಳನ್ನು ರಾಷ್ಟ್ರೀಯ ಮಟ್ಟದಲ್ಲಿ ತೆಗೆದುಹಾಕಿವೆ.

**8) 1949ರ ಹಿಂದೂ ವಿವಾಹಿತ ಮಹಿಳೆಯರು**

ಪ್ರತ್ಯೇಕ ವಾಸಸ್ಥಾನ ಮತ್ತು ಜೀವನಾಂಶ ಕಾಯಿದೆಯ ಪ್ರಕಾರ ಹಿಂದೂ ವಿವಾಹಿತ ಗಂಡನಿಂದ ಪ್ರತ್ಯೇಕವಾಗಿ ವಾಸಿಸುತ್ತಿದ್ದರೂ ಜೀವನಾಂಶ ಪಡೆಯುವ ಅವಕಾಶವನ್ನು ಈ ಕಾಯಿದೆ ಒದಗಿಸಿತು.

9) 1954ರ ವಿಶೇಷ ವಿವಾಹ ಕಾಯಿದೆಯು ಜಮ್ಮು ಮತ್ತು ಕಾಶ್ಮೀರವನ್ನು ಬಿಟ್ಟು ಮಿಕ್ಕ ಸಮಗ್ರ ಭಾರತಕ್ಕೆ ಅನ್ವಯವಾಗುತ್ತದೆ. ಈ ಕಾಯಿದೆಯು ಭಾರತೀಯ ಪ್ರಜೆಗಳೆಲ್ಲರಿಗೂ ಅನ್ವಯವಾಗುತ್ತಿದ್ದು ವಿವಾಹವನ್ನು ನೋಂದಾಯಿಸಿಕೊಳ್ಳುವ ಅವಕಾಶವನ್ನು ನೀಡುತ್ತದೆ. ಎಜಿಸ್ಟರ್ಸ್ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಕೊಳ್ಳಬಹುದಾಗಿದೆ.

**10) 1955ರ ಹಿಂದೂ ವಿವಾಹ ಕಾಯಿದೆ**

ಈ ಕಾಯಿದೆಯಲ್ಲಿ ಹಿಂದೂ ವಿವಾಹವನ್ನು ರದ್ದುಗೊಳಿಸಿದ, ರದ್ದುಗೊಳಿಸಬೇಕಾದ ಮತ್ತು ಸಿಂಧುತ್ವ ಹೊಂದಿದ ಎಂದು ಮೂರು ವಿಧಗಳಾಗಿ ವಿಂಗಡಿಸಿದೆ. ಮೇಲೆ ತಿಳಿಸಿದ ವಿವಾಹ ವಯಸ್ಸನ್ನು ಈ ಕಾಯಿದೆ ಪರಿಷ್ಕರಿಸಿ ಆ ವಯೋಮಿತಿಯನ್ನು ಕ್ರಮವಾಗಿ ಹುಡುಗನಿಗೆ 21 ಮತ್ತು ಹುಡುಗಿಗೆ 18 ವರ್ಷಗಳಿಗೆ ಏರಿಸಿದ್ದನ್ನು ಈ ಕಾಯಿದೆಯಲ್ಲಿ ಕಾಣಬಹುದು.

### 11) 1956ರ ಹಿಂದೂ ದತ್ತು ಸ್ವೀಕಾರ ಮತ್ತು ಜೀವನಾಂಶದ ಕಾಯಿದೆ

ಈ ಕಾಯಿದೆಯ ಪ್ರಕಾರ ಜೀವನಾಂಶದ ಗೊತ್ತುವಳಿಯನ್ನು ಸ್ಪಷ್ಟಪಡಿಸುತ್ತದೆ. ದತ್ತು ಸ್ವೀಕರಿಸುವ ಮತ್ತು ಜೀವನಾಂಶವನ್ನು ಪಡೆಯುವ ವಿಷಯದಲ್ಲಿ ಸ್ತ್ರೀಯರಿಗೆ ಅಧಿಕಾರವನ್ನು ಕಲ್ಪಿಸಿಕೊಡುವ ಉದ್ದೇಶವನ್ನು ಈ ಕಾಯಿದೆ ಒಳಗೊಂಡಿದೆ. ಅಲ್ಲದೆ ಈ ಕಾಯಿದೆಯ ಮೇರೆಗೆ ಮಹಿಳೆಯರಿಗೆ ಮತ್ತು ವಿಧವೆಯರಿಗೆ ಜೀವನಾಂಶವನ್ನು ಪಡೆಯುವ ಹಕ್ಕನ್ನು ಒದಗಿಸುತ್ತದೆ.

### 12) 1956-57ರ ಸ್ತ್ರೀಯರು ಮತ್ತು ಹುಡುಗಿಯರನ್ನು ಅನೈತಿಕವಾಗಿ ಸಾಗಾಣಿಕೆ ಮಾಡುವುದನ್ನು ನಿಗ್ರಹಿಸುವ ಕಾಯಿದೆ

ಈ ಕಾಯಿದೆ ಸ್ತ್ರೀಯರನ್ನು ವೇಶ್ಯಾವಾಟಿಕೆಗೆ ದೂಡುವುದನ್ನು ನಿರ್ಬಂಧಿಸುತ್ತದೆ. ಅಲ್ಲದೆ ಅಂಥ ವ್ಯವಸ್ಥೆಯಲ್ಲಿ ಸಿಲುಕಿಕೊಂಡಂತಹ ಮಹಿಳೆಯರ ಪುನರ್ವಸತಿಯನ್ನು ಈ ಕಾಯಿದೆ ಒಳಗೊಂಡಿದೆ.

ತದನಂತರದಲ್ಲಿ ವರದಕ್ಷಿಣೆ ಕಾಯಿದೆಯನ್ನು ಜಾರಿಗೆ ತಂದದ್ದನ್ನು ಕಾಣಬಹುದು. ಆದರೆ ಅಧ್ಯಯನದ ಕಾಲದ ಪರಿದಿಯಿಂದ ಅದು ಹೊರಗಿರುವುದರಿಂದ ಇಲ್ಲಿ ಅದನ್ನು ಚರ್ಚಿಸಲಾಗುವುದಿಲ್ಲ.

ಈ ಎಲ್ಲಾ ಕಾಯಿದೆಗಳನ್ನು ಗಮನಿಸಿದಲ್ಲಿ ನಿಧಾನವಾಗಿ ಪುರುಷ ಸಮಾಜ ಮಹಿಳಾ ಮುಖಿಯಾಗುವುದನ್ನು ಕಾಣುತ್ತೇವೆ.

ಮೈಸೂರು ಸಂಸ್ಥಾನದಲ್ಲಿ ಸ್ತ್ರೀಯರ ಉನ್ನತಿಗಾಗಿ 19ನೇ ಶತಮಾನದಿಂದೀಚೆಗೆ ಹಲವಾರು ಕಾಯಿದೆಗಳನ್ನು ರೂಪಿಸಿ ಅನುಷ್ಠಾನಕ್ಕೆ ತರಲಾಗಿದೆ. ಆದರೆ ಈ ಮೇಲಿನ ಕಾಯಿದೆಗಳ ರಾಜಕೀಯವನ್ನು ಅರಿಯಬೇಕಾದರೆ ವಿಧವಾ ವಿವಾಹ ಕಾಯಿದೆ ಹೇಗೆ ಮೈಸೂರಿನಲ್ಲಿ ಅನುಷ್ಠಾನಗೊಂಡಿತು ಎಂಬುದನ್ನು ಅರಿಯಬೇಕಾಗುತ್ತದೆ. ಆದ್ದರಿಂದ ಆ ಕಾಯಿದೆಯನ್ನು ಇನ್ನು ಮುಂದೆ ವಿವರವಾಗಿ ಚರ್ಚೆಗೆ ಒಳಪಡಿಸೋಣ.

ಮೇಲೆ ಚರ್ಚಿಸಿದ ಕಾಯಿದೆಗಳಿಗೆ ಹೋಲಿಸಿದರೆ ವಿವಾಹಕ್ಕೆ ಸಂಬಂಧಿಸಿದ ಸುಧಾರಣೆಗಳನ್ನು ತರಲೆತ್ನಿಸಿದ ಉತ್ಸಾಹಿಗಳ ಸಂಖ್ಯೆ ದೊಡ್ಡ ಸಂಖ್ಯೆಯಲ್ಲೇನೂ ಇರಲಿಲ್ಲ, ಕಡಿಮೆಯೇ ಇತ್ತು. ವಿಧವಾ ವಿವಾಹಕ್ಕಾಗಿ ಹೋರಾಡಿದವರಲ್ಲಿ ಮುಖ್ಯರಾದ ಕಂದುಕೂರು ವಿರೇಶಲಿಂಗಂ ಪಂತುಲು ಮೈಸೂರಿನಲ್ಲಿ ನೆಲೆಸಿ ಈ ಕುರಿತು ಪ್ರಚಾರವನ್ನಾರಂಭಿಸಿದ್ದರು. 1900ರ ತನಕ ವಿಧವಾ ವಿವಾಹ ಜನರ ಮನ್ನಣೆ ಪಡೆಯಲಿಲ್ಲ.

ಈ ಸಂದರ್ಭದಲ್ಲಿ ಕೂಡ ಕ್ರೈಸ್ತ ಧಾಮಿಕ ಸುಧಾರಕರು ಜೊತೆ ಜೊತೆಗೆ ಈ ವಿಷಯವನ್ನು ಕೈಗೆತ್ತಿಕೊಂಡದ್ದು ಕೆಲವು ಪತ್ರಿಕೆಗಳೇ. ವೆಸ್ಲಿಯನ್ನ ಮಿಷನ್ನಿನ ಟಿ.ಇ.ಸ್ಲೇಟರ್ ಹಾಗೂ ರಾಜಾ ಟಿ.ಮಾಧವರಾವ್ ಕೊನೆಯ ಪಕ್ಷ ಬಾಲ್ಯವಿವಾಹದ ವಿರುದ್ಧವಾದರೂ ಕ್ರಮ ಕೈಗೊಳ್ಳಬೇಕೆಂದು ತೀವ್ರವಾಗಿ ಒತ್ತಾಯಿಸಿದರು. ಈ ಚಳುವಳಿಯ ಮುಂದಾಳುಗಳಾದ ರಘುನಾಥರಾವ್ ಹಾಗೂ ಪಂಡಿತ್ ಶಿವನಾಥಶಾಸ್ತ್ರಿ ಮೈಸೂರು ರಾಜ್ಯವನ್ನು ಸುತ್ತಿ ಈ ಕುರಿತು ತಿಳುವಳಿಕೆ ಮೂಡಿಸಲೆತ್ನಿಸಿದರು. ಆದರೆ ಮೈಸೂರಿನ ಸಂಪ್ರದಾಯವಾದಿಗಳು ಹಾಗೂ ಸರ್ಕಾರದ ಮನಸ್ಸು ಕೊನೆಗೂ ಕರಗದೆ ಹೋದದ್ದರಿಂದ ವಿಧವಾ ವಿವಾಹದ ಪ್ರಶ್ನೆಯನ್ನು ಈ ನೇತಾರರು ಕೈಬಿಡಬೇಕಾಯಿತು. ಬಾಲ್ಯವಿವಾಹದ ವಿರುದ್ಧ ಅಲ್ಲೊಂದು ಇಲ್ಲೊಂದು ಕ್ಷೀಣ ಸ್ವರ ಕೇಳಿಬರುತ್ತಿತ್ತು ಅಷ್ಟೇ.

ಆದರೆ ಈ ಸಮಸ್ಯೆಯ ಬಗೆಗಿನ ಚರ್ಚೆಯನ್ನು ಜೀವಂತವಾಗಿರಿಸಿದ ಕೀರ್ತಿ ಮದ್ರಾಸಿನ 'ದಿ ಹಿಂದೂ' ಪತ್ರಿಕೆಗೆ ಸಲ್ಲಬೇಕು. ಮದ್ರಾಸಿ ಮಾಧ್ವರನ್ನು (ಇವರಲ್ಲಿ ಸುಧಾರಣೆಯ ಪರವಾಗಿದ್ದ ದಿವಾನರೂ ಸೇರಿದ್ದರು). ಬೆಂಬಲಿಸಿದ 'ದಿ ಹಿಂದೂ' ಮೈಸೂರು ಅಯ್ಯಂಗಾರ್‌ಗಳ (ಇವರು ಸಂಪ್ರದಾಯವಾದಿ ಗಳಾಗಿದ್ದವರು) ಪರವಾಗಿತ್ತು. ಆದರೂ ಪತ್ರಿಕೆ ಬಾಲ್ಯವಿವಾಹದ ವಿರುದ್ಧ ನಿರಂತರವಾಗಿ ಬರೆಯಿತು. ಮೈಸೂರು ನಗರದಲ್ಲಿ ಆರು ವರ್ಷದ ಬಾಲಕಿಯೊಬ್ಬಳ ಮದುವೆಯಲ್ಲಿ ದಿವಾನರು ಹಾಜರಿದ್ದರೆಂಬ ಅಂಶಕ್ಕೆ ಹೆಚ್ಚು ಪ್ರಚಾರ ನೀಡಿತು. ಹಾಗೆಯೇ ಏಳು ತಿಂಗಳ ಹೆಣ್ಣು ಮಗುವೊಂದರ ವಿವಾಹ ಕುರಿತೂ ಈ ಪತ್ರಿಕೆ ವಿವರವಾಗಿ ಪ್ರಕಟಿಸಿತು.

ಏತನ್ಮಧ್ಯೆ 1891ರ ಭಾರತ ಸರ್ಕಾರ ಕಾಯಿದೆಯನ್ನು ಜಾರಿಗೊಳಿಸಿ 12ನೇ ವಯಸ್ಸಿಗೆ ಹೆಣ್ಣುಮಕ್ಕಳ ಮದುವೆ ಮಾಡುವುದನ್ನು ಪ್ರತಿಬಂಧಿಸಿತು. ಆದರೆ ಈ ಕಾಯಿದೆಗೆ ಹಲ್ಲು,

ಉಗುರುಗಳಿರಲಿಲ್ಲ. ಆದರೆ ಅವರಿಗೆ ಬಾಲ್ಯವಿವಾಹವನ್ನು ಪ್ರತಿಬಂಧಿಸಬೇಕೆಂದು ಸರ್ಕಾರವನ್ನು ಒತ್ತಾಯಿಸುತ್ತಿದ್ದ ಮೈಸೂರಿನ ಉದಾರವಾದಿಗಳು ಈ ಕಾಯಿದೆ ತಮ್ಮ ಸಾಮಾಜಿಕ ಸಂಸ್ಥೆಗಳಲ್ಲಿ ಹಸ್ತಕ್ಷೇಪ ಮಾಡುತ್ತದೆಂದು ಟೀಕಿಸಿದ್ದು ಆಶ್ಚರ್ಯಕರವಾಗಿತ್ತು. ಹಾಗೆಯೇ ಸ್ಥಳೀಯ ದಿನಪತ್ರಿಕೆಗಳು ತಮ್ಮ ಸುಧಾರಣಾವಾದಿ ಧಾಟಿ ಬದಲಾಯಿಸಿ ಈ ಬ್ರಿಟಿಷ್ ಭಾರತೀಯ ಕಾಯಿದೆಯನ್ನು ವಿರೋಧಿಸಿದರು. ಅವರ ಪ್ರಕಾರ ಇದು ಹಿಂದೂ ಸಾಮಾಜಿಕ ಪದ್ಧತಿಗಳಲ್ಲಿ ಹಸ್ತಕ್ಷೇಪ ಮಾಡಲು ಸರ್ಕಾರಕ್ಕೆ ಹಕ್ಕಿದೆಯೆಂದು ಪ್ರತಿಪಾದಿಸಬಲ್ಲ ಪರಂಪರೆಗೆ ಹಾದಿ ಮಾಡಿಕೊಡುತ್ತಿತ್ತು.

ಈ ಪತ್ರಿಕೆಗಳನ್ನು ಗಮನಿಸಿದರೆ ಮೈಸೂರು ಸುಧಾರಣಾವಾದಿಗಳು ಕೇವಲ ಬೌದ್ಧಿಕ ಚರ್ಚೆಗಳಲ್ಲಿ ಆಸಕ್ತಿಯುಳ್ಳವರಾಗಿದ್ದು ಹಾಗೂ ಆ ಚರ್ಚೆಗಳು ಕಾರ್ಯರೂಪಕ್ಕೆ ಬಂದಾಗ ತಮ್ಮ ನಿಜವಾದ ಬಣ್ಣ ತೋರಿಸುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಮೈಸೂರಿನ ಶ್ರೀಮಂತವರ್ಗದವರು ಇದನ್ನೊಂದು ವಿವಾದದ ವಿಷಯವನ್ನಾಗಿಸಿಬಿಟ್ಟರು. ಅಧಿಕಾರವಲಯ ಹಾಗೂ ಅಸೆಂಬ್ಲಿಯ ಸದಸ್ಯರಿಗೆ ಇದೊಂದು ಚರ್ಚೆಯ ವಸ್ತುವಾಯಿತು.

### ಅಸೆಂಬ್ಲಿಯಲ್ಲಿ ನಡೆದ ಚರ್ಚೆ

1891ರ ಅಸೆಂಬ್ಲಿ ಅಧಿವೇಶನದಲ್ಲಿ ಪಾಲ್ಗೊಳ್ಳಲು ಬಂದ ಪ್ರತಿನಿಧಿಗಳು ಸರ್ಕಾರದ ನಿರ್ಧಾರದ ಬಗ್ಗೆ ಆತಂಕಗೊಂಡಿದ್ದರು. ರಾಜ್ಯ ಸರ್ಕಾರವೇನಾದರೂ ಬ್ರಿಟಿಷ್ ಸರ್ಕಾರದ ಹಾದಿಯನ್ನೇ ಹಿಡಿದು ನಿರ್ಧಾರ ಕೈಗೊಂಡೀತೆಂಬ ಆತಂಕ ಅವರಲ್ಲಿತ್ತು. ಆದರೆ ದಿವಾನ್ ಶೇಷಾದ್ರಿ ಅಯ್ಯರ್‌ರ ಪ್ರಭಾವಶಾಲಿ ವ್ಯಕ್ತಿತ್ವದ ಎದುರು ಉಸಿರೆತ್ತಲು ಅವರಲ್ಲಿ ಬಹುತೇಕರು ಅಂಜುತ್ತಿದ್ದರು. ರಾಬರ್ಟ್ ಎಚ್.ಎಲಿಯಟ್ ನೇತೃತ್ವದಲ್ಲಿ ಕೆಲವರು (ಬಹುತೇಕ ಯೂರೋಪಿಯನ್ ಸದಸ್ಯರು) ಮೈಸೂರು ಸರ್ಕಾರವೂ ಬ್ರಿಟಿಷ್ ಸರ್ಕಾರದ ಕಾಯಿದೆಯನ್ನೇ ಅನುಸರಿಸಬೇಕೆಂದು ಕೋರಿದರು. ಆದರೆ ಅಸೆಂಬಲಿಯಲ್ಲಿ ಪ್ರಧಾನವಾಗಿದ್ದ ಮಡಿವಂತ ಗುಂಪು ಇದನ್ನು ವಿರೋಧಿಸಿತು.

ದಿವಾನರು ತಮ್ಮ ಪ್ರತಿಕ್ರಿಯೆ ನೀಡುವಾಗ ಅತಿ ಎಚ್ಚರಿಕೆ ವಹಿಸುತ್ತಾ ಮೈಸೂರು ರಾಜ್ಯದಲ್ಲಿ ಈ ಬಗೆಯ ಕಾನೂನಿನ ಅಗತ್ಯವಿಲ್ಲ ಎಂದರೂ ಸಂಪ್ರದಾಯವಾದಿ ಗುಂಪುಗಳ

ಮುಂದಾಳುಗಳ ಹಾಗೂ ಪ್ರಾಚೀನ ಗ್ರಂಥಗಳು ಇದನ್ನು ವಿರೋಧಿಸದಿದ್ದರೆ ರಾಜ್ಯ ಕೂಡ ಅಂಥದೊಂದು ಕಾಯ್ದೆಯನ್ನು ಜಾರಿಗೆ ತರಬಹುದೆಂದು ಹೇಳಿದರು.

ಯಾರೊಬ್ಬರನ್ನೂ ಅಸಂತುಷ್ಟಗೊಳಿಸುವುದನ್ನು ತಪ್ಪಿಸಲು ದಿವಾನರು ಪ್ರಯತ್ನಿಸುತ್ತಿದ್ದುದು ಇಲ್ಲಿ ಸ್ಪಷ್ಟವಾಗಿದೆ. ಅದರಲ್ಲೂ ಮುಖ್ಯವಾಗಿ ಸಾಮಾಜಿಕ ಅನಿಷ್ಟಗಳನ್ನು ತೊಡೆದುಹಾಕಲು ದಿವಾನರ ಮೇಲೆ ಒತ್ತಡ ತರುತ್ತಿದ್ದ ಯೂರೋಪಿಯನ್ನರು ಹಾಗೂ ರೆಸಿಡೆಂಟರನ್ನು ಕೆರಳಿಸುವುದಂತೂ ದಿವಾನರಿಗೆ ಖಂಡಿತಾ ಬೇಡವಿತ್ತು. ಮೂಲತಃ ದಿವಾನರು ಸಂಪ್ರದಾಯದಲ್ಲಿ ಯಾವುದಾದರೂ ಬದಲಾವಣೆ ಮಾಡುವುದನ್ನು ಒಲ್ಲದ ವ್ಯಕ್ತಿಯೇ ಎನ್ನಿಸುತ್ತದೆ. ಹಾಗೆ ನೋಡಿದರೆ ತಮ್ಮ ಹೊಸ ಬಂಗಲೆಯ ಗೃಹಪ್ರವೇಶವನ್ನೇ ದಿವಾನರು ಒಮ್ಮೆ ಮುಂದೂಡಿದರು. ಅಲ್ಲಿ ದೇವಸ್ಥಾನವಾಗಲೀ, ಬ್ರಾಹ್ಮಣ ಪೂಜಾರಿ, ಬ್ರಾಹ್ಮಣ ಸ್ತ್ರೀಯರಾಗಲೀ ಇಲ್ಲವೆಂದು ಅವರ ಪತ್ನಿ ಹೇಳಿದ್ದೇ ಇದಕ್ಕೆ ಕಾರಣವಾಗಿತ್ತು.

### ಕರಡು ಶಾಸನಕ್ಕೆ ಪ್ರತಿಕ್ರಿಯೆ

ಎಲ್ಲರೂ ಹುಬ್ಬೇರಿಸುವಂತೆ ದಿವಾನರು ಕೆಲ ಬಗೆಯ ಬಾಲ್ಯವಿವಾಹಗಳನ್ನು ಪ್ರತಿನಿಧಿಸುವ ಕಾಯ್ದೆಯ ಕರಡನ್ನು ಅಸೆಂಬ್ಲಿಯಲ್ಲಿ ಮಂಡಿಸಿಯೇಬಿಟ್ಟರು. ಸಂಪ್ರದಾಯವಾದಿಗಳ ಮನವೊಲಿಸಲು "ಬಾಲ್ಯ ವಿವಾಹಗಳಿಗೆ ಶಾಸ್ತ್ರ ಸಮ್ಮತಿಯಿಲ್ಲ" ಎಂದು ಹೇಳಿದ ದಿವಾನರು "ಸದ್ಯಕ್ಕೆ ಎಂಟು ವರ್ಷಗಳ ಒಳಗಿನ ಹುಡುಗಿಯ ಮದುವೆಯನ್ನು ನಿಷೇಧಿಸುವುದು ಹಾಗೂ 16 ವರ್ಷಕ್ಕಿಂತ ಕಡಿಮೆ ವಯಸ್ಸಿನ ಹುಡುಗಿಯನ್ನು ಐವತ್ತು ವರ್ಷ ದಾಟಿದ ಗಂಡೊಬ್ಬ ಮದುವೆಯಾಗುವುದನ್ನು ನಿಷೇಧಿಸುವುದು. ಇಷ್ಟನ್ನು ಮಾತ್ರ ಮಾಡುವುದು ಸೂಕ್ತ" ಎಂದೂ ಹೇಳಿದರು.

ಪುಟ್ಟ ಸುಧಾರಣಾವಾದಿ ಗುಂಪು ಈ ಗೆಲುವಿನಿಂದ ಪುಳಕಗೊಂಡಿತು. ಆದರೂ ಈ ಹಿಂದೆ ತಮ್ಮ ಮನವಿಗಳಿಗೆ ಸರ್ಕಾರ ತೋರಿದ ಉದಾಸೀನದ ಬಗ್ಗೆ ಈ ಗುಂಪು ಪ್ರಸ್ತಾಪ ಮಾಡದಿರಲಿಲ್ಲ. ಡ್ರಾಫ್ಟ್ ಬಿಲ್ ಬಗ್ಗೆ ಮಾತಾಡುತ್ತಾ ಯೂರೋಪಿತಬ್ ಸದಸ್ಯನೊಬ್ಬ 'ಮಹಾರಾಜರ ಸರ್ಕಾರಕ್ಕೆ ಕಿವಿಯಿದೆ; ಜನರಿಗೆ ಧನಿಯಿದೆ ಹಾಗೂ ಜನರ ಧ್ವನಿ ಸ್ವಲ್ಪ ಮೃದುವಾಗಿದ್ದಾಗ ಮಾತ್ರ ಕಿವಿ ಸಹಾನುಭೂತಿಯಿಂದ ಕೇಳಿಸಿ ಕೊಳ್ಳುತ್ತದೆ ಎಂಬುದು ನಮಗೆ

ಖಾತ್ರಿಯಾಗಿದೆ. ಆದರೂ ಸರ್ಕಾರ ಜನರ ಧನಿಗಾಗಿ ಸಾಕಷ್ಟು ಕಾಲ ಕಾಯ್ದಂತಿದೆ' ಎಂದು ವ್ಯಂಗ್ಯವಾಗಿ ಹೇಳಿದ.

ಯೂರೋಪಿಯನ್ನರನ್ನು ಬಿಟ್ಟರೆ ಉಳಿದವರಾರು ಈ ಪ್ರಶ್ನೆಯ ಬಗ್ಗೆ ಮಾತನಾಡುವ ಉತ್ಸಾಹವನ್ನು ತೋರಲಿಲ್ಲ. ಇನ್ನುಳಿದವರು ದಿವಾನರನ್ನು ಬಹಿರಂಗವಾಗಿ ವಿರೋಧಿಸಲು ಸಿದ್ಧರಿರಲಿಲ್ಲವೆಂಬುದು ಸ್ಪಷ್ಟ ಮಸೂದೆಯನ್ನು ತೀವ್ರವಾಗಿ ವಿರೋಧಿಸಿದ್ದ ಮಡಿವಂತ ಗುಂಪಿನ ನಾಯಕ ಸಾರ್ವಜನಿಕರ ಅಭಿಪ್ರಾಯ ಹಾಗೂ ಹಂಬಲಗಳಿಗೆ ಅನುಗುಣವಾಗಿ ಈ ಅಂಶವನ್ನು ದಿವಾನರು ನಿರ್ಣಯಿಸುತ್ತಾರೆಂದು ಆಶಿಸುತ್ತೇನೆ ಎಂದಷ್ಟೇ ಹೇಳಿ ಸಂತೃಪ್ತರಾದರು. ಸಾರ್ವಜನಿಕ ಅಭಿಪ್ರಾಯ ಈ ಮಸೂದೆಗೆ ವಿರುದ್ಧವಾಗಿತ್ತು ಎಂದು ಪ್ರತ್ಯೇಕವಾಗಿ ಹೇಳಬೇಕಾದ ಅಗತ್ಯವಿಲ್ಲ.

ತಾವು ಪ್ರಗತಿಪರರೆಂದು ಹೇಳಿಕೊಳ್ಳುತ್ತಿದ್ದ ಇನ್ನು ಕೆಲವರು ಹುಡುಗಿಗೆ ಹದಿನೆಂಟು ವರ್ಷವಾಗುವ ಮುನ್ನ ನಡೆಯುವ ಎಲ್ಲ ವಿವಾಹಗಳನ್ನೂ ಪ್ರತಿಬಂಧಿಸಬೇಕೆಂದು ವಾದಿಸಿದ್ದರು. ಈ ಕಾನೂನಿನ ಉಲ್ಲಂಘನೆಗೆ ವಿಧಿಸಲಾಗುವ ಶಿಕ್ಷೆ ತೀರಾ ಕಠಿಣವೆಂದೂ ಅದನ್ನು ಕಡಿಮೆ ಮಾಡಬೇಕೆಂದೂ ಹೇಳಿದರು. ಜೊತೆಗೆ ಮದುವೆಯಾಗುವ ಗಂಡಿನ ವಯಸ್ಸು ಐವತ್ತನ್ನು ದಾಟಿರಬಾರದು ಎಂದು ಮಸೂದೆ ಸೂಚಿಸಿದ್ದನ್ನು ಚರ್ಚಿಸುತ್ತಾ ಅದನ್ನು 55ಕ್ಕೆ ಏರಿಸಬೇಕೆಂದು ಆಗ್ರಹಿಸಿದರು.

ಈ ನಿಟ್ಟಿನಲ್ಲಿ ಸರಿಯಾದ ಫಲ ದೊರೆಯಬೇಕೆಂದರೆ ಶಿಕ್ಷಣ ಎಲ್ಲೆಡೆ ಹಬ್ಬುವವರೆಗೂ ಕಾಯಬೇಕೆಂದು ಸದಸ್ಯರೊಬ್ಬರು ಹೇಳಿದರೆ ಮಸೂದೆಯನ್ನು ಬೆಂಬಲಿಸುವ ಇನ್ನೊಬ್ಬರು ಹೀಗೆ ವಾದಿಸಿದರು. ಕೇವಲ ಶಿಕ್ಷಣ ಮತ್ತು ನಂಬಿಕೆಗಳು ಮಾತ್ರ ಸಾಲವು. ತಮ್ಮ ನಂಬಿಕೆಗೆ ವಿರುದ್ಧವಾಗಿ ತಮ್ಮ ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಡಬೇಕಾಗಿ ಬಂದ ಕೇಶವಚಂದ್ರ ಸೇನ್ ಮತ್ತು ತೆಲಂಗರ ಉದಾಹರಣೆಯನ್ನೇ ನೋಡಿ.

ಈ ಇಡೀ ಸಂದರ್ಭದ ಅತ್ಯಮತ ಕುತೂಹಲಕರ ಅಂಶಗಳೆಂದರೆ ಅಸೆಂಬಲಿ ಸದಸ್ಯರ ಎರಡು ಗುಂಪುಗಳು ಹಾಗೂ ಚಿಕ್ಕಮಂಗಳೂರಿನ ಕೆಲ ನಾಗರಿಕರು ಸಲ್ಲಿಸದ ಮನವಿಗಳು.

ಸದರಿ ಕಾಯ್ದೆಯನ್ನು ಉಲ್ಲಂಘಿಸುವವರಿಗೆ ವಿಧಿಸಿರುವ ಜೈಲು ಶಿಕ್ಷೆ ತೀರಾ ಕಠಿಣವೆಂದೂ, ಸರ್ಕಾರ ಈ ಶಿಕ್ಷೆಯ ಬದಲಿಗೆ ಕೇವಲ ಜುಲ್ಮಾನೆ ವಿಧಿಸಬೇಕೆಂದೂ ಕೋರಿದ ಈ ಮನವಿ ಕೆಲ ವಿಶೇಷ ಸಂದರ್ಭಗಳಲ್ಲಿ ನಿಗದಿತ ವಯಸ್ಸಿಗಿಂತ ಮೊದಲು ನಡೆಯುವ ವಿವಾಹಗಳಲ್ಲಿ ಅವಕಾಶವಿರಬೇಕೆಂದೂ ಆಗ್ರಹಿಸಿತು. ಹೀಗೆ ಈ ಮಸೂದೆಯ ತಿರುಳನ್ನೇ ತೀರಾ ತೆಳುಗೊಳಿಸಲಾಯಿತು.

168 ಸದಸ್ಯರ ಇನ್ನೊಂದು ಗುಂಪು ಪ್ರಾಂತದ ಜನ ಒಟ್ಟಾರೆಯಾಗಿ ಈ ಮಸೂದೆಗೆ ವಿರುದ್ಧವಾಗಿರುವರೆಂದೂ ಎಲ್ಲೋ ಲಕ್ಷಕ್ಕೊಬ್ಬರಿರುವ ಒಂದು ಸಣ್ಣ ಗುಂಪಿನ ಹಂಬಲವನ್ನು ಈಡೇರಿಸಲು ಈ ಮಸೂದೆಯನ್ನು ಅಂಗೀಕರಿಸುವುದು ಬಹುಸಂಖ್ಯಾತರ ಭಾವನೆಗಳನ್ನು ನೋಯಿಸುವುದೆಂದೂ ತನ್ನ ಮನವಿಯಲ್ಲಿ ಹೇಳಿ ಸರ್ಕಾರಿ ಮಸೂದೆಯನ್ನು ಒಪ್ಪಬಾರದೆಂದು ಒತ್ತಾಯಿಸಿತು. ಅಸೆಂಬಲಿ ಸದಸ್ಯರೊಬ್ಬರ ನೇತೃತ್ವದಲ್ಲಿ ಇನ್ನೊಂದು ನಾಗರಿಕರ ಗುಂಪು ಈ ಕಾಯ್ದೆಯ ಕೆಲವು ಕಾಲಂಗಳಿಗೆ ವಿರುದ್ಧವಾಗಿ ಶಾಸ್ತ್ರಕ್ಕನುಗುಣವಾಗಿ (ನಿಗದಿತ ವಯಸ್ಸಿಗೆ ಮುನ್ನವೇ) ವಿವಾಹ ಮಾಡಬೇಕೆಂದು ಬಯಸುವ ಕೆಲವು ಜಾತಿಗಳಿಗೆ ಈ ಕಾಯ್ದೆ ಅವಕಾಶ ಮಾಡಿಕೊಡಬೇಕೆಂದು ಬಯಸಿತು.

ಮೂರನೇ ಎರಡು ಭಾಗದಷ್ಟು ಸದಸ್ಯರು (53+168=221) ಎರಡು ಮನವಿಗಳಿಗೆ ಸಹಿ ಮಾಡಿದ್ದರೆ, ಮೂರನೇ ಒಂದು ಭಾಗದಷ್ಟು ಸದಸ್ಯರು (123) ಈ ವಿವಾದದಿಂದ ದೂರ ಉಳಿಯಲೆತ್ನಿಸಿದರು. ಪ್ರಾಯಶಃ ಮೈಸೂರಿನ ಸಾರ್ವಜನಿಕರ ಧೋರಣೆಯೂ ಇದೇ ಆಗಿತ್ತು. ಅದರಲ್ಲಿ ಈ ಬಗ್ಗೆ ಷರತ್ತಿನ ಸಮ್ಮತಿಯನ್ನು ವ್ಯಕ್ತಪಡಿಸಿದವರೂ ಸೇರಿದಂತೆ ಅಂದು ಅಭಿಪ್ರಾಯ ವ್ಯಕ್ತಪಡಿಸಿದವರೆಲ್ಲರೂ ಈ ಮಸೂದೆಗೆ ವಿರುದ್ಧವಾಗಿದ್ದರು. ಕೈಬೆರಳೆಣಿಕೆಯಷ್ಟು ಯೂರೋಪಿಯನ್ನರು ಹಾಗೂ ಕೆಲವೇ ಕೆಲವು ಸ್ಥಳೀಯರು ಮಾತ್ರ ಈ ಮಸೂದೆಯ ಪರವಾಗಿದ್ದರು.

ಹೀಗಿದ್ದರೂ 1894ರ ಅಸೆಂಬ್ಲಿಯಲ್ಲಿ ಬಾಲ್ಯವಿವಾಹ ಪದ್ಧತಿಯ ತಡೆಗೆ ಕಾಯ್ದೆ ಅಂಗೀಕಾರವಾಯಿತೆಂದು ದಿವಾನರು ಪ್ರಕಟಿಸಿದರು. ಕೆಲವು ವಲಯಗಳಲ್ಲಿ ಈ ಕಾಯ್ದೆಯು ಪ್ರಜೆಗಳ ಸ್ವಾತಂತ್ರ್ಯದಲ್ಲಿ ಅನಗತ್ಯ ಹಸ್ತಕ್ಷೇಪ ಮಾಡುತ್ತಿದೆ ಎಂಬ ಅಭಿಪ್ರಾಯ ವ್ಯಕ್ತವಾಗಿದೆ

ಎಂಬುದನ್ನು ಅವರು ಒಪ್ಪಿಕೊಂಡರು. ವಿರೋಧ ಪಕ್ಷದ ನಾಯಕರು ಮಹಮ್ಮದೀಯರು ಹಾಗೂ ಕ್ರೈಸ್ತರಲ್ಲೂ ಹಲವು ಆಕ್ಷೇಪಾರ್ಹ ಪದ್ಧತಿಗಳಿವೆ ಎಂದು ವಾದಿಸುತ್ತಾ ಸದರಿ ಕಾಯ್ದೆ ದೈಹಿಕವಾಗಿ ಅತ್ಯಂತ ದುರ್ಬಲರಾಗಿರುವ ಬ್ರಾಹ್ಮಣರ ಮೇಲೆ ಮುಖ್ಯವಾಗಿ ಪರಿಣಾಮ ಬೀರುತ್ತದೆ ಎಂದು ಹೇಳಿದರು. ಆದರೆ ದಿವಾನರು ಈ ಕಾಯ್ದೆಯು ಎಲ್ಲರಿಗೂ ಅನ್ವಯವಾಗುತ್ತದೆಂದು ಸ್ಪಷ್ಟಪಡಿಸಿದರು.

ಈವರೆಗಿನ ಚರ್ಚೆಯ ಹಿನ್ನಲೆಯಲ್ಲಿ ಮೈಸೂರಿಗರು ಮಹಿಳೆಯರ ಸ್ಥಿತಿಗತಿಗಳನ್ನು ಬದಲಿಸಬಲ್ಲ ಸುಧಾರಣೆಗಳನ್ನು ಬಹುತೇಕ ಒಕ್ಕೊರಲಿನಿಂದ ವಿರೋಧಿಸಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಆದರೂ ಆರಂಭದ ಹಿಂಜರಿಕೆಯ ನಂತರ ಸರ್ಕಾರ ಹೆಣ್ಣುಮಕ್ಕಳಿಗೆ ಶಿಕ್ಷಣ ಕೊಡುವ ಜವಾಬ್ದಾರಿ ಹೊರುವತ್ತ ಕೆಲ ಹೆಜ್ಜೆಗಳನ್ನಿಟ್ಟಿತು ಹಾಗೂ ವಿವಾಹ ಕಾಯ್ದೆಯನ್ನು ಜಾರಿಗೆ ತಂದಿತು. ಅಷ್ಟೊತ್ತಿಗೆಗಾಗಲೇ ಮೈಸೂರು ಪ್ರಾಂತ್ಯದ ಹೊರಗೆ ಒಳ್ಳೆಯ ಹೆಸರು ಮಾಡಲು ಶತಾಯಗತಾಯ ಪ್ರಯತ್ನಿಸುತ್ತಿದ್ದ ಮೈಸೂರು ಸರ್ಕಾರ ಉದಾರವಾದಿಗಳು ಕೈಗೆತ್ತಿಕೊಂಡಿದ್ದ ಈ ಮಹಿಳಾ ಕಲ್ಯಾಣದ ಪ್ರಶ್ನೆ ಬ್ರಿಟಿಷ್ ಭಾರತದ ಮೆಚ್ಚುಗೆ ಗಳಿಸಿದ್ದನ್ನು ಗಮನಿಸಿತ್ತು. ಈ ಹಿನ್ನಲೆಯಲ್ಲಿ ತಾನು ಈ ಹಾದಿಯಲ್ಲಿ ಮುಂದುವರಿದು ತನ್ನ ಖ್ಯಾತಿಯನ್ನು ಹೆಚ್ಚಿಸಿಕೊಳ್ಳಲು ಮೈಸೂರು ಸರ್ಕಾರ ಬಯಸಿತ್ತೆಂಬುದು ಸ್ಪಷ್ಟ.

ಆದರೆ ಸರ್ಕಾರ ನಿಜಕ್ಕೂ ಪ್ರಗತಿಪರವಾಗಿತ್ತೆಂದಾಗಲೀ ಹಾಗೂ ಸಾಮಾಜಿಕ ಹಾಗೂ ಧಾರ್ಮಿಕ ಬದಲಾವಣೆಗಳನ್ನು ತರಲು ಉದ್ದೇಶಿತ್ತೆಂದಾಗಲೀ ಇದರ ಅರ್ಥವಲ್ಲ. ಸರ್ಕಾರ ಮಡಿವಂತ ಮೈಸೂರಿಗರನ್ನು ಅಸಂತುಷ್ಟಗೊಳಿಸಲು ಸಿದ್ಧವಿರಲಿಲ್ಲ. ಎಲ್ಲರನ್ನೂ ಸಂತುಷ್ಟಗೊಳಿಸಲು ಸರ್ಕಾರ ತನ್ನದೇ ಆದ ಮಾರ್ಗವೊಂದನ್ನು ಕಂಡುಕೊಂಡಿತ್ತು. ಬಾಲ್ಯವಿವಾಹ ಕುರಿತ ಕಾಯ್ದೆಯನ್ನು ಜಾರಿಗೊಳಿಸುವಲ್ಲಿ ಸರ್ಕಾರ ಪ್ರಾಮಾಣಿಕ ಪ್ರಯತ್ನವನ್ನೇನೂ ಮಾಡಲಿಲ್ಲ. ಮಡಿವಂತರ ಆಗ್ರಹದಂತೆ ಈ ಕಾಯ್ದೆ ಭಂಗ ಮಾಡುವವರಿಗೆ ಕೇವಲ ಜುಲ್ಮಾನೆಯನ್ನಷ್ಟೇ ವಿಧಿಸಲಾಯಿತು. ಈ ಕಾಯ್ದೆಯಡಿ 1894–1900 ರ ನಡುವೆ ಕೇವಲ 52 ಕೇಸುಗಳನ್ನು ಮಾತ್ರ ದಾಖಲು ಮಾಡಿಕೊಳ್ಳಲಾಯಿತು ಹಾಗೂ ಸಣ್ಣ ಪ್ರಮಾಣದ ಜುಲ್ಮಾನೆ ವಿಧಿಸಿ ಅಪರಾಧಿಗಳನ್ನು ಬಿಡುಗಡೆ ಮಾಡಲಾಯಿತು. ಮಹಿಳಾ ಶಿಕ್ಷಣದ ಬಗ್ಗೆ ಉತ್ಸಾಹ ತೋರಿ ಮೈಸೂರಿನ ಹೊರಗೆ ತನ್ನ ಘನತೆಯನ್ನು ಹೆಚ್ಚಿಸಿಕೊಳ್ಳಲೆತ್ನಿಸಿದ ಮೈಸೂರು ಸರ್ಕಾರ ಬಾಲ್ಯವಿವಾಹ ಪ್ರತಿಬಂಧಕ ಕಾಯ್ದೆಯ ಸಂದರ್ಭದಲ್ಲೂ ಹಾಗೆ ನಡೆದುಕೊಂಡಿರಲಿಕ್ಕೆ ಸಾಕು.

ಇದಲ್ಲದೆ ಒಳ್ಳೆಯ ಸರ್ಕಾರದ ಬಗ್ಗೆ ಭಾರತದಲ್ಲಿ ಸಾಮಾಜಿಕ ಹಾಗೂ ಸಂವಿಧಾನಾತ್ಮಕ ಸುಧಾರಣೆಗಳ ಬಗ್ಗೆ ಚರ್ಚಿಸಬಲ್ಲ ಬುದ್ಧಿಜೀವಿಗಳ ಕಣ್ಣಲ್ಲಿ ಮಾದರಿ ಸಂಸ್ಥಾನವೆಂದು ತೋರಿಸಿಕೊಳ್ಳಲೂ ಮೈಸೂರು ಪ್ರಯತ್ನಿಸುತ್ತಿತ್ತು. ಅದರಲ್ಲೂ ದಿವಾನರುಗಳಿಗೆ ಮುಖ್ಯವಾಗಿ ರಂಗಾಚಾರ್ಲು (1881–1893) ಹಾಗೂ ಶೇಷಾದ್ರಿ ಅಯ್ಯರ್ (1893–1901) ಈ ಇಬ್ಬರಿಗೂ ಮೈಸೂರು ಎಲ್ಲ ಅಂಶಗಳಲ್ಲಿಯೂ ಮುಂದಿರಬೇಕೆಂಬ ಆಸೆಯಿತ್ತು. ಆದರೆ ಆಗ ಎಲ್ಲರೂ ಮಾಡುತ್ತಿದ್ದಂದೆ ಬ್ರಿಟಿಷರ ಆದರ್ಶಗಳನ್ನು ಅನುಕರಿಸದೆ ಭಾರತೀಯ ಆದರ್ಶಗಳನ್ನು ಅನುಸರಿಸುವ ಮೂಲಕ ಇದನ್ನು ಈಡೇರಿಸಿಕೊಳ್ಳಬೇಕೆಂಬ ಇರಾದೆಯೂ ಇತ್ತು. ಇದಕ್ಕೆ ಪೂರಕವೆಂಬಂತೆ ಮೈಸೂರು ಸರ್ಕಾರ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಬಗೆಗೆ ಆಸಕ್ತಿ ತೋರಿತು. ಮೈಸೂರಿನ ಮೂವರು ಸರ್ಕಾರಿ ಅಧಿಕಾರಿಗಳು 1878ರ ಕಾಂಗ್ರೆಸ್ ಅಧಿವೇಶನದಲ್ಲಿ ಪಾಲ್ಗೊಳ್ಳಲು ದಿವಾನರು ಅನುಮತಿ ನೀಡಿದರು ಹಾಗೂ ಮಹಾರಾಜರು ಕಾಂಗ್ರೆಸ್ ನಿಧಿಗೆ 1000 ರೂಪಾಯಿಗಳನ್ನು ನೀಡಿದರು.

ಮೈಸೂರು ತಾನು ನಿರೀಕ್ಷಿಸಿದ್ದಕ್ಕಿಂತ ಹೆಚ್ಚಿನ ಮೆಚ್ಚುಗೆಯನ್ನು ಪಡೆಯಿತು. ಭಾರತದ ಸಾಮಾಜಿಕ ಸುಧಾರಣೆಯ ಉಜ್ವಲ ನಕ್ಷತ್ರವೆಂದು ಮೈಸೂರನ್ನು ಹಾಡಿಹೊಗಳಲಾಯಿತು. ವಿವಾಹ ಕಾಯ್ದೆಯಂತೂ ಭಾರತದ ಉದಾರವಾದಿಗಳಲ್ಲಿ ಎಷ್ಟು ಜನಪ್ರಿಯವಾಯಿತೆಂದರೆ ಇದನ್ನು ಬ್ರಿಟಿಷ್ ಭಾರತಕ್ಕೆ ವಿಸ್ತರಿಸ ಬೇಕೆಂದು ಭಾರತ ಸರ್ಕಾರವನ್ನು ಒತ್ತಾಯಿಸಬೇಕೆಂದು ಅವರಿಗೆ ಅನ್ನಿಸಿತು. ಬ್ರಿಟಿಷ್ ಭಾರತದಲ್ಲಿ ಈ ಬಗೆಯ ಉತ್ತೇಜನಕರ ಪ್ರತಿಕ್ರಿಯೆ ಕಂಡುಬಂದರೆ ಅತ್ತ ಬಹುತೇಕ ದೇಶೀ ಸರ್ಕಾರಗಳು ಮೈಸೂರಿನ ಉದಾಹರಣೆಯನ್ನು ಅನುಸರಿಸುವ ಆಸಕ್ತಿ ತೋರಿದವು.

ಮೈಸೂರಿನ ಸುಧಾರಣೆಗಳ ಅತ್ಯಂತ ಮುಖ್ಯ ಲಕ್ಷಣವೆಂದರೆ ಇಲ್ಲಿನ ಸರ್ಕಾರ ಈ ಸುಧಾರಣೆಗಳಿಂದ ಬರುವ ಕೀರ್ತಿಯೆಲ್ಲಾ ತನಗೇ ಬರಲಿ ಎಂಬ ಉತ್ಸುಕತೆ ತೋರಿದ್ದು. ಮೊದಲು ಹಿಂಜರಿದರೂ ಕ್ರಮೇಣ ಸುಧಾರಣೆಯ ಪ್ರಶ್ನೆಗೆ ಇತ್ಯಾತ್ಮಕವಾಗಿ ಪ್ರತಿಕ್ರಿಯಿಸಿದ ಸರ್ಕಾರ ಮೈಸೂರಿನ ಹೊರಗೆ ತನ್ನ ಖ್ಯಾತಿಯನ್ನು ಹೆಚ್ಚಿಸಿಕೊಳ್ಳಲು ಇದನ್ನೇ ಬಂಡವಾಳವಾಗಿಸಿಕೊಂಡಿತು. ಈ ಕಾರ್ಯವನ್ನು ಆರಂಭಿಸಿದವರು ಮೈಸೂರಿನಹೊರಗಿನ ಕೆಲ ಉದಾರವಾದಿಗಳೆಂಬುದು ನಿಜ. ಆದರೆ ಈ ಸುಧಾರಣೆಯ ಜವಾಬ್ದಾರಿ ಹೊರುವುದರ ಮೂಲಕ ತನ್ನ ಘನತೆ ಹೆಚ್ಚುತ್ತದೆಂದು ಅರಿವಾದ

ತಕ್ಷಣ ಈ ಬಗ್ಗೆಯ ಕೆಲಸಗಳಿಗೆ ತಾನೇ ಕಾರಣನೆಂದು ತೋರಿಸಿಕೊಳ್ಳುವಲ್ಲಿ ಹಾಗೂ ಇಂತಹ ಕೆಲಸಗಳಿಗೆ ಪ್ರಚಾರ ಪಡೆಯುವಲ್ಲಿ ಮಾತ್ರ ಎಂದೂ ಹಿಂದೆ ಬೀಳಲಿಲ್ಲ.

## 5.4 ಉಪಸಂಹಾರ

ಸ್ವಾತಂತ್ರ್ಯ ನಂತರದಲ್ಲಿ ದೇಶ ಕಂಡ ಅತ್ಯಂತ ಮಹತ್ವದ ಬೆಳವಣಿಗೆ ಎಂದರೆ ಅನೇಕ ಮಹನೀಯರ ಕೊಡುಗೆಯಾಗಿ ದೊರೆತ ಸಂವಿಧಾನ. ಇದರಲ್ಲಿ ಮಹಿಳೆಗೆ ಸಂಬಂಧಿಸಿದ ಪ್ರಗತಿಪರ ಕಾನೂನಾತ್ಮಕ ಹಕ್ಕುಗಳನ್ನು ಕಾಣಬಹುದಾಗಿದೆ.

ಮಹಿಳಾ ಚಳುವಳಿಯು ಜಾಗತೀಕವಾಗಿ ಆರಂಭವಾದಾಗ ಪುರುಷ ಪ್ರಾಧಾನ್ಯ ವ್ಯವಸ್ಥೆ ಕ್ಷಣ ಬೆಚ್ಚಿ ಬಿದ್ದಿತ್ತಾದರೂ, ಅಭಿವೃದ್ಧಿ ಹೆಸರಿನಲ್ಲಿ ತನ್ನ ಹಳೇ ಜಾಡ್ಯವನ್ನು ಅಪ್ರತ್ಯಕ್ಷವಾಗಿ ಮುಂದುವರಿಸಿದೆ. ಆದ್ದರಿಂದ ಅನೇಕ ಅಧ್ಯಯನಗಳು ಲಿಂಗಸಂಬಂಧಿ ನೆಲೆಯಲ್ಲಿ ನಡೆಯದೆ ಅದರ ಬಗ್ಗೆ ದಿವ್ಯ ನಿರ್ಲಕ್ಷ್ಯವನ್ನು ವ್ಯಕ್ತಪಡಿಸುತ್ತವೆ. ಈ ಕಾರಣದಿಂದ ಯಾರೂ ಸಹ ನಿರ್ದಿಷ್ಟವಾಗಿ ಮಹಿಳೆಯರ ವಸತಿ ಹೀನತೆಯನ್ನು ಹಾಗೂ ಅಭಿವೃದ್ಧಿಯಿಂದ ನೇರವಾಗಿ ಮಹಿಳೆಯರ ಮೇಲಾಗುವ ದುಷ್ಪರಿಣಾಮಗಳನ್ನು ಗುರುತಿಸುವುದಿಲ್ಲ. ಗುರುತಿಸಿದರೂ ಸಹ ಮಾನವ ಹಕ್ಕುಗಳಡಿ ಮಹಿಳೆಯರನ್ನು ಬಲಿಪಶುಗಳಂತೆ ಕಂಡಿದ್ದರಲ್ಲದೆ ಅವರೂ ಸಹ ಅಭಿವೃದ್ಧಿಯನ್ನು ವಿಶ್ಲೇಷಿಸಬಲ್ಲರು ಮತ್ತು ತಮಗೆ ಬೇಕಾದುದನ್ನು ನಿರ್ಧರಿಸಬಲ್ಲರು ಎಂಬುದನ್ನು ಸ್ಪಷ್ಟವಾಗಿ ಗುರುತಿಸುವುದಿಲ್ಲ.

ಸ್ವಾತಂತ್ರ್ಯ ನಂತರದ ಭಾರತದ ಪ್ರಜಾಪ್ರಭುತ್ವ ಆಡಳಿತವು ಅನೇಕ 'ಹೊಸತು'ಗಳಿಗೆ ಕೈ ಹಾಕಿತು. ಜನಸಮುದಾಯಗಳಲ್ಲಿ 'ಅಭಿವೃದ್ಧಿ'ಯ ಅನೇಕ ನಿರೀಕ್ಷೆಗಳು ಬೆಟ್ಟದಷ್ಟು ಬೆಳೆದು ಬಿಟ್ಟಿದ್ದವು. ಸರ್ಕಾರದ ಮುಂದೆ ಇದ್ದ ದೊಡ್ಡ ಸವಾಲು ಎಂದರೆ ಜನರ ಮನೋಲೋಕದಲ್ಲಿ ಸೃಷ್ಟಿಯಾಗಿದ್ದ ಕಲ್ಯಾಣ ರಾಜ್ಯವನ್ನುನನಸು ಮಾಡುವುದು ಹೇಗೆ ಎಂಬುದೇ ಆಗಿತ್ತು. ಆಗ ಗಾಂಧೀಜಿಯವರು ಹಿಂದಿನಿಂದಲೂ ಪ್ರತಿಪಾದಿಸುತ್ತ ಬಂದಿದ್ದ ಸ್ವರಾಜ್ಯ ಕಲ್ಪನೆಯನ್ನು ಹಿಂದೆಬಿಟ್ಟು ಬೃಹತ್ ಕೈಗಾರಿಕೆ ಮತ್ತು ತಂತ್ರಜ್ಞಾನದ ಮೂಲಕ ಬೃಹತ್ ಉತ್ಪಾದನೆಗೆ ಕೈಹಾಕಿದ್ದು. ಭಾರತದಲ್ಲಿ ಅಸ್ತಿತ್ವದಲ್ಲಿದ್ದ ಸಮಸ್ಯೆಗಳನ್ನು ಮತ್ತಷ್ಟು ಕ್ಲಿಷ್ಟಗೊಳಿಸಿತು. ಪಂಚವಾರ್ಷಿಕ ಯೋಜನೆಗಳಲ್ಲಿ ಮಾನವ ಸಂಪನ್ಮೂಲಗಳನ್ನು ಬದಿಗಿಟ್ಟು ಯಂತ್ರ ಮತ್ತು ತಂತ್ರಜ್ಞಾನದ ಮೂಲಕ

ದಿಢೀರ್ ಉತ್ಪಾದನೆಯು ಈ ದೇಶದ ಎಲ್ಲಾ ಅಸಮತೋಲನವನ್ನು ತೊಡೆಯುತ್ತದೆ ಎಂದು ಭ್ರಮಿಸಲಾಯಿತು. ನೆಹರು ಪ್ರಣೀತ ಅಭಿವೃದ್ಧಿ ಮಾದರಿಯು ವೈಜ್ಞಾನಿಕ ನೆಲೆಯ ಆರ್ಥಿಕತೆಯನ್ನು ನೆಚ್ಚಿಕೊಂಡಿತೇ ಹೊರತು ಆರ್ಥಿಕತೆಯ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಮುಖಗಳನ್ನು ನಿರ್ಲಕ್ಷಿಸಿತು. ಇದರ ಪರಿಣಾಮವನ್ನು ಅರಿಯಲು ಭಾರತೀಯ ಸಮಾಜಕ್ಕೆ 60 ವರ್ಷಗಳೇ ಬೇಕಾದವು. ಇಂದು ದೇಶದಲ್ಲಿ ಆಹಾರ ಉತ್ಪಾದನೆಯು ಗರಿಷ್ಟ ಪ್ರಮಾಣವನ್ನು ಮುಟ್ಟಿದೆ. ಆದರೆ ಹಸಿವಿನಿಂದ ಬಳಲುವವರ ಸಂಖ್ಯೆಯು ಉತ್ಪಾದನೆಯ ಜೊತೆಗೆ ಹೆಚ್ಚಾಗಿದೆ. ಹಂಚಿಕೆ ಎಂಬುದು ಸಾಮಾಜಿಕ ಪ್ರಕ್ರಿಯೆಯ ಹೊರತು ವೈಜ್ಞಾನಿಕ ಕಾರ್ಯವಲ್ಲ ಎಂಬುದು ಅರಿವಾಗಿದ್ದು 'ಹಸಿರು ಕ್ರಾಂತಿ' ತನ್ನ ಉದ್ದೇಶವನ್ನು ಸಾಧಿಸದೇ ಸೋತು ಹೋದಾಗ ತಿಳಿದುಬಂತು. ಹೀಗೆ ಒಟ್ಟಾರೆ ಭಾರತೀಯ ಸಮಾಜ ಒಪ್ಪಿಕೊಂಡ ಅರ್ಥವ್ಯವಸ್ಥೆ ಹಾಗೂ ರೂಪಿಸಿದ 'ಅಭಿವೃದ್ಧಿ' ಮಾದರಿಯಲ್ಲಿನ ಸಮಸ್ಯೆಗಳನ್ನು ಇಂದು ಅರ್ಥೈಸುವ ಪ್ರಯತ್ನಗಳು ತೀವ್ರಗೊಂಡಿವೆ.[3] ಸಮಾಜದಲ್ಲಿ ನಿರ್ಲಕ್ಷಿಸಲ್ಪಟ್ಟಿದ್ದ ನೆಲೆಗಳಿಂದ ಕೆಳಜಾತಿಗಳು ಹಾಗೂ ಎಲ್ಲಾ ಜಾತಿಗಳ ಮಹಿಳೆಯರನ್ನು ಸಮಾಜದ ಬದಲಾವಣೆಯ ದಾರಿಯ ಬಹು ದೊಡ್ಡ ತೊಡಕು ಎಂಬುದನ್ನು ಎಲ್ಲರೂ ಮನಗಂಡಿದ್ದಾರೆ. ಆದ್ದರಿಂದಲೇ "ಒಂದು ಸಮಾಜದಲ್ಲಿ ಮಹಿಳೆಯರನ್ನು ಸಶಕ್ತಗೊಳಿಸಿದ್ದರೆ ಅನಾರೋಗ್ಯ, ಅನಕ್ಷರತೆ, ತ್ವರಿತ ಜನಸಂಖ್ಯೆ ಬೆಳವಣಿಗೆ ಮೊದಲಾದ ಸಮಸ್ಯೆಗಳು ಪರಿಹಾರವಾಗದೆ ಹಾಗೆಯೇ ಉಳಿದುಬಿಡುತ್ತವೆ" (ಅಮರ್ತ್ಯಸೇನ್) ಎಂಬ ವಿವೇಕಕ್ಕೆ ದಾರಿ ಮಾಡಿಕೊಟ್ಟಿದೆ. ಈ ಹಿನ್ನಲೆಯಲ್ಲಿ ಸಮಾಜದ ಅರ್ಧದಷ್ಟಿರುವ ಹೆಣ್ಣನ್ನು ಆಕೆಯ ಅಂತರ್ ಸಾಮರ್ಥ್ಯಕ್ಕೆ ತಕ್ಕಂತೆ ಕಾರ್ಯ ನಿರ್ವಹಿಸುವ ವಾತಾವರಣವನ್ನು ನಿರ್ಮಾಣ ಮಾಡಿಕೊಡುವ ಕಾರ್ಯವನ್ನು ಕೈಗೊಳ್ಳಲು ಮಹಿಳಾ ಅಭಿವೃದ್ಧಿಗಾಗಿ ಪ್ರತಿಯೊಂದು ಸರ್ಕಾರಗಳು ಪ್ರತ್ಯೇಕ ಇಲಾಖೆಗಳನ್ನು ಸ್ಥಾಪಿಸಿ ಅಭಿವೃದ್ಧಿಯ ನಾನಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ. ಅಂತಹ ಅನೇಕ ಕಾರ್ಯಕ್ರಮಗಳಲ್ಲಿ ನಿರಾಶ್ರಿತ ಮಹಿಳೆಯರ ಪುನರ್ ವಸತಿ ಕಾರ್ಯಕ್ರಮವೂ ಒಂದು. ಈ ಕಾರ್ಯಕ್ರಮವು ಆರಂಭದಲ್ಲಿ ಧಾಮಿಕ ಪದ್ಧತಿಯಿಂದ ನಿರಾಶ್ರಿತರಾದ ದೇವದಾಸಿ ಹಾಗೂ ಬಾಲವಿಧವೆಯರ ಕಾರ್ಯಕ್ರಮಕ್ಕೆ ಸೀಮಿತವಾಗಿತ್ತು ನಂತರದ ದಿನಗಳಲ್ಲಿ ವಿಧವೆ, ವಿಚ್ಛೇಧಕರು, ಅವಿವಾಹಿತ ಮಹಿಳೆಯರನ್ನು ಕಾಣಬಹುದು.

ಸ್ವಾತಂತ್ರ್ಯಾನಂತರ ಭಾರತ ದೇಶ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಅಂಗೀಕರಿಸಿತು.[4] ಅಂಬೇಡ್ಕರ್ ನೇತೃತ್ವದಲ್ಲಿ ರಚನೆಯಾದ ಭಾರತದ ಸಂವಿಧಾನದ ಉಲ್ಲೇಖಿಸಲ್ಪಟ್ಟ ಎಲ್ಲಾ ನೀತಿ

ನಿರ್ದೇಶನಗಳು ಗುರಿಯಾಗಿಸಿಕೊಂಡಿರುವುದು 'ಸುಖೀ ರಾಜ್ಯ' ಅಥವಾ ಕಲ್ಯಾಣ ರಾಜ್ಯವನ್ನು ಅಸ್ತಿತ್ವಕ್ಕೆ ತರುವುದನ್ನು ಆದ್ದರಿಂದಲೇ ಸಂವಿಧಾನದ ಪ್ರಾರಂಭದಲ್ಲಿನ ಘೋಷ ವಾಕ್ಯವೇ ಕಲ್ಯಾಣ ರಾಜ್ಯದ ಆಶಯವನ್ನು ಸಾರಿ ಹೇಳುತ್ತಿದೆ.

"ನಮ್ಮ ದೇಶವನ್ನು ಸಾರ್ವಭೌಮ, ಸಮತಾವಾದಿ, ಜಾತ್ಯಾತೀತ, ಪ್ರಜಾಪ್ರಭುತ್ವ ಮತ್ತು ಗಣತಂತ್ರೀಯ ರಾಷ್ಟ್ರವನ್ನಾಗಿಸುವುದಲ್ಲದೆ ಅದರ ಸರ್ವ ಪ್ರಜೆಗಳಿಗೂ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ, ವೈಚಾರಿಕ, ವಾಕ್, ನಂಬಿಕೆ ಧರ್ಮಶ್ರದ್ಧೆ ಮತ್ತು ಪೂಜಾ ಸ್ವಾತಂತ್ರ್ಯ, ಸಮಾನ ಅವಕಾಶ ಮತ್ತು ಸ್ಥಾನಮಾನ ವ್ಯಕ್ತಿಯ ಘನತೆ ಮತ್ತು ರಾಷ್ಟ್ರದ ಐಕ್ಯತೆ ಮತ್ತು ಅಭೇದ್ಯತೆಯ ಭರವಸೆಯೊಂದಿಗೆ ಸಹಭಾತೃತ್ವವನ್ನು ದೊರಕಿಸಿಕೊಡುವುದು."[5]

ಸಂವಿಧಾನದಲ್ಲಿ ಪುರುಷರು ಮತ್ತು ಮಹಿಳೆಯರ ನಡುವಿನ ಅಸಮಾನತೆಯನ್ನು ಹೋಗಲಾಡಿಸಿ ಮಹಿಳೆಯರಿಗೂ ಮೂಲಭೂತ ಹಕ್ಕುಗಳನ್ನು ಅನ್ವಯಿಸಲಾಗಿದೆ.[6] ವಿಶೇಷ ಸಂದರ್ಭದಲ್ಲಿ ಮಹಿಳೆಯರಿಗೆ ವಿಶೇಷ ಉಪಬಂಧಗಳನ್ನು ಕಲ್ಪಿಸಲು ಅನುವು ಮಾಡಿಕೊಡಲಾಗಿದೆ. ಸಂಸತ್ತು ಸಂವಿಧಾನ ಪ್ರಬದ್ಧವಾದ ಶಾಸನಾಧಿಕಾರವನ್ನು ಬಳಸಿಕೊಂಡು ಮಹಿಳೆಯರನ್ನು ಪುರುಷರ ಅಧಿಕಾರ, ಯಜಮಾನ್ಯದ ನಿಯಂತ್ರಣದಿಂದ ಹೊರತಂದು ಅವರು ತಮ್ಮ ಹಕ್ಕುಗಳನ್ನು ಅನುಭವಿಸಲು ಹಲವಾರು ಕಾನೂನುಗಳನ್ನು ರಚಿಸಿದೆ. ಭಾರತೀಯ ಸಮಾಜ ಅಸಮಾನತೆಗಳ ಸಮಾಜ. ಸಂಪನ್ಮೂಲ ಮತ್ತು ವಿತರಣೆಯ ಮೇಲಿನ ಹಕ್ಕನ್ನು ಮುಖ್ಯವಾಗಿ ಜಾತಿಮತ್ತು ಲಿಂಗಾಧಾರದಲ್ಲಿ ಬಳಕೆಯಾಗುತ್ತಿದ್ದದು ಚಾರಿತ್ರಿಕವಾಗಿ ಕಟು ವಾಸ್ತವ ಸಂಗತಿಯಾಗಿದೆ. ಈ ಸತ್ಯ ಗೊತ್ತಿದ್ದ ಕಾರಣದಿಂದಲೇ ಸಂವಿಧಾನ ರಚನಾಕಾರರು ಇಂತಹ ಸಾಮಾಜಿಕ ರಚನೆಗಳನ್ನು ಛಿದ್ರಿಸಲು ಅಗತ್ಯವಾದ ನಿರ್ದೇಶನಗಳನ್ನು ಸಂವಿಧಾನದಲ್ಲೇ[7] ಉಲ್ಲೇಖಿಸಿದ್ದಾರೆ.

ಅಧಿಕಾರ ಸೂತ್ರಗಳನ್ನು ವಹಿಸಿದ ಮುಂದಾಳುಗಳು ನಮ್ಮ ಸಂಸ್ಕೃತಿ ಪರಂಪರೆಗೆ ಹೊಂದುವ ಆಸೆ ಆಕಾಂಕ್ಷೆಗಳನ್ನು ಈಡೇರಿಸುವ ಮತ್ತು ಅಂತರರಾಷ್ಟ್ರೀಯ ಜೀವನದಲ್ಲಿ ನಮ್ಮ ರಾಷ್ಟ್ರಕ್ಕೊಂದು ಸ್ಥಾನವನ್ನು ಪಡೆಯಲು ಅರ್ಹತೆಯನ್ನು ಒಡಮೂಡಿಸುವ ಸಂವಿಧಾನವನ್ನು

ರಚಿಸುವ ಹೊಣೆಯನ್ನು ಪ್ರಾತಿನಿಧಿಕ ಮೇಧಾವಿ ಮಂಡಳಕ್ಕೆ ವಹಿಸಿದರು. ಆ ಮೇಧಾವಿಗಳ ಸಾಮೂಹಿಕ ವವೇಕಸೂಕ್ತಿಗಳೇ ನಮ್ಮ ಸಂವಿಧಾನದ ಸೂತ್ರಗಳಾಗಿವೆ.

ಭಾರತೀಯ ನಾಗರೀಕರಿಗೆ ನ್ಯಾಯ, ಸ್ವಾತಂತ್ರ್ಯ, ಸರಿಸಮಾನತೆ ಮತ್ತು ಸೌಹಾರ್ದತೆಗಳನ್ನು ದೊರಕಿಸುವುದೇ ನಮ್ಮ ಸಂವಿಧಾನದ ಘನೋದ್ದೇಶವಾಗಿದೆ. ಅದರ ಪ್ರಧಾನ ವೈಶಿಷ್ಟ್ಯಯವೆಂದರೆ ನಾಗರೀಕ ಮೂಲಭೂತ ಹಕ್ಕುಗಳ ರಕ್ಷಣೆಯ ಭರವಸೆಯನ್ನೀಯುವ ಸೂತ್ರಗಳು. ಜಗತ್ತಿನಲ್ಲಿ ಯಾವ ದೇಶದ ಘಟನೆಯೂ ಇಷ್ಟು ವಿಷಾದವಾದ ಹೊಣೆಯನ್ನು ಸರಕಾರದ ಮೇಲೆ ಹೊರಿಸಿಲ್ಲ; ಕೆಲಮಟ್ಟಿಗೆ ಅಮೆರಿಕಾ ದೇಶದ ಘಟನಾಸೂತ್ರಗಳು ಅಪವಾದವಾಗಿವೆ. ಈ ಸೂತ್ರಗಳ ಪರಿಣಾಮವಾಗಿ ಭಾರತ ದೇಶದಲ್ಲಿಯ ಯಾವ ಕಾನೂನು ನಾಗರಿಕರ ಮೂಲಭೂತ ಹಕ್ಕುಗಳಿಗೆ ವಿಸಂಗತವಾಗಿರಕೂಡದು; ವಿಸಂಗತವಾಗಿದ್ದರೆ ಅಂಥ ಕಾನೂನಿನ ಔಚಿತ್ಯವನ್ನು ಸುಗಮತೆಯನ್ನು ನಿರ್ಣಯಿಸುವ ಅಧಿಕಾರವನ್ನು ರಾಜ್ಯ ಶ್ರೇಷ್ಟ ನ್ಯಾಯಾಲಯಗಳಿಗೂ ರಾಷ್ಟ್ರದ ಪರಮಶ್ರೇಷ್ಟ ನ್ಯಾಯಾಲಯಕ್ಕೂ ಕೊಡಲಾಗಿದೆ. ಈ ಕಾರಣದಿಂದ ನಮ್ಮ ಸಂವಿಧಾನವು ನಾಗರೀಕನ ಹಕ್ಕುಬಾಧ್ಯತೆಗಳನ್ನೊಳಗೊಂಡ ಪವಿತ್ರ ಗ್ರಂಥವಾಗಿದೆ. ಹಾಗೆ ಭಾವಿಸುವುದೂ ಆ ಸೂತ್ರಗಳಿಗನುಗುಣವಾಗಿ ಆಸೆ ಆಕಾಂಕ್ಷೆಗಳನ್ನು ಮಾರ್ಪಡಿಸಿಕೊಳ್ಳುವುದೂ ಭಾರತೀಯನ ಕರ್ತವ್ಯವಾಗಿದೆ.

ಭಾರತದ ಯಾವ ರಾಜ್ಯವೂ ಕಾನೂನಿನ ದೃಷ್ಟಿಯಲ್ಲಿ ನಾಗರಿಕ ಸಮಾನತೆಯನ್ನು ಅಥವಾ ಕಾನೂನಿನ ಸಮಾನ ರಕ್ಷಣೆಯನ್ನು ಯಾರಿಗೂ ಅಲ್ಲಗಳೆಯಲಾರದು. ಈ ತತ್ವ ಸಂವಿಧಾನದ ಹದಿನಾಲ್ಕನೇ ಸೂತ್ರದಲ್ಲಿ ಗರ್ಭಿತವಾದ ಸಮಾನತೆಯು ನಿರಂಕುಶವಾದುದಲ್ಲ. ವ್ಯವಹಾರದಲ್ಲಿ, ಸೃಷ್ಟಿಯಲ್ಲಿ, ನಿರಂಕುಶ ಸಮಾನತೆಯು ಅಶಕ್ಯವಾದುದು. ಭಿನ್ನತೆಯೂ, ಅಸಮಾನತೆಯೂ ಸೃಷ್ಟಿಯಲ್ಲಿ ಕಂಡುಬರುವ ಸಾಮಾನ್ಯ ವಿಷಯವಾಗಿದೆ. ಕಾನೂನಿನ ಕ್ಷೇತ್ರ ವಿಶಾಲವಾದುದು, ಅದರ ವಿಷಯ ವ್ಯಾಪ್ತಿಯು ಮಾನವ ಕುಟುಂಬದ ವ್ಯವಹಾರ ಬೆಳವಣಿಗೆಯಂತೆ ಬೆಳೆಯುತ್ತ ಹೋಗುತ್ತದೆ. ಮಾನವನ ವ್ಯವಹಾರಿಕ ಜೀವನವು ವಿಸ್ತೃತವಾಗುತ್ತ ನಡೆದಿದೆ. ಆದುದರಿಂದ ಈ ಸೂತ್ರದ ಅನ್ವಯ ವರ್ಗೀಯ ಕಾನೂನಿಗೆ ಅನುವಿದ್ದರೂ ವರ್ಗೀಕರಣಕ್ಕೆ ತಳಹದಿಯಾದ ತತ್ವವು ಸಮಂಜಸವಾಗಿರಬೇಕು. ಕಾನೂನಿನ ಉದ್ದೇಶಕ್ಕೂ, ವರ್ಗೀಕರಣ ತತ್ವಕ್ಕೂ ತರ್ಕಬದ್ಧವಾದ ಸಂಬಂಧವಿರಬೇಕು. ಒಂದೇ ವರ್ಗದಲ್ಲಿ ಅಡಕವಾದ ವ್ಯಕ್ತಿಗಳಲ್ಲಿ ಭೇದಭಾವವನ್ನು ಕಲ್ಪಿಸುವ

ಕಾನೂನು ಅಕ್ರಮವಾಗುತ್ತದೆ. ಕಾನೂನಿಗಾಗಿ ಜನತೆಯಲ್ಲಿ ವರ್ಗವನ್ನು ಕಲ್ಪಿಸುವುದಾದರೆ, ಆ ಕಾನೂನಿಗೆ ಒಳಪಟ್ಟಿರುವವರಿಗೂ ಮತ್ತು ಅದರ ಕಕ್ಷೆಯಿಂದ ಹೊರಗುಳಿಸಲ್ಪಟ್ಟಿರುವವರಿಗೂ ಇರುವ ಭಿನ್ನತೆಯು ಯಾವುದಾದರೊಂದು ಸಮಂಜಸ ತತ್ವವನ್ನು ಅವಲಂಬಿಸಿರಬೇಕು. ಉದಾಹರಣೆಗಾಗಿ ಗೇಣಿದಾರರ ರಕ್ಷಣೆಗೆ ವಿಧಿಸಿರುವ ಕಾನೂನುಗಳನ್ನು ಸ್ಮರಿಸಬಹುದು. ಗೇಣಿದರರನ್ನು ಭೌಗೋಳಿಕ ರೀತಿಯಿಂದ ಅಥವಾ ಸಾಂಪ್ರದಾಯಿಕ ರೀತಿಯಿಂದ ವರ್ಗೀಕರಿಸುವುದು ಸಾಧ್ಯವಿದೆ. ಆದರೆ ಒಂದೇ ರೀತಿಯ ಗೇಣಿಪದ್ಧತಿಗೆ ಒಳಪಟ್ಟವರಲ್ಲಿ ಭಿನ್ನತೆಯನ್ನು ಕಲ್ಪಿಸುವುದು ಸರ್ವ ಸಮಾನತೆಯ ಈ ಸೂತ್ರಕ್ಕೆ ವಿರೋಧಕವಾಗುವುದು.

ಆನತೆಯ ರೀತಿನೀತಿಗಳಲ್ಲಿ, ವ್ಯವಹಾರಗಳಲ್ಲಿ, ರಾಜಕೀಯ ಪದ್ಧತಿಗಳಲ್ಲಿ, ತತ್ವಗಳಲ್ಲಿ, ಸಮಾಜ ರಚನೆಯಲ್ಲಿ ಕಂಡುಬರುವ ಭಿನ್ನತೆಯು ಅಥವಾ ಅಸಮತೆಯು ಸೂಕ್ಷ್ಮ ದೃಷ್ಟಿಯ ನಿರೀಕ್ಷಣೆಗೆ ಹೊಳೆಯುವಂತಹದು. ಆದರೆ ಸಂವಿಧಾನದ 15ನೇ ಸೂತ್ರದಂತೆ.

1) ರಾಜ್ಯ ಸರ್ಕಾರವು ಧರ್ಮ, ಕುಲ, ಜಾತಿ, ಲಿಂಗ, ಜನ್ಮ ಸ್ಥಾನ ಇವುಗಳ ಅಥವಾ ಇವುಗಳಲ್ಲಿ ಯಾವುದಾದರೊಂದರ ಆಧಾರದಿಂದ ನಾಗರೀಕರಲ್ಲಿ ಭೇದವನ್ನು ಕಲ್ಪಿಸಕೂಡದು.
2) ಧರ್ಮ, ಕುಲ, ಜಾತಿ, ಲಿಂಗ, ಜನ್ಮಸ್ಥಾನ ಇವುಗಳ ಅಥವಾ ಇವುಗಳಲ್ಲಿ ಯಾವುದಾದರೊಂದರ ಆಧಾರದ ಮೇಲಿಂದ ಮಾತ್ರ.

   ಅ) ಅಂಗಡಿಗಳಿಗೆ, ಸಾರ್ವತ್ರಿಕ ಫಲಾಹಾರ ಮಂದಿರಗಳಿಗೆ, ಭೋಜನ ಗೃಹಗಳಿಗೆ ಮತ್ತು ಸಾರ್ವಜನಿಕ ಮನೋರಂಜನ ಸ್ಥಾನಗಳಿಗೆ ಪ್ರವೇಶಿಸುವ ವಿಷಯದಲ್ಲಿಯಾಗಲೀ,

   ಆ) ಬಾವಿಗಳನ್ನು, ಕೆರೆಗಳನ್ನು, ಸ್ನಾನಗೃಹಗಳನ್ನು ರಸ್ತೆಗಳನ್ನು ಮತ್ತು ಪೂರ್ಣವಾಗಿ ಅಥವಾ ಅಂಶತಃ ದೊರೆತ ಸರ್ಕಾರದ ಸಹಾಯಧನದಿಂದ ನಡೆಸಿಕೊಂಡು ಬಂದ ಅಥವಾ ಸಾರ್ವಜನಿಕ ಉಪಯೋಗಕ್ಕೆ ಅರ್ಪಿಸಲ್ಪಟ್ಟ ವಿರಾಮಸ್ಥಾನಗಳನ್ನು ಉಪಯೋಗಿಸುವ ಸಂಬಂಧದಲ್ಲಿಯಾಗಲೀ, ನಾಗರೀಕನನ್ನು ಯಾವ ಅನರ್ಹತೆಗೆ, ಹೊಣೆಗಾರಿಕೆಗೆ, ಬಂಧನಕ್ಕೆ, ಷರತ್ತಿಗೆ ಒಳಪಡಿಸಲಾಗದು.
3) ಮಹಿಳೆಯರಿಗಾಗಿ ಮತ್ತು ಮಕ್ಕಳಿಗಾಗಿ ವಿಶೇಷ ಕಾನೂನುಗಳನ್ನು ವಿಧಿಸಲು ರಾಜ್ಯ ಸರ್ಕಾರಕ್ಕೆ ಈ ಸೂತ್ರದಿಂದ ಯಾವ ಅಡ್ಡಿಯೂ ಉಂಟಾಗಲಾರದು.

4) ಸಾಮಾಜಿಕ ರೀತಿಯಿಂದ ಮತ್ತು ಶೈಕ್ಷಣಿಕ ರೀತಿಯಿಂದ ಹಿಂದುಳಿದ ನಾಗರೀಕರ ಅಥವಾ ಗಿರಿಜನ ಹರಿಜನರ ಉದ್ಧಾರಕ್ಕಾಗಿ ವಿಶೇಷ ಕಾನೂನು ನಿಯಮಗಳನ್ನು ವಿಧಿಸುವುದರಲ್ಲಿ ಈ ಸೂತ್ರವಾಗಲೀ, 26ನೇ ಸೂತ್ರದ 2ನೇ ಭಾಗವಾಗಲೀ ರಾಜ್ಯ ಸರ್ಕಾರಕ್ಕೆ ಆತಂಕವನ್ನು ಉಂಟುಮಾಡಲಾರದು.

## ಮಹತ್ವದ ಸೂತ್ರಗಳು

ನಮ್ಮ ಸಂವಿಧಾನದಲ್ಲಿ 14, 15 ಮತ್ತು 16ನೇ ಸೂತ್ರಗಳು ತುಂಬಾ ಮಹತ್ವದ್ದಾಗಿದೆ. ಸ್ತ್ರೀ ಪುರುಷರಲ್ಲಿ ಕಾನೂನುರೀತ್ಯಾ ಭೇದಭಾವಗಳನ್ನು ಕಲ್ಪಿಸಲು ಅವಕಾಶವಿಲ್ಲ; ಪ್ರತಿಬಂಧವಿದೆ. ಕಾನೂನು ದೃಷ್ಟಿಯಿಂದ ಅವರು ಸಮಾನರು. ಪುರುಷರಿಗಿರುವ ಹಕ್ಕುಬಾಧ್ಯತೆಗಳೆಲ್ಲವೂ ಸ್ತ್ರೀಯರಿಗಿವೆ. ಮೇಲು–ಕೀಳು, ಉಚ್ಚ–ನೀಚ ಎನ್ನುವ ಭಾವನೆಗೆ ಎಷ್ಟು ಆಸ್ಪದವಿಲ್ಲ. ಇಷ್ಟೇ ಅಲ್ಲ, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿಗಾಗಿ ವಿಶೇಷ ಕಾನೂನುಗಳನ್ನು ವಿಧಿಸಲು ರಾಜ್ಯ ಸರ್ಕಾರಗಳಿಗೆ ಪೂರ್ಣ ಸ್ವಾತಂತ್ರ್ಯವನ್ನು ಕೊಡಲಾಗಿದೆ. ಇಂಥ ವಿಶೇಷ ಕಾನೂನುಗಳು 14ನೇ ಸೂತ್ರದಲ್ಲಿ ನಮೂದಿಸಲ್ಪಟ್ಟಿರುವ ತತ್ವಾನ್ವಯ ಅಕ್ರಮವಾಗಲಾರವು. 15(3) ನೇ ಸೂತ್ರದ ಆಧಾರದಿಂದ ಗ್ರಾಮಪಂಚಾಯಿತಿ ಮತ್ತು ಸ್ಥಾನಿಕ ಸಂಸ್ಥೆಗಳಿಗೆ ಸಂಬಂಧಪಟ್ಟ ಆಡಳಿತ ಮಂಡಳಗಳಿಗೆ ಚುನಾಯಿತರಾಗುವ ಸದಸ್ಯರಲ್ಲಿ ನಿರ್ದಿಷ್ಟ ಸಂಖ್ಯೆಯ ಸ್ಥಾನಗಳನ್ನು ಮಹಿಳೆಯರಿಗಾಗಿ ಮೀಸಲಾಗಿರಿಸಲು ಸಾಧ್ಯವಾಗುವಂತೆ ಕಾನೂನುಗಳಲ್ಲಿ ಅವಕಾಶವನ್ನು ಕಲ್ಪಿಸಲಾಗಿದೆ. ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಸ್ತ್ರೀಯರು ಪುರುಷರಷ್ಟೇ ಪ್ರಗತಿಯನ್ನು ಹೊಂದುವವರೆಗೆ ಇಂಥ ಸೌಕರ್ಯಗಳು ಅವಶ್ಯ. ಹೆಂಡತಿಯನ್ನು ಅಲಕ್ಷಿಸಿದರೆ, ಅವಳ ಪೋಷಣೆಗಾಗಿ ಯೋಗ್ಯವ್ಯವಸ್ಥೆ ಮಾಡುವ ಹೊಣೆಯನ್ನು ಗಂಡನು ಹೊರಲೇಬೇಕು. ಈ ಕಾನೂನು ನಿಯಮವನ್ನು ಕ್ರಿಮಿನಲ್ ಪ್ರೊಸೀಜರ್ ಕೋಡಿನ 488ನೇ ಕಲಂನಲ್ಲಿ ಕಾಣಬಹುದು. ಆದರೆ, ಹೆಂಡತಿಯು ಗಂಡನನ್ನು ಕಡೆಗಣಿಸಿದರೆ, ಯೋಗಕ್ಷೇಮದ ಹೊಣೆಯನ್ನು ಅವಳು ಹೊರಬೇಕಾಗಿಲ್ಲ. ಕಾರ್ಖಾನೆ ಮತ್ತು ಸರ್ಕಾರಿ ನೌಕರಿಗಳಲ್ಲಿ ಸೇರಿದ ಮಹಿಳೆಯರಿಗೆ ಹೆರಿಗೆ ರಜದ ಸೌಕರ್ಯಗಳುಂಟು. ಒಟ್ಟಾರೆ ದೈಹಿಕ ಮತ್ತು ಸಾಮಾಜಿಕ ಅಬಲತೆಯ ಮೂಲಕ ಅವಶ್ಯವೆನಿಸಿದ ಸವಲತ್ತುಗಳನ್ನು ವಿಧಿಸಲು ಯಾವ ಆತಂಕವೂ ಇಲ್ಲ.

'ಸ್ತ್ರೀ ಪುರುಷರು ಸಮಾನರು; ಅವರ ಹಕ್ಕುಬಾಧ್ಯತೆಗಳೂ ಸಮಾನವಾದವು' ಎಂಬ ತತ್ವವನ್ನು ಮೇಲ್ಕಾಣಿಸಿದ ಸೂತ್ರಗಳಲ್ಲಿ ಸಂವಿಧಾನವು ನಿರ್ದಿಷ್ಟಪಡಿಸಿದೆ. ಇದರ ವ್ಯತಿರಿಕ್ತವಾಗಿ 33ನೇ ಸೂತ್ರವು ಲೋಕಸಭೆಗೆ ಒಂದು ವಿಶೇಷಾಧಿಕಾರವನ್ನು ಕೊಟ್ಟಿದೆ. ಸಶಸ್ತ್ರ ಪಡೆಗಳಲ್ಲಿ ಅಥವಾ ಸಾರ್ವಜನಿಕ ರಕ್ಷಣಾ ಪಡೆಗಳಲ್ಲಿ ಸೇರುವವರ ಕರ್ತವ್ಯ ನಿರ್ವಹಣೆ ಮತ್ತು ಶಿಸ್ತುಪಾಲನೆಗೆ ಸಹಕಾರಿಯಾಗುವಂತಹ ಕಾನೂನುಗಳನ್ನು ವಿಧಿಸಲು ಮೂಲಭೂತ ಹಕ್ಕುಗಳನ್ನು ಭದ್ರಪಡಿಸುವ ಸೂತ್ರಗಳು ಆತಂಕವನ್ನುಂಟು ಮಾಡಲಾರವು. ಈ ಸೂತ್ರವನ್ನು ಅನುಸರಿಸಿ ಭೂ-ಜಲ-ವಾಯು ಸೇನಾಪಡೆಗಳಲ್ಲಿ ಮಹಿಳೆಯರ ಪ್ರವೇಶಕ್ಕೆ ಪ್ರತಿಬಂಧವನ್ನುಂಟು ಮಾಡುವ ಕಾನೂನುಗಳು 1950 ಮತ್ತು 1957ರಲ್ಲಿ ವಿಧಿಸಲ್ಪಟ್ಟಿವೆ.

ಒಟ್ಟಾರೆಯಲ್ಲಿ ಈ ಕಾಯಿದೆಗಳು ಬಾಲಕಿಯರು ಮತ್ತು ಹೆಂಗಸರು ವಿದ್ಯಾಭ್ಯಾಸದಲ್ಲಿ ಶೀಘ್ರವಾಗಿ ಮುಂದುವರಿಯಲು ಸಹಕಾರಿಯಾಗಿವೆ.

1) ಬಾಲ್ಯವಿವಾಹವು ನಿಷೇಧಿಸಲ್ಪಟ್ಟು ಕಾನೂನಿನ ಪ್ರಕಾರ ಶಿಕ್ಷಾರ್ಹವಾಗಿ ಮಾಡಲ್ಪಟ್ಟಿತು. ವಿದ್ಯಾವಂತ ಪತ್ನಿಯರನ್ನು ಹೊಂದಲು ಹೆಚ್ಚು ಒತ್ತಾಯ ಕಂಡುಬಂದಿತು.
2) ಸ್ತ್ರೀಯರ ವಿದ್ಯಾಭ್ಯಾಸದ ಅವಶ್ಯಕತೆಯ ಅರಿವುಂಟಾಯಿತು.
3) ಜೀವನದ ದುಬಾರಿ ವೆಚ್ಚವನ್ನು ಸರಿದೂಗಿಸಲು ಅಥವಾ ಪತಿಯ ಆದಾಯವನ್ನು ಹೆಚ್ಚಿಸುವ ದೆಸೆಯಿಂದ ಸ್ತ್ರೀಯರು ಉದ್ಯೋಗವನ್ನು ಅವಲಂಬಿಸಬೇಕಾಯಿತು. ವಿವಿಧ ರಂಗಗಳಲ್ಲಿ ಸ್ತ್ರೀಯರ ನೇಮಕಕ್ಕೆ ಅವಕಾಶ ನೀಡಲಾಗಿದೆ. ಈ ರಂಗಗಳೆಂದರೆ ಶಿಕ್ಷಣ, ಸಾಮಾಜಿಕ ಕ್ಷೇಮಾಭಿವೃದ್ಧಿ, ಆರೋಗ್ಯ, ಸಣ್ಣ ಕೈಗಾರಿಕೆಗಳು ಇತ್ಯಾದಿ ಇವೆಲ್ಲಕ್ಕೂ ನಿರ್ದಿಷ್ಟ ವಿದ್ಯಾರ್ಹತೆ ಇರಬೇಕು.
4) ಉಪಾಧ್ಯಾಯಿನಿಯರ ಸಂಖ್ಯೆಯನ್ನು ಹೆಚ್ಚಿಸಲು ವಿಶೇಷ ಕ್ರಮಗಳನ್ನು ಕೈಗೊಳ್ಳಲಾಗಿದೆ. ಇಂತಹ ಕ್ರಮಗಳೆಂದರೆ ಸೆಕೆಂಡರಿ ಶಾಲೆಗಳಲ್ಲಿ ಅಭ್ಯಾಸ ಮಾಡುತ್ತ ಉಪಾಧ್ಯಾಯ ವೃತ್ತಿಯನ್ನು ಆಶಿಸುವ ಬಾಲಕಿಯರಿಗೆ ವಿದ್ಯಾರ್ಥಿ ವೇತನ ನೀಡುವುದು. ಉಚಿತ ಊಟ ಮತ್ತು ವಾಸದ ಸೌಲಭ್ಯ. ವಯಸ್ಕರ ಸ್ತ್ರೀಯರಿಗೆ ಪ್ರತ್ಯೇಕವಾಗಿ ತರಬೇತಿ ನೀಡುವ ಶಾಲೆಗಳನ್ನು ಪ್ರಾರಂಭಿಸುವುದು. ಅಧ್ಯಾಪಕಿಯರಿಗೆ ಗ್ರಾಮಾಂತರ ಪ್ರದೇಶಗಳಲ್ಲಿ ಉಚಿತ ವಾಸ ಸೌಲಭ್ಯ ಮತ್ತು ವಿಶೇಷ ಭತ್ಯೆ ನೀಡುವಿಕೆ.

ಮೂರನೇ ಪಂಚವಾರ್ಷಿಕ ಯೋಜನೆಯು ಬಾಲಕಿಯರ ಮತ್ತು ಸ್ತ್ರೀಯರ ವಿದ್ಯಾಭ್ಯಾಸಕ್ಕೆ ವಿಶೇಷ ಆದ್ಯತೆ ನೀಡಿದ್ದು ವಿದ್ಯಾಭ್ಯಾಸದ ರಂಗದಲ್ಲಿ ಅನೇಕ ಹಂತಗಳಲ್ಲಿ ಬಾಲಕಿಯರ ವಿದ್ಯಾಭ್ಯಾಸಕ್ಕೆ ಸೌಕರ್ಯಗಳನ್ನು ಹೆಚ್ಚು ಮಾಡುವುದೇ ಆಗಿದೆಯೆಂದು ವಿಶ್ಲೇಷಿಸಿದೆ.

ಶಿಕ್ಷಣ ವಿಷಯಗಳಲ್ಲೂ ಮಾರ್ಪಾಟುಗಳಾಗಿದ್ದು ಗೃಹವಿಜ್ಞನ, ಸಂಗೀತ ಮತ್ತು ಕುಶಲಕಲೆ ಹೆಚ್ಚು ಪ್ರಿಯವಾಗುತ್ತಿವೆ. ವಸ್ತುತಃ ದಕ್ಷಿಣ ಭಾರತದಲ್ಲಿ ಸಂಗೀತವಿಲ್ಲದೆಯೇ ಬಾಲಕಿಯರ ವಿದ್ಯಾಭ್ಯಾಸ ಪೂರ್ಣವಾಗುವುದೆಂದು ಭಾವಿಸುವುದಿಲ್ಲ. ಶಿಶುಸಂರಕ್ಷಣೆಯನ್ನು ಮತ್ತು ಶಿಶುಮನಶ್ಯಾಸ್ತ್ರವು ಕಾಲೇಜಿನ ವ್ಯಾಸಂಗ ವಿಷಯಗಳಲ್ಲಿ ಸೇರಿಸಲ್ಪಟ್ಟಿದೆ. ಅದೇ ರೀತಿಯಲ್ಲಿ ಸಮಾಜ ವಿಜ್ಞಾನವೂ ಕೂಡ ಸೇರಿದೆ. ಪ್ರಾಂತೀಯ ಹಾಗೂ ದೇಶಭಾಷೆಗಳನ್ನು ಕಲಿಯುವಂತೆ ಒತ್ತಾಯ ಮಾಡಲಾಗಿದೆ. ಸಂಸ್ಕೃತ ವ್ಯಾಸಂಗವೂ ಪ್ರೋತ್ಸಾಹಿಸಲ್ಪಟ್ಟು ಆಧುನಿಕ ಸ್ತ್ರೀಯರಿಗೆ ಹೊಸ ಜ್ಞಾನಭಂಡಾರವನ್ನು ತೆರೆದಿದೆ.

ಸಾಮಾನ್ಯ ಭಾರತೀಯನು ವಿದ್ಯಾವಂತನಾಗಿರಲಿ, ಅಲ್ಲದಿರಲಿ, ಸ್ತ್ರೀಯರು ಭಾರತೀಯ ನಂಬಿಕೆಗಳ ಆಶ್ರಯ ಹಾಗೂ ರಕ್ಷಕರು ಎಂಬ ಗೌರವವನ್ನು ಹೊಂದಿದ್ದಾರೆಂಬ ವಿಷಯದಲ್ಲಿ ದ್ವಿವಿಧ ಅಭಿಪ್ರಾಯವನ್ನು ಹೊಂದಿಲ್ಲ. ಇಂಡಿಯಾ ದೇಶವನ್ನು ಭಾರತಮಾತೆ ಎಂದು ವಿವರಿಸಿರುವುದರಿಂದ ನಿಜ ಸ್ತ್ರೀತ್ವದ ಕುರುಹು ಇಂದಿಗೂ ಕಣ್ಮರೆಯಾಗಿಲ್ಲ.

# ಅಡಿಟಿಪ್ಪಣಿಗಳು

1) ಸಾಧ್ವಿ ಪತ್ರಿಕೆ, 31-7-36 ಪು.5 ನ್ನು ವಿವರಗಳಿಗೆ ನೋಡಬಹುದು.
2) Cronological Table of all regulation of the Govt. ofMysore from 1883-1885, Govt. Press Mysore, 1896, p.35.
3) ಅದೇ
4) ಅದೇ
5) ಈ ಘೋಷವಾಕ್ಯ ನಮಗೆ ದೊರೆಯುವುದು ಭಾರತೀಯ ಸಂವಿಧಾನದ ಪ್ರಸ್ತಾವನಾ ಭಾಗದಲ್ಲಿ. 1974ರ ಭಾರತ ಸಂವಿಧಾನ ತಿದ್ದುಪಡಿ 42ನೇ ಅಧಿನಿಯಮದ 2ನೇ ಪ್ರಕರಣದ ಮೇರೆಗೆ "ಸಂಪೂರ್ಣ ಪ್ರಭುತ್ವ ಸಂಪನ್ನ ಲೋಕ ತಾಂತ್ರತಾತ್ಮಕ ಗಣರಾಜ್ಯವಾಗಿ" ಎಂಬ ಪದಗಳ ಬದಲಾಗಿ (3-1-1977 ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
6) ಸಂವಿಧಾನದ ಭಾಗ ಮೂರು, ಮೂಲಭೂತ ಹಕ್ಕುಗಳು ಎಂಬಲ್ಲಿ ವಿವರಗೊಂಡಿರುವ ಸಮಾನತೆಯ ಹಕ್ಕು ಪ್ರಕರಣವನ್ನು ಗಮನಿಸಬಹುದು.
7) Ibid, p.7.

# ಉಪಸಂಹಾರ

"ಚರಿತ್ರೆ ಅಗೋಚರ ಬಿಂದುವೊಂದರಿಂದ ತನ್ನ ಪಯಣವನ್ನು ಆರಂಭಿಸಿ, ಅದರ ಸುತ್ತ ನಿಧಾನಕ್ಕೆ ಚಲಿಸುತ್ತದೆ, ಆದರೆ ಅದರ ವೃತ್ತಗಳು ಹಿಗ್ಗುತ್ತಾ ಹೋಗುತ್ತವೆ. ಅದರ ಚಲನೆ ಬಿರುಸಾಗಿ ಚೇತೋಹಾರಿ ಯಾಗುತ್ತಲೇ ದೇಪೀಪ್ಯಮಾನದ ಉಲ್ಕೆಯಂತೆ, ನಕ್ಷತ್ರದಿಂದ ನಕ್ಷತ್ರಕ್ಕೆ ಜಿಗಿಯುತ್ತದೆ. ಈ ಜಿಗಿತ ಆಗಾಗ ತಾನು ಈ ಹಿಂದೆ ಸುತ್ತಿದ ವರ್ತುಲಗಳನ್ನೂ ಸೀಳುತ್ತಾ ಬ್ರಹ್ಮಾಂಡವನ್ನು ಮುಟ್ಟೇಬಿಟ್ಟತೇನೋ ಅನ್ನುವ ಹಾಗಿರುತ್ತದೆ" ಎಂದವರು ಫ್ರೆಡರಿಕ್ ಎಂಗೆಲ್ಸ್. ಪ್ರಸ್ತುತ ಸಂಶೋಧನಾ ವಿಷಯ "ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣದ ಒಂದು ಅಧ್ಯಯನ (1881–1956)" ವೂ ಸಹ ಅಂಥದ್ದೇ ರೀತಿಯಲ್ಲಿ ಸಾಗುವಂಥದ್ದು.

ಈ ಮೇಲಿನ ಮಾತುಗಳ ಹಿನ್ನಲೆಯಲ್ಲಿ ಅವಲೋಕಿಸಿದಾಗ ಮೈಸೂರು ಸಂಸ್ಥಾನದ ಚರಿತ್ರೆಯ ಸಂಶೋಧನೆ ಇನ್ನೂ ಆರಂಭಿಕ ಹಂತದಲ್ಲೇ ಇದೆ ಅನ್ನಿಸುತ್ತದೆ. ಇದಕ್ಕೆ ಕಾರಣ ಮಹಿಳೆಯರ ಬಗ್ಗೆ ಚಾರಿತ್ರಿಕ ದಾಖಲೆಗಳು ದೊರೆಯುವುದು ಬಹಳಷ್ಟು ಕಮ್ಮಿ.

ಇದನ್ನು ಮಾಡಿಲ್ಲವಾದರೆ, ಸಾಮಾಜಿಕ–ಸಾಂಸ್ಕೃತಿಕ ವೈವಿಧ್ಯತೆಯ ವಿಶ್ಲೇಷಣೆಗೆ ಮಹಿಳಾ ಸಮುದಾಯ ನೀಡಿರುವ ಕೊಡುಗೆಯನ್ನು ಅಲಕ್ಷಿಸಿದಂತೆಯೇ ಆಗುತ್ತದೆ. ಸಮಾಜದ ಬಹುಸಂಖ್ಯಾತರ ಚರಿತ್ರೆ ಬರೆದಿರುವ ಕ್ರಮವನ್ನು ನೋಡಿದಲ್ಲಿ ಅಲ್ಲಿ ಅರ್ಧ ಸತ್ಯಗಳೇ ತುಂಬಿವೆ. ನಮಗೆ ಮಹಿಳೆಯರ ಬಗ್ಗೆ ದೊರೆಯುವುದು ಅಂಥ ಚರಿತ್ರೆಯ ತುಣುಕುಗಳಷ್ಟೆ. ಮೇಲ್ವರ್ಗದ ಮಹಿಳೆಯರ ಬಗ್ಗೆ ಮಾತ್ರ ಉಲ್ಲೇಖಗಳು ಸಿಗುತ್ತವೆ. ಈ ಬೆರಳೆಣಿಕೆಯಷ್ಟು ಮಹಿಳೆಯರೇ ಮಾದರಿಗಳೆಂಬಂತೆ ಚಿತ್ರಿಸಲಾಗಿದೆ. ಆದ್ದರಿಂದ ಈ ಅಧ್ಯಯನದಲ್ಲಿ ಮಹಿಳಾ ಚರಿತ್ರೆಯನ್ನು ಮರು ದಾಖಲಿಸುವ ಮತ್ತು ಮುಚ್ಚಿಟ್ಟ ಸತ್ಯಗಳನ್ನು ಕಂಡು ಕೊಳ್ಳುವ ಪ್ರಯತ್ನಗಳನ್ನು ಮಾಡಲಾಗಿದೆ.

ಈ ಮೇಲ್ಕಂಡ ಎಲ್ಲಾ ಸೈದ್ಧಾಂತಿಕ ಚೌಕಟ್ಟನಡಿ ಈ ಕೆಳಕಂಡ ಸಂಗತಿಗಳನ್ನು ಚರ್ಚಿಸಲಾಗಿದೆ. ಇದಕ್ಕೆ ಬೇಕಾದ ಆಧಾರಗ್ರಂಥಗಳು, ದಾಖಲಾತಿಗಳು ಇತ್ಯಾದಿ ಆಕರಗಳನ್ನು ರಾಜ್ಯದ ಪತ್ರಗಾರ ಇಲಾಖೆ ಮತ್ತು ರಾಜ್ಯದ ವಿವಿಧ ವಿಶ್ವವಿದ್ಯಾನಿಲಯಗಳ ಗ್ರಂಥಾಲಯಗಳು ಮತ್ತು ಸಂಶೋಧನಾ ಕೇಂದ್ರಗಳಲ್ಲಿ ದೊರಕುವ ಎಲ್ಲಾ ಆಕರಗಳನ್ನು ಸಮಗ್ರವಾಗಿ ಪರಿಶೀಲಿಸಿ ಈ ಮಹಾಪ್ರಬಂಧವನ್ನು ಸಿದ್ಧಗೊಳಿಸಲಾಗಿದೆ.

ಮೊದಲ ಅಧ್ಯಾಯದಲ್ಲಿ ಅಧ್ಯಯನದ ಸ್ವರೂಪ, ವಿಭಾಗೀಕರಣ ಮತ್ತು ವಿಧಾನ, ಆಕರಗಳು, ಅಧ್ಯಯನದ ಮಹತ್ವ ಮತ್ತು ವ್ಯಾಪ್ತಿಯನ್ನು ಚರ್ಚಿಸಲಾಗಿದೆ. ಈ ಭಾಗದಲ್ಲಿ ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣದ ಒಂದು ಅಧ್ಯಯನ (1881–1956) ವಿಷಯಕ್ಕೆ ಅಗತ್ಯವಾದ ತಾತ್ವಿಕ ರೂಪುರೇಷೆ ಗಳನ್ನು ಸಿದ್ಧಪಡಿಸಿಕೊಳ್ಳಲಾಯಿತು. ಅದರಲ್ಲೂ ಮಹಿಳೆಗೆ ಸಂಬಂಧಿಸಿದಂತೆ ಇಲ್ಲಿಯವರೆಗೆ ಕಟ್ಟಿಕೊಳ್ಳುತ್ತಿದ್ದ ಬಲಿಪಶುತನವನ್ನು ಮೀರಿ ಸಾಮಾಜಿಕ ನ್ಯಾಯದ ಅಗತ್ಯವನ್ನು ಗಮನಿಸುತ್ತಲೇ ಮಹಿಳೆಯ ಧಾರಣಶಕ್ತಿ/ಕರ್ತೃತ್ವ (ಏಜೆನ್ಸಿ)ವನ್ನು ಎತ್ತಿಹಿಡಿದು, ಮೈಸೂರು ಸಂಸ್ಥಾನದಲ್ಲಿ ಆಕೆ ಬಹುರೂಪಿ ಮಾದರಿಗಳನ್ನು ಆಯಾ ಚಾರಿತ್ರಿಕ ಸಂದರ್ಭದಲ್ಲಿಟ್ಟು ಚರ್ಚಿಸಲು ಅಗತ್ಯವಾದ ವಿಧಾನ ಮತ್ತು ಆಕರಗಳನ್ನು ಈ ಅಧ್ಯಾಯದಲ್ಲಿ ಸ್ಪಷ್ಟಪಡಿಸಿಕೊಳ್ಳಲಾಯಿತು.

ಎರಡನೇ ಅಧ್ಯಾಯದಲ್ಲಿ ಮೈಸೂರು ರಾಜ್ಯದ ಸ್ತ್ರೀಯರ ಸ್ಥಾನಮಾನ ಮತ್ತು ಅಂದಿನ ಸಮಾಜದಲ್ಲಿ ಇದ್ದ ಸಮಸ್ಯೆಗಳನ್ನು ಚರ್ಚಿಸಲಾಗಿದೆ. ಈ ಭಾಗದಲ್ಲಿ ಸ್ಪಷ್ಟಪಡಿಸಿಕೊಂಡು ಮುಖ್ಯ ಸಂಗತಿಗಳೆಂದರೆ: ಮೈಸೂರು ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಯಲ್ಲಿ ಜಾತಿಪದ್ಧತಿಯ ಕಟ್ಟುಪಾಡುಗಳು ಮತ್ತು ಅವುಗಳ ದುಷ್ಪರಿಣಾಮಗಳನ್ನು ಚರ್ಚಿಸಲಾಗಿದೆ. ಆ ಸಂದರ್ಭದಲ್ಲಿ ಈ ನಾಡಿನಲ್ಲಿ ಪ್ರವೇಶ ಪಡೆದ ವಸಾಹತುಶಾಹಿ ಸಂದರ್ಭ ಮತ್ತು ಬದಲಾವಣೆಗಳನ್ನು ಗಮನಿಸಿ, ಲಿಂಗ ಪ್ರಜ್ಞೆಯನ್ನು[1] ಹಾಗೂ ಅದು ಎದುರಿಸಿದ ಸವಾಲುಗಳನ್ನು ಅರಿತುಕೊಳ್ಳಲಾಗಿದೆ. ಆದ್ದರಿಂದ ಮಹಿಳೆಯ ಸ್ಥಾನಮಾನ ಮತ್ತು ವಸಾಹತುಶಾಹಿ ಆಧುನಿಕತೆ ಎಂಬ ಎರಡು ಪರಿಭಾಷೆಗಳೂ ಮೈಸೂರು ಸಂಸ್ಥಾನದ ಹಿನ್ನಲೆಯಲ್ಲಿ ಒಂದಕ್ಕೊಂದು ಪೂರಕವಾಗಿ ಪರಿಕಲ್ಪಿತವಾಗಿವೆ ಎಂಬುದನ್ನು ಈ ಅಧ್ಯಾಯದ ಆರಂಭದಲ್ಲೇ ಕಂಡುಕೊಳ್ಳಲಾಗಿದೆ. ಕಾರಣ ಈ ವಸಾಹತುಶಾಹಿ ಆಧುನಿಕತೆ ಈ ನಾಡಿನಲ್ಲಿ ಪ್ರವೇಶಿಸಿದಾಕ್ಷಣ ಎಲ್ಲಾ ಸಮುದಾಯಗಳಲ್ಲೂ ಒಂದು ರೀತಿಯ ನಾಗರೀಕ ಚಲನೆ ಎನ್ನುವುದು ಆರಂಭವಾಗುತ್ತದೆ. ಅಲ್ಲದೆ, ನಾವು ಗ್ರಹಿಸುವ ಸತ್ಯಗಳೂ ಸಹ ಈ ವಸಾಹತುಶಾಹಿ ಆಧುನಿಕತೆಯಿಂದಲೇ ಹೊರಹೊಮ್ಮಿದ್ದು ಎನ್ನುವುದನ್ನು ಮರೆಯುವಂತಿಲ್ಲ. "ವಸಾಹತುಶಾಹಿ ಭಾಷೆಯೆಂದರೆ ಅದೊಂದು ನಿರ್ದಿಷ್ಟ ಬಗೆಯ ಅಭಿವೃದ್ಧಿ ಕಥನ, ನಿರ್ದಿಷ್ಟ ಬಗೆಯ ವಿಜ್ಞಾನ, ತಂತ್ರಜ್ಞಾನ ಹಾಗೂ ನಿರ್ದಿಷ್ಟ ಬಗೆಯ ಜೀವನ ಕ್ರಮ."[2]

ಆದ್ದರಿಂದ ಮಹಿಳೆಯರ ಸ್ಥಾನಮಾನ ಎಂದಾಕ್ಷಣ ನಮ್ಮೆದುರು ನಿಲ್ಲುವ ಸಂಗತಿಗಳು ಈ ಕೆಳಗಿನಂತಿವೆ. "ಸಮಾಜವೊಂದು ಸಾಧಿಸಿರುವ ನಾಗರಿಕತೆಯ ಮಟ್ಟವನ್ನು ಅಳೆಯುವಲ್ಲಿ ಅತ್ಯಂತ ಮುಖ್ಯವಾದ ಸೂಚಿ", ಜೇಮ್ಸ್ ಮಿಲ್‌ನ ಪ್ರಕಾರ, "ಸ್ತ್ರೀಯರಿಗೆ ಆ ಸಮಾಜ ನೀಡಿರುವ ಸ್ಥಾನಮಾನಗಳೇ ಆಗಿರುತ್ತದೆ. ಒರಟು ಜನಗಳ ಪೈಕಿ, ಮಹಿಳೆಯರನ್ನು ಸಾಮಾನ್ಯವಾಗಿ ತುಚ್ಛೀಕರಿಸಲಾಗಿರುತ್ತದೆ. ನಾಗರಿಕ ಜನರ ನಡುವೆ ಅವರನ್ನು ಘನತೆಯ ಸ್ಥಾನಕ್ಕೇರಿಸಲಾಗಿರುತ್ತದೆ... ಹಿಂದೂಗಳು ತಮ್ಮ ಮಹಿಳೆಯರನ್ನು ಕುರಿತಂತೆ ಬೆಳೆಸಿಕೊಂಡಿರುವ ರೂಢಿಗತ ತಿರಸ್ಕಾರಭಾವವನ್ನು ಮೀರಿದ್ದು ಯಾವುದೂ ಇಲ್ಲ. ಹಿಂದೂಗಳ ಕಾನೂನುಗಳಲ್ಲಿ ಅಥವಾ ಅವರ ಇತರ ಪುಸ್ತಕಗಳಲ್ಲಿ ಮಹಿಳೆಯರ ಪ್ರಸ್ತಾಪ ಬರುವುದು ಅತಿ ವಿರಳ. ಆದರೆ ಯಾರ ಸ್ವಭಾವದಲ್ಲಿ ಯಾವುದೇ ಬಗೆಯ ಒಳ್ಳೆಯ ಅಥವಾ ಉಪಯುಕ್ತ ಗುಣಗಳನ್ನು ತಂದು ಸೇರಿಸಲಾಗದೋ, ಅಂತಹ ಅತ್ಯಂತ ಹೀನ ಮತ್ತು ದುಷ್ಟ ಪ್ರವೃತ್ತಿಗಳನ್ನೇ ಹೊಂದಿದ ಅನಿಷ್ಟ ಜೀವಿಗಳು ಎಂದು ಅವರನ್ನು ಚಿತ್ರೀಕರಿಸಲಾಗಿದೆ."[3]

ತದನಂತರದಲ್ಲಿ ಸ್ತ್ರೀಯರ ಶಿಕ್ಷಣಾಭಿವೃದ್ಧಿಯಲ್ಲಾದ ಪ್ರಗತಿಯನ್ನು ಅಧ್ಯಯನ ಗುರುತಿಸಿ ಕೊಳ್ಳುತ್ತದೆ. ಅದರಲ್ಲೂ ಹಿಂದುಳಿದ ಹೆಣ್ಣುಮಕ್ಕಳ ಶಿಕ್ಷಣ ಹಾಗೂ ನಿಮ್ನ ವರ್ಗದ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ದೊರೆತ ಪ್ರಾಮುಖ್ಯತೆಯನ್ನು ಅಂಕಿಅಂಶಗಳ ಮೂಲಕ ಚರ್ಚಿಸಲಾಗಿದೆ.

ಮೈಸೂರು ಸಂಸ್ಥಾನದಲ್ಲಿ ವಸಾಹತುಶಾಹಿ ಪೂರ್ವದಲ್ಲಿ ಸ್ತ್ರೀಯರ ಶಿಕ್ಷಣದ ಸ್ವರೂಪ ಹಾಗೂ ಆಧುನಿಕ ಮೈಸೂರು ಸಂಸ್ಥಾನದಲ್ಲಿ ಸ್ತ್ರೀಯರ ಶಿಕ್ಷಣದ ಸ್ವರೂಪ. ಯಾವ ಸಮಾಜವೇ ಆಗಲಿ, ರಾಜ್ಯವೇ ಆಗಲಿ, ಸುಖೀ ರಾಜ್ಯವಾಗಲು ಅದರ ಪ್ರಜೆಗಳಿಗೆ ಶಿಕ್ಷಣ ಅಗತ್ಯವಾಗಿ ಬೇಕು. ಪ್ರಜೆಗಳಲ್ಲಿ ಅರ್ಧಪಾಲಿರುವ ಸ್ತ್ರೀಯರಿಗೆ ಶಿಕ್ಷಣವನ್ನು ಕೊಡದೇ ಹೋದರೆ ಅಷ್ಟು ಭಾಗ ಹಿಂದುಳಿಯಲು ಎಡೆಮಾಡಿಕೊಟ್ಟಂತೆಯೇ ಸರಿ. ಯಾರನ್ನೇ ಆಗಲಿ ಶಿಕ್ಷಣದಿಂದ ವಂಚಿಸುವುದು ಎಂದರೆ ಗುಲಾಮಗಿರಿಗೆ ದೂಡುವುದು, ಪರಾವಲಂಬಿತನಕ್ಕೆ ಈಡು ಮಾಡುವುದು, ಶೋಷಣೆಗೆ ಗುರಿಪಡಿಸುವುದು ಇವೇ ಮೊದಲಾದವುಗಳಿಗೆ ಪ್ರೇರೇಪಿಸುವುದು ಎಂದರ್ಥವಾಗುತ್ತದೆ. ಶಿಕ್ಷಣದಿಂದ ದೂರವಿಟ್ಟಲ್ಲಿ ಅದರ ದುಷ್ಪರಿಣಾಮಗಳು ಶತಮಾನಗಳ ತನಕ ಸಾಗುತ್ತದೆ. ಸ್ತ್ರೀ ಸಮುದಾಯಕ್ಕೆ ಸಂಬಂಧಪಟ್ಟಂತೆ ಇಂದಿಗೂ ನಾವು ಭಾರತದಲ್ಲಿ ಇದನ್ನೇ ಕಾಣುತ್ತಿದ್ದೇವೆ. ಆದ್ದರಿಂದ ಈ

ಅಧ್ಯಾಯದಲ್ಲಿ ಮೈಸೂರು ಮಹಾರಾಜರು ಮಹಿಳಾ ಶಿಕ್ಷಣಕ್ಕೆ ನೀಡಿದ ಬೆಂಬಲ ಮತ್ತು ಮಹಿಳೆಯರು ಪಡೆದ ಆಧುನಿಕ ಶಿಕ್ಷಣದ ಸ್ವರೂಪವನ್ನು ವಿವರಿಸಿಕೊಳ್ಳಲಾಗಿದೆ.

ಮಹಿಳೆಯರ ಉನ್ನತಿಗಾಗಿ ನಡೆದ ಸಾಮಾಜಿಕ ಚಳುವಳಿಗಳು ಎಂಬ ಅಧ್ಯಾಯದಲ್ಲಿ (ಅ) ಪಾಶ್ಚಿಮಾತ್ಯ ಶಿಕ್ಷಣ ಮತ್ತು ಸಂಸ್ಕೃತಿಯ ಪ್ರಭಾವ ಹಾಗೂ ಮೈಸೂರಿನ ಸುಧಾರಣಾ ಚಳುವಳಿಗಳು (ಆ) ಸ್ತ್ರೀಯರ ಏಳ್ಗೆಗಾಗಿ ದುಡಿದಂಥ ಸಾಮಾಜಿಕ ಸಂಸ್ಥೆಗಳು, ಪೌರ ಮತ್ತು ಸಾಮಾಜಿಕ ಪ್ರಗತಿ ಸಂಘಗಳು, ಬ್ರಹ್ಮಸಮಾಜ, ಆರ್ಯಸಮಾಜ, ಥಿಯೋಸಾಫಿಕಲ್ ಸೊಸೈಟಿ, ಮಹಿಳಾ ಸೇವಾ ಸಮಾಜಗಳು ಹಾಗೂ ಇತರ ಸಂಸ್ಥೆಗಳು ಎಂಬ ವಿಷಯಗಳನ್ನು ಅಂದಿನ ರಾಷ್ಟ್ರೀಯ ಚಳುವಳಿಯ ಹಿನ್ನಲೆಯಲ್ಲಿ ಚರ್ಚಿಸಲಾಗಿದೆ. ಈ ಸಂಘಟನೆಗಳೇ ಅಂದಿನ ಮಹಿಳಾ ರಾಜಕೀಯಕ್ಕೆ ಅಗತ್ಯವಾದ ವೇದಿಕೆಯನ್ನು ಸೃಷ್ಟಿಸಿದವು ಎಂಬುದನ್ನು ಗಮನಿಸಲಾಗಿದೆ.

ನಾಲ್ಕನೇಯ ಅಧ್ಯಾಯ ಸ್ತ್ರೀಯರ ಉನ್ನತಿಯ ಸಾಮಾಜಿಕ ಮಸೂದೆಗಳು ಎಂಬ ವಿಷಯವನ್ನು ಕುರಿತು ಚರ್ಚಿಸುತ್ತದೆ. ನಿಮ್ನ ವರ್ಗಗಳು ಮತ್ತು ಮಹಿಳೆಯರ ಪ್ರಗತಿಯಾಗದೆ ಯಾವ ಸಮಾಜವೂ ಸಹ ನಾಗರೀಕ ಎನ್ನಿಸಿಕೊಳ್ಳು ಅರ್ಹವಿರುವುದಿಲ್ಲ ಎಂಬ ಅಂಶಗಳನ್ನು ಆಧುನಿಕ ಮೈಸೂರಿನಲ್ಲಿ ಆದ ಬದಲಾವಣೆಗಳೊಂದಿಗೆ ಚರ್ಚಿಸಲಾಗಿದೆ.

ಆ ಮೂಲಕ ಸಾಮಾಜಿಕ, ಆರ್ಥಿಕ ಚರಿತ್ರೆಗೆ ಮಹಿಳೆಯರು ನೀಡಿರುವ ಕೊಡುಗೆಯನ್ನು ಅರಿತುಕೊಳ್ಳುತ್ತಲೇ ಎದುರಾದ ಸಮಸ್ಯೆಗಳ ಮಹಾಪೂರವನ್ನು ಅವರು ಹೇಗೆ ನಿಭಾಯಿಸಿದರು ಎಂಬುದನ್ನು ವಿವರಿಸಿಕೊಳ್ಳಲಾಗಿದೆ.

ಆದುದರಿಂದ ಹಳೇ ಮೈಸೂರು ಸಂಸ್ಥಾನ, ಆಧುನಿಕ ಮೈಸೂರು ಎಂದು ಪಲ್ಲಟಗೊಳ್ಳುವಾಗ ಆದ ಸಾಮಾಜಿಕ ಬದಲಾವಣೆಗಳನ್ನು ಮಹಿಳಾ ದೃಷ್ಟಿಯಿಂದ ನೋಡಿದಾಗ ಈ ಬದಲಾವಣೆಗಳು ಬ್ರಿಟಿಷರ ಸಾಮ್ರಾಜ್ಯಶಾಹಿ ನೀತಿಯ ಒತ್ತಡಗಳಿಂದಾಗಿ ಹತ್ತೊಂಬತ್ತನೆಯ ಶತಮಾನದಲ್ಲಿ ಕಂಡುಬಂದವು ಎಂದರೆ ತಪ್ಪಾಗಲಾರದು. ಈ ಬದಲಾವಣೆಗಳು ತೀವ್ರತರಹದ ಕಂಪನಗಳನ್ನು ನಾಡಿನಲ್ಲ ಹುಟ್ಟುಹಾಕಿತು. ಶಿಕ್ಷಣ ಪದ್ಧತಿ, ಆರ್ಥಿಕತೆ ಹಾಗೂ ಆಡಳಿತಗಳಲ್ಲಿ ಉಂಟಾದ ತೀವ್ರ ಬದಲಾವಣೆಗಳ ಫಲವಾಗಿ ಹೊಸ ಸಾಮಾಜಿಕ ವರ್ಗಗಳು ಹುಟ್ಟಿದವು. ಈ

ವರ್ಗಗಳ ಹುಟ್ಟು ವಿಭಿನ್ನ ಪ್ರದೇಶಗಳಲ್ಲಿ ಹಾಗೂ ವಿಭಿನ್ನ ಸಮುದಾಯಗಳಲ್ಲಿ ಬೇರೆಬೇರೆ ತೆರನಾಗಿತ್ತು ಹಾಗೂ ಬಹುತೇಕವಾಗಿ ಬ್ರಿಟಿಷರ ಪ್ರವೇಶ ಮತ್ತು ಅವರು ಪ್ರಾಂತ್ಯಗಳನ್ನು ವಶಪಡಿಸಿಕೊಳ್ಳುವ ಗತಿಯನ್ನು ಅವಲಂಬಿಸಿತ್ತು.

ಬ್ರಿಟಿಷರು ನಾಡನ್ನು ಆರ್ಥಿಕವಾಗಿ ಹಿಂಡಿಹಿಪ್ಪೆ ಮಾಡುತ್ತಾ ತಮ್ಮ ಅನುಕೂಲಕ್ಕೆ ತಕ್ಕಂತೆ ಒಡೆದು ಆಳುವ ನೀತಿಯನ್ನು ಅನುಸರಿಸುತ್ತಿದ್ದರೂ ಅಪರೋಕ್ಷ ನಾಡಿನ ಏಕೀಕರಣದ ಬೀಜವನ್ನೂ ಬಿತ್ತಿದರೆಂಬುದನ್ನು ನಾವು ಒಪ್ಪಿಕೊಳ್ಳಬೇಕು. ತಮ್ಮ ಸಾಮ್ರಾಜ್ಯವಾದಿ ಹಿತಾಸಕ್ತಿಗಳಿಗೆ ಪೂರಕವಾದ ಬಂಡವಾಳವಾದಿ ದಿಕ್ಕಿನಲ್ಲಿ ನಾಡನ್ನು ಪರಿವರ್ತಿಸಲೆತ್ನಿಸುತ್ತಿದ್ದ ಬ್ರಿಟಿಷರು ತಮ್ಮ ಆಡಳಿತಾತ್ಮಕ ನೀತಿಗಳಲ್ಲಿ ಉದಾರವಾದಿಯಾಗಿರಬೇಕಾದದ್ದು ಅನಿವಾರ್ಯವಾಗಿತ್ತು.

ಸ್ವಾತಂತ್ರ್ಯ ಪೂರ್ವದ ಕಾಲದಲ್ಲಿ ಸ್ವಾರ್ಥ, ತ್ಯಾಗ ಮಾಡುವುದು, ಅದರಲ್ಲಿಯೂ ಸ್ತ್ರೀಯರು ಅದಕ್ಕೆ ಕೈಹಾಕುವುದು ಎಷ್ಟು ಕಠಿಣ ಕಾರ್ಯವಾಗಿತ್ತೆಂಬ ಮಾತನ್ನು ನೆನೆದರೆ ಇಂದಿಗೂ ಮೈಮೇಲೆ ಮುಳ್ಳು ಏಳದೆ ಇರಲಾರವು. ಪ್ರಾರಂಭ ಕಾಲದ ಕಷ್ಟಪ್ರದ ಸೆರೆಮನೆಯ ವಾಸ ಆ ಮೇಲಿನ ಕಾಲದಲ್ಲಿಯ ಬೇರೆ ಬೇರೆ ಕಾಯಿದೆಯ ಬಂಧನಗಳು ಇವುಗಳ ಮೂಲಕವಾದ ಕಠಿಣ ಪರಿಸ್ಥಿತಿಯಲ್ಲಿ ಜನಸೇವೆ ಮಾಡುವ ವ್ರತವನ್ನು ಯಾರು ಅಂಗೀಕರಿಸಿದರೋ ಅವರ ಕಾರಣದಿಂದಲೇ ಸ್ವಾತಂತ್ರ್ಯದ ಆ ಪ್ರೇಕ್ಷಣೀಯ ಹೋರಾಟವು ಇಂದು ಜಗತ್ತಿನಲ್ಲಿ ಮಹತ್ವ ಪಡೆಯುತ್ತಿದೆ. ಕೆಲವು ಸ್ವಾತಂತ್ರ್ಯ ವೀರರು ಪ್ರಸಿದ್ಧಿಗೆ ಬಂದಂಥವರು ಇದ್ದರೂ ಅವರ ಬೆನ್ನು ಹಿಂದೆ ಯಾವಾಗಲೂ ಲಕ್ಷಗಟ್ಟಲೆ ವೀರರ ಮತ್ತು ವೀರಾಂಗನೆಯರ ಗುಂಪು ಇತ್ತೆಂಬ ಮಾತನ್ನು ಮರೆಯುವುದು ಶಕ್ಯವಿಲ್ಲ.

ದೃಢನಿರ್ಧಾರದ ಮನೋವೃತ್ತಿಯವರು ಬಂದ ಆತಂಕಗಳನ್ನೆದುರಿಸಿ ನಿವಾರಿಸಿ ಮುಂದೆ ಹೋಗುವುದರಿಮದ ಅವರ ಕರ್ತೃತ್ವ ಶಕ್ತಿಗೂ ಒಂದು ಸಂಧಿ ದೊರೆತಂತಾಗಿ ಅದು ಇನ್ನಷ್ಟು ವಿಕಾಸ ಹೊಂದಲು ಒಂದು ಆಸ್ಪದ ದೊರೆಯುವುದುಂಟು. ಆ ದೃಷ್ಟಿಯಿಂದ ನೋಡಿದರೆ ಆತಂಕಗಳಿದ್ದಷ್ಟೂ ಒಳ್ಳೆಯದೇ. ಅವಿದ್ದರೇನೇ ಮನುಷ್ಯನ ಬುದ್ಧಿ ಹಸನಾಗುತ್ತದೆ. ಕರ್ತೃತ್ವ ಶಕ್ತಿ ಬೆಳೆಯುತ್ತದೆ, ನಿರ್ಧಾರದ ಮನೋವೃತ್ತಿ ಮೂಡುತ್ತದೆ. ಸುದೈವದಿಂದ ಜನ ಬೆಂಬಲ

ದೊರಕಿದರಂತೂ ಬೇಕಾದಷ್ಟು ಕಾರ್ಯ ಮಾಡಲು ಕಾರ್ಯಕ್ಷೇತ್ರ ವಿಸ್ತರಿಸಲು ಕಾರ್ಯಕರ್ತರಿಗೆ ಸಂಧಿ ದೊರಕುತ್ತದೆ.

ಇಂಥ ಅನುಕೂಲ-ಅನಾನುಕೂಲ ಅವಕಾಶಗಳಿಂದ ಹಿಗ್ಗದೆ, ಕುಗ್ಗದೆ, ಅಂಜದೆ, ಅಳುಕದೆ, ಕೇವಲ "ಕರ್ಮಣ್ಯೇವಾದಿಕಾರಸ್ತೇ ಮಾಫಲೇಷು ಕದಾಚನ" ಎಂಬ ಭಗವದುಕ್ತಿಯಂತೆ ದುಡಿಯುತ್ತ ಭಾರತದ ಅದರಲ್ಲಿಯೂ ಕರ್ನಾಟಕದ ಮಹಿಳೆಯರು ಸಾಧಿಸಿದ ಮತ್ತು ನೀಡಿದ ಕೊಡುಗೆಗಳನ್ನು ದಾಖಲಿಸಲು ಈ ಮಹಾಪ್ರಬಂಧ ಪ್ರಯತ್ನಿಸಿದೆ. ಆ ಮೂಲಕ ಆಧುನಿಕ ಮೈಸೂರು ಚರಿತ್ರೆಗೆ ಮಹಿಳಾ ಚರಿತ್ರೆಯ ಸ್ವರೂಪವನ್ನು ಗ್ರಹಿಸಿಕೊಳ್ಳಲು ಪ್ರಯತ್ನಿಸಲಾಗಿದೆ.

ಪಾಶ್ಚಾತ್ಯ ಶಿಕ್ಷಣದಿಂದ, ಚಿಂತನೆಯ ಪ್ರಭಾವದಿಂದ ಭಾರತದ ಶಿಷ್ಟವರ್ಗದಲ್ಲಿ ಬೆಳೆಯುತ್ತಿದ್ದ ವ್ಯಕ್ತಿ ಸ್ವಾತಂತ್ರ್ಯದ ಕಲ್ಪನೆ, ವಿಚಾರವಾದ, ಪ್ರಗತಿವಾದ, ವಿಜ್ಞಾನವಾದ ಮುಂತಾದವು ಭಾರತೀಯ ಸುಧಾರಣಾವಾದಿ ಹಾಗೂ ಪುನರುತ್ಥಾನವಾದಿ ಚಳುವಳಿಗಳೆರಡನ್ನೂ ಪ್ರಭಾವಿಸಿದೆ. ಭಾರತದಲ್ಲಿ ಈಗಾಗಲೇ ಅಸ್ತಿತ್ವದಲ್ಲಿದ್ದ ಸಾಮಾಜಿಕ ಆಚಾರಗಳು, ಮೌಲ್ಯಗಳು, ನೀತಿನಿಯಮಗಳು ಭಾರತೀಯ ಸಮಾಜದ ವಸಾಹತು ಕಲ್ಪನೆಯನ್ನು ಕಟ್ಟಿಕೊಟ್ಟು ವಸಾಹತುವಾದವನ್ನು ಸಮರ್ಥಿಸುತ್ತಿದ್ದವು. ಭಾರತವನ್ನು ಈ ವಸಾಹತು ಅವಸ್ಥೆಯಿಂದ ರಾಷ್ಟ್ರ ಅವಸ್ಥೆಗೆ ಪರಿವರ್ತಿಸುವಾಗ ಆಧುನಿಕತೆ, ರಾಷ್ಟ್ರ ವ್ಯಕ್ತಿತ್ವಕ್ಕೆ ಅನಿವಾರ್ಯವಾಯಿತು. ಸುಧಾರಣೆ ಈ ಪ್ರಕ್ರಿಯೆಯ ಒಂದು ಅಂತ್ಯವಾದರೆ ಪುನರುತ್ಥಾನ ಮತ್ತೊಂದು ಅಂತ್ಯವಾಯಿತು.

ವಸಾಹತುಶಾಹಿಯ ಕಾಲದ ಸುಧಾರಣಾವಾದಗಳಲ್ಲಿ ಸಾಮಾಜಿಕ ಸುಧಾರಣೆ ಒಂದು ಸಾಮಾನ್ಯ ಆಶಯವಾಗಿದ್ದರೂ ಈ ಸುಧಾರಣೆಯ ಕಲ್ಪನೆ ಸಾಮಾಜಿಕ ಸಂದರ್ಭಕ್ಕೆ ಅನುಗುಣವಾಗಿ ಬೇರೆ ಬೇರೆ ಇತ್ತು. ಬ್ರಾಹ್ಮಣ ಸಮಾಜದ ಸುಧಾರಕರಿಗೆ ಹೆಣ್ಣಿನ ಸ್ಥಾನಮಾನಕ್ಕೆ ಸಂಬಂಧಿಸಿದ ವಿಧವಾ ವಿವಾಹ, ಸತಿಪದ್ಧತಿ ಹಾಗೂ ಬಾಲ್ಯವಿವಾಹ ನಿರ್ಮೂಲನ, ಸ್ತ್ರೀ ಶಿಕ್ಷಣ ಇಂಥವು ಮುಖ್ಯವಾಗುತ್ತವೆ. ಇವುಗಳ ಜೊತೆಗೆ ಉಳಿದ ಸಾಮಾಜಿಕ ಅನಿಷ್ಟಗಳ ಬಗ್ಗೆ ಅವರಿಗೆ ಅರಿವು ಇದ್ದಿತಾದರೂ ಅವು ಚಳುವಳಿಯ ವಿಷಯಗಳಾಗುವುದಿಲ್ಲ. ಜಾತಿಭೇದವನ್ನು ಅವರು ವಿರೋಧಿಸಿದರು ವರ್ಣ ಪದ್ಧತಿಗೆ ಒಂದು ಸನಾತನ ವಿಚಾರಧಾರೆಯನ್ನು ಕಟ್ಟಿಕೊಂಡರು. ಆದರೆ ಜಾತಿಭೇದ ಬ್ರಾಹ್ಮಣೇತರ ಸಮಾಜ ಚಳುವಳಿಗಳಲ್ಲಿ ಮುಖ್ಯ ವಿಷಯವಾಗುತ್ತದೆ.

# ಪರಮಾರ್ಶಿತ ಗ್ರಂಥಗಳು

ಅವಲೋಕನ ಹೆಚ್.ಎಸ್.ಕೆ. ವಿಶ್ವ ಕನ್ನಡ ಸಮ್ಮೇಳನ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ಅರಿವು ಬರಹ 3, 1992 ಅರಿವು ಬರಹ ಟ್ರಸ್ಟ್ (ರಿ) ಮಂಗಳೂರು.

ಅರಿವು ಬರಹ 10, 1996 ಅರಿವು ಬರಹ ಟ್ರಸ್ಟ್ (ರಿ), ಮಂಗಳೂರು.

ಅರಿವು ಬರಹ 13, 1997 ಅರಿವು ಬರಹ ಟ್ರಸ್ಟ್ (ರಿ), ಮಂಗಳೂರು

ಅರಿವು ಬರಹ 14, 1998 ಅರಿವು ಕೊಣಾಜಿ ಟ್ರಸ್ಟ್ (ದ.ಕ), ಮಂಗಳೂರು

ಆರ್.ಕಲ್ಯಾಣಮ್ಮ ಹೆಚ್.ಎಸ್.ಪಾರ್ವತಿ, ಬೆಂಗಳೂರು

ಆಧುನಿಕ ಕರ್ನಾಟಕದ ಆಂದೋಲನಗಳು, ನವ್ಯ ಪ್ರಕಾಶನ, ತಿಪಟೂರು.

ಉಮಾಬಾಯಿಯವರ ಜೀವನ, ರಾ.ವೆ.ಕರಿಗುದರಿ, ಸಮಾಜ ಪುಸ್ತಕಾಲಯ, ಪ್ರಕಾಶನ ಹುಬ್ಬಳ್ಳಿ 1987.

ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕರ್ನಾಟಕ ಸಾಹಿತ್ಯ ಅಕಾಡೆಮಿ.

ಕುಟುಂಬ ಖಾಸಗಿ ಆಸ್ತಿ ಮತ್ತು ಉಗಮ ಏಂಗೆಲ್ಸ್ ಫೆಡ್ರಿಕ್, ಮಾಸ್ಕೋ ಪ್ರಗತಿ, ಪ್ರಕಾಶನ 1980.

ಕಲ್ಯಾಣ ಸರಸ್ವತಿ ಬಿ.ಎನ್.ಸುಮಿತ್ರಾಬಾಯಿ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

ಕರ್ನಾಟಕ ರಾಜ್ಯ ಗೆಸೆಟಿಯರ್ ಭಾಗ–1, ಸೂರ್ಯನಾಥ ಕಾಮತ್

ಕಮಲಾದೇವಿ ಚಟ್ಟೋಪಾಧ್ಯಾಯ ಸುಬ್ಬಣ್ಣ ಕೆ.ವಿ., ದೇಶಕಾಲ ಪ್ರಕಾಶನ 2005.

ದೇವದಾಸಿ ಸಂಪ್ರದಾಯ, ಜೋಗನ್ ಶಂಕರ್, ವಿಮೋಚನ ಪ್ರಕಾಶನ, ದೇವದಾಸಿ ಪುನರ್ವಸತಿ ಸಂಘ ಅಥಣಿ ಬೆಳಗಾವಿ 1993.

ಮಹಾಸತಿ ಆಚರಣೆ ಒಂದು ಅಧ್ಯಯನ, ಬಸವರಾಜ ಕಲ್ಗುಡಿ 1985, ಬೆಂಗಳೂರು ವಿ.ವಿ. ಬೆಂಗಳೂರು.

ಮಹಿಳೆಯರು, ಎಂ.ಕೆ.ಗಾಂಧಿ, ಪ್ರಕಾಶನ ಗಾಂಧಿ ಸ್ಮಾರಕ ನಿಧಿ, ಕುಮಾರ ಪಾರ್ಕ್ ರಸ್ತೆ, ಬೆಂಗಳೂರು–1.

ಮಾತೆ ಕಲ್ಯಾಣಮ್ಮ, ವೇದವತಿ ಆರ್, ರಜತ ಕಿರಣ, ಅಸೋಕ ಶಿಶುವಿಹಾರ, ರಜತ ಮಹೋತ್ಸವ ಸಂಚಿಕೆ.

ಯುದ್ಧದಲ್ಲಿ ಮೈಸೂರಿನ ಸಹಾಯ, 1914–18, ಮೈಸೂರು ಸರ್ಕಾರಿ ಮುದ್ರಣಾಲಯ 1921.

ಯಶೋಧರ ದಾಸಪ್ಪ ಮತ್ತು ಹೆಚ್.ಸಿ.ದಾಸಪ್ಪ ಜೀವನ ಸಾಧನೆ, ಬಿ.ಪ್ರಕಾಶನ, ಮೈಸೂರು 1998.

ಯಶೋಧರಮ್ಮ ದಾಸಪ್ಪ, ಕಾಮಾಕ್ಷಮ್ಮ ಇ.ಬಿ.ಹೆಚ್.ಪ್ರಕಾಶನ, ಗಾಂಧಿನಗರ, ಬೆಂಗಳೂರು.

ರಾಜಕಾರಣದಲ್ಲಿ ಮಹಿಳೆ, ಡಾ.ಎಂ.ಸಿ.ಸಿಂಗಮಾಳ್, ಅರ್ಚನಾ ಬುಕ್ ಹೌಸ್, ಬೆಂಗಳೂರು 2001.

ಸಾಮಾಜಿಕ ಹಿನ್ನಲೆಯಲ್ಲಿ ಮೈಸೂರು ರಾಜಕೀಯ ಕೆಲವು ಒಳನೋಟಗಳು, ಎಸ್.ಚಂದ್ರಶೇಖರ್, ಬೆಂಗಳೂರು 1989.

ಸ್ತ್ರೀವಾದದ ಸಾಂಸ್ಕೃತಿಕ ನೆಲೆಗಳು, ಗಾಯತ್ರಿ ನಾವಾಡ, ಧಾರವಾಡ ಸಾಹಿತ್ಯ ಪ್ರಕಾಶನ, 1994.

ಸೆಕ್ಯುಲರ್ ಪ್ರಭುತ್ವ ಧಾರ್ಮಿಕ ಹಿಂಸೆ ಒಂದು ಪ್ರತಿಕ್ರಿಯೆ, ಎಂ.ವಿ.ನಾಡಕರ್ಣಿ, ದೇಶಕಾಲ ಪ್ರಕಾಶನ 2005.

ಸ್ವಾತಂತ್ರ ಚಳುವಳಿಯಲ್ಲಿ ಮಹಿಳೆಯು ಡಾ.ಜಮುನ, ಹೆಚ್.ಬಿ.ಪಬ್ಲಿಶರ್, 1999.

ಸ್ವಾತಂತ್ರ ಸಂಗ್ರಾಮದಲ್ಲಿ ನಮ್ಮ ವೀರ ವನಿತೆಯರು, ಕಮಲಾಸಂಪಳ್ಳಿ ಭಾರತ್ ಸೇವಾದಳ ಕೈಪ್ಟನ್ ಲಕ್ಷ್ಮಿ ಪ್ರಿಂಟಿಂಗ್ ಪ್ರೆಸ್, ಕುಮಾರಕೃಪಾ ರಸ್ತೆ, ಬೆಂಗಳೂರು-1.

ಸಾಮಾಜಿಕ ಚಳುವಳಿ, ಮಣಿಪಾಲ ಆರ್ಕೆ, ನವಕರ್ನಾಟಕ ಪ್ರಕಾಶನ 1997.

**ಪತ್ರಿಕೆಗಳು**

ಸತ್ಯವಾದಿ ಪತ್ರಿಕೆಗಳು

ಪೌರವಾಣಿ ಪತ್ರಿಕೆಗಳು

ಸಾಧ್ವಿ ಪತ್ರಿಕೆಗಳು

ಸರಸ್ವತಿ ಪತ್ರಿಕೆಗಳು

ಸೋದರಿ ಪತ್ರಿಕೆಗಳು

ವಿಶ್ವ ಕರ್ನಾಟಕ ವಾರಪತ್ರಿಕೆಗಳು

ಸಂಯುಕ್ತ ಕರ್ನಾಟಕ

Administration report of Mysore 1881-1942 – Mysore Govt. Press.

Address Dewans of Mysore Dasara Representative Assembly from 1881-1899 Vol.I.

Address Dewans of Mysore Dasara Representative Assembly from 1900-1912 Vol.II.

Address Dewans of Myosre to Mysore Representative Assembly from 1913-1938 Vol.III.

Bureau of Education India 1923-24 Govt. of India.

C.R.Reddy Report on Education in Mysore state. Camp Avandale, 10, Richmond Road Civil Station Bangalore, 13/5/1949.

Cronological table of all regulation of the Govt. of Mysore from 1883-85 Govt. Press, Mysore 1896.

Census of India 1891 Mysore Vol.XXV Part I report.

Census of India 1901 Mysore vol.XXIV part 1 report.

Census ofIndia 1911 Mysore Vol.XXI part I & II reports.

Census of India 1921 Mysore vol.XXIII Part I report.

Census of India 1931 Mysore Vol. XXV Part 1 report.

FNR relatd to Independence Satyagra 1/1/1938 to 7/4/1938 Bangalore.
Five year plans.

First Mysore Civil and Social Conference Report 1917, Bangalore 1917.

Great Men and Women of India, Ministry of Information and Broadcasting Govt. of India.

Govt. of H.H.Maharaja of Mysore, The Mysore Educational Manual Vol.IV Paprt I March 1941.
No.19, Congress Convention Shivapur 1938.

Palace Adminsitration Report 1927-1948. Printed at Govt. Branch.

Procedings of the Mysore Representative Assembly Dasara Session October 1913-38. Printed at Govt. Branch Press.
Procedings of the Mysore Legislative Council March Session 1930, Bangalore.
Procedings of the Mysore Legislative Council December Session 1932 Bangalore. Printed at the Govt. Press 1933.

Procedings of the Mysore Representative Assembly June 1930 (Birthday Session) Mysore. Printed at the Govt. Branch Press 1930.

